ನೆಮ್ಮದಿಯ ನಾಳೆ ನಮ್ಮದು

# ಹೊಸತು



ಫೆಬ್ರವರಿ ೨೦೦೨

ಬೆಲೆ ರೂ. ೧೦

ಶಾಂತಿಪ್ರಿಯ ವಿಜ್ಞಾನಿ ಸತೀಶ್ ಧಾವನ್

ಈ ಫ್ರೋಟೋ ಯಾರನ್ನು ಹತ್ತಿಕ್ಕಲು ?

ಷೇಕ್ಸ್‌ಪಿಯರ್ ಊರಿನಲ್ಲಿ ಸುತ್ತಾಟ

ಸೀಬರ್ಡ್ ನಿರಾಶ್ರಿತರ ಬವಣೆ

ಬೆಳ್ಳಿ ಕೂದಲ ಕೆಂಪು ಕವಿ



# ಹೊಸತು

## ಒಳಗೇನಿದೆ.....




*ಚಿತ್ರಗಳು : ಪಿ. ಮಹಮ್ಮದ್, ಸತೀಶ್ ಯಲ್ಲಾಪುರ, ಹರಿಣಿ, ಜೆ. ಎಂ. ಬೊಮ್ನಳ್ಳಿ, ರವಿಕುಮಾರ್ ಅಜ್ಜೀಪುರ ಬಿ. ವಿಲ್ಸನ್, ಉಮೇಶ್, ಶ್ರೀಹರಿ*
*ಮುಖಚಿತ್ರ : ಕೆ. ಪಿ. ಸ್ವಾಮಿ*
*ವಿನ್ಯಾಸ : ನವಕರ್ನಾಟಕ ವಿನ್ಯಾಸ*
*ಸುಭಾಷ್ ಮುಖ್ಯೋಪಾಧ್ಯಾಯ. ಚಿತ್ರ ಸೌಜನ್ಯ : ಅಗ್ರಹಾರ ಕೃಷ್ಣಮೂರ್ತಿ*
*ಕಚೇರಿ ಸಹಕಾರ : ಜೆ. ವಿ. ತೇಜೋವತಿ*


## ಈ ತಿಂಗಳು

**'ನೊಬೆಲ್ ಸಾಮಗ್ರಿ'** ಅನಂತಮೂರ್ತಿ ಅಷ್ಟವಿಘ್ನಗಳ ನಡುವೆಯೂ ತುಮಕೂರಿನಲ್ಲೇ ನಡೆಯಲಿರುವ ಕನ್ನಡ ಸಾಹಿತ್ಯ ಸಮ್ಮೇಲನದ ಅಧ್ಯಕ್ಷರಾಗಿ 'ಚುನಾಯಿತ'ರಾಗಿರುವುದನ್ನು ಪಾಟೀಲ ಪುಟ್ಟಪ್ಪನವರು ಸಹ ಸ್ವಾಗತಿಸಿರುವುದು ಇಡೀ ಪ್ರಕರಣದ ಗೂಢ ಮೂಲೆಗಳ ಪರಿಚಯ ನೀಡುತ್ತದೆ. ತಾವಾಗಲಿಲ್ಲವೆಂಬ ಸೊರಗು ಪಾಪು ಉದ್ಗಾರಕ್ಕೆ ಒಂದು ಕಾರಣವಾದರೆ, ಇಂತಹ ಚುನಾವಣೆಯಲ್ಲದ ಚುನಾವಣೆಯಲ್ಲಿ ಅನಂತಮೂರ್ತಿ ಪಟ್ಟಾಧೀಶರಾಗಬೇಕಾಯಿತೆಂಬ ಆತಂಕ ಇನ್ನೊಂದು ಕಾರಣ. ಪೇಜಾವರರ ಸಮ್ಮುಖದಲ್ಲಿ ಉಡುಪಿಯಲ್ಲಿ 'ಉಪನ್ಯಾಸ' ನೀಡಿದ ಮಾರನೆ ದಿನ ಪುನರೂರರ ಚಾಕಚಕ್ಯತೆಯಿಂದ ಬೆಂಗಳೂರಲ್ಲಿ ಅನಂತಮೂರ್ತಿ ಆಯ್ಕೆಯಾಗಿರುವುದು ಕೇವಲ ಕಾಕತಾಳೀಯವೇ ಎಂಬ ಅನುಮಾನ ಗಟ್ಟಿಯಾದುದು. ಪುನರೂರು ಆಸ್ಥಾನವನ್ನು ತ್ಯಜಿಸಿದ ಪುಂಡಲೀಕ ಹಾಲಂಬಿ ಸ್ಥಾನವನ್ನು ಇನ್ನೊಬ್ಬ ಕಾರ್ಯದರ್ಶಿ ಪಟ್ಟಾಗಿ ಹಿಡಿದಿದ್ದಾರೆಂಬ ಸಂಗತಿಯೊಂದಿದೆ. ಮುಖ್ಯವಾಗಿ ಗಮನಿಸಬೇಕಾದ ಅಂಶಗಳಿವು: ಪುನರೂರರಂತಹ ಸಾಹಿತ್ಯ ಅನಾಸಕ್ತರು ಪರಿಷತ್ತಿಗೆ ಅಧ್ಯಕ್ಷರಾಗಬಹುದಾದಂತಹ ವಿಕಟ ಸನ್ನಿವೇಶ, ಅವರನ್ನು ಗೆಲ್ಲಿಸಲು ಶ್ರಮಿಸಿದ ಪುಂಡಲೀಕರು ರಾಜಿನಾಮೆ ನೀಡಬೇಕಾಗಿ ಬಂದಂತಹ ಸಂದರ್ಭ, ಮತ್ತು ಸಮ್ಮೇಲನವೆಂಬ ಜಾತ್ರೆಗೆ ಅಧ್ಯಕ್ಷರ ಆಯ್ಕೆಯ ವಿಧಾನ. ಸಮ್ಮೇಲನಾಧ್ಯಕ್ಷರಿಗೆ ಈಚಿನ ಕೆಲವು ವರ್ಷಗಳಿಂದ ನೀಡಲಾಗುತ್ತಿರುವ ಒಂದಿಷ್ಟು ಉಂಬಳಿ ಈ ವರ್ಷದ ಆಯ್ಕೆಯ ಹಿಂದೆ ಕರಾಮತ್ತು ನಡೆಸಿದ್ದರೆ ಆಶ್ಚರ್ಯವಿಲ್ಲ. ಅದು ಬೇರೆ ಮಾತು: ಸದ್ಯಕ್ಕೆ ಬೆಂಗಳೂರಲ್ಲಿ ಡಾಲರ್ ಕಾಲನಿ ಇರುವಂತೆ ಒಂದು ಯೂರೋ ಕಾಲನಿ ಇನ್ನೂ ಅಸ್ತಿತ್ವಕ್ಕೆ ಬಂದಿಲ್ಲವಲ್ಲ !

ಸಮ್ಮೇಲನಾಧ್ಯಕ್ಷರನ್ನು ಒಂದು ರೀತಿಯ ಸರ್ವಾನುಮತದಿಂದ ಆಯ್ಕೆ ಮಾಡುವ ಪ್ರಕ್ರಿಯೆಯನ್ನು ಆಗುಮಾಡಲು ಅಸಮರ್ಥರಾಗಿರುವ ಅಧ್ಯಕ್ಷರನ್ನು ಸಾಹಿತ್ಯ ಪರಿಷತ್ತು ಇಂದು ಹೊಂದಿದೆ. ಇಂಥವರಿಗೇ ಮತ ನೀಡಿ ಎಂಬ ಆದೇಶ ನೀಡುವ ಎದೆಗಾರಿಕೆ ಅವರಿಗಿದೆ ಎಂದರೆ ಸಂತಸಪಡಬೇಕೋ, ಭಯಪಡಬೇಕೋ ಎಂಬುದನ್ನು ಸಾರ್ವಜನಿಕರು ತೀರ್ಮಾನಿಸಬೇಕು. ಎರಡನೆಯದಾಗಿ, ಚುನಾವಣೆಯನ್ನು ಪರಿಪೂರ್ಣ ರೂಪದಲ್ಲಿ ನಡೆಸಲಾಗದ ವ್ಯವಸ್ಥೆ ಪರಿಷತ್ತಿನಲ್ಲಿದೆ. ಇಂತಿಷ್ಟು ಅಭ್ಯರ್ಥಿಗಳಿದ್ದರೆಂದು ಘೋಷಿಸುವ ದುರಂತಮಯ ಚಿತ್ರ ಕರ್ನಾಟಕದ ಸಾಂಸ್ಕೃತಿಕ ಜೀವನವನ್ನು ನಡುಗಿಸಬೇಕು. ಯಾರಿಗಾದರೂ ಮತ ನೀಡುವ ಸಂದರ್ಭ ಬಂದರೆ, ಮೊದಲು ಅವರೆಲ್ಲಾ ಅಭ್ಯರ್ಥಿಗಳಾಗಲು ಸಮ್ಮತಿಸಿದ್ದಾರೆಯೆ ಎಂಬ ಪ್ರಶ್ನೆ ಬರುತ್ತದೆ. ಆಮೇಲೆ, ನಾಲ್ಕು ಅಭ್ಯರ್ಥಿಗಳಿದ್ದರೆ ಚುನಾವಣೆ ಮೂರು ಬಾರಿ ನಡೆದು ಬಹುಮತದ ಗಣನೆಯಾಗಬೇಕು; ಕೇವಲ ೧೨ ಮತ ಗಳಿಸಿದವರು ಬಹುಜನರಿಂದ ಆಯ್ಕೆಗೊಂಡರೆಂಬ ಯೋಗ್ಯತೆ ಗಳಿಸುವುದಿಲ್ಲ. ಅತಿಕಮ್ಮಿ ಮತ ಪಡೆದವರನ್ನು ಹೊರತುಪಡಿಸಿ ಉಳಿದ ಮೂವರ ಪೈಕಿ ಚುನಾವಣೆ ನಡೆಸಬೇಕು, ಅವರಲ್ಲಿ ಮೂರನೆಯ ಸ್ಥಾನ ಪಡೆದವರನ್ನು ಬಿಟ್ಟು ಮತ್ತೆ ಇಬ್ಬರ ನಡುವೆ ಸ್ಪರ್ಧೆ ಆಗಬೇಕು. ಅದರಲ್ಲಿ ಗೆದ್ದವರು ಮಾತ್ರವೇ ಬಹುಮತ ಪಡೆದವರಾಗಲು ಸಾಧ್ಯ. ನಮ್ಮ ಪಾರ್ಲಿಮೆಂಟ್ - ಶಾಸನಸಭೆ ಚುನಾವಣೆಗಿಂತಲೂ ಕಳಪೆಮಟ್ಟದ ಚುನಾವಣೆಯಲ್ಲಿ ಅನಂತಮೂರ್ತಿ ಆಯ್ಕೆಯಾದರೆ ಪರಿತಾಪಕ್ಕೆ ಕಾರಣವಿದೆ. ಅವರಿಗೆ ದೊರೆತಿರುವುದು ತೇರ್ಗಡೆಯ ಅಂಕವಾದ ಶೇ. ೩೫ ಕ್ಕಿಂತಲೂ ಕಡಿಮೆ ಮತಗಳು ! ನಮ್ಮ ಸಮ್ಮೇಳನಾಧ್ಯಕ್ಷರ ದರ್ಜೆ ಅದೇ ಏನು ?

ಸಾರಾಂಶವಿಷ್ಟೆ : ಸಾರ್ವಜನಿಕ ಬೊಕ್ಕಸದಿಂದ ಲಕ್ಷಗಟ್ಟಲೆ ಹಣ ಪಡೆಯುವ ಸಂಸ್ಥೆಯಲ್ಲಿ ಈ ಮಟ್ಟದ ಪ್ರಜಾಪ್ರಭುತ್ವ ಸಾಧುವಲ್ಲ. ಇಡೀ ಕರ್ನಾಟಕವನ್ನು ಪ್ರತಿನಿಧಿಸುವ ಸಂಸ್ಥೆ ಆದಾಗಬೇಕಾದರೆ ಅದಕ್ಕೆ ತುರ್ತಿನ ಕಾಯಕಲ್ಪ ಅಗತ್ಯವಿದೆ. ಸಾಂಸ್ಕೃತಿಕ ಸಂಘಟನೆಯ ಹೊಣೆ ಹೊರಬೇಕಾದ ಸಂಸ್ಥೆಯಲ್ಲಿ ಸಮ್ಮೇಳನಾಧ್ಯಕ್ಷರು ಯಾರಾಗಬೇಕೆಂಬುದನ್ನು ಹಣಾಹಣಿ ಕುಸ್ತಿಯ ಆಧಾರದ ಮೇಲೆ ನಿರ್ಧರಿಸುವುದು ನಮ್ಮ ಬೌದ್ಧಿಕ ಬಂಜೆತನದ ಕುರುಹಾಗಿದೆ. ಸ್ವ-ಇಚ್ಛೆಯಿಂದ ಚುನಾವಣೆಯ ಕಣಕ್ಕಿಳಿಯದೆಯೇ "ಸೋಲುವ" ಅಭ್ಯರ್ಥಿಗಳು ಇನ್ನು ಮುಂದೆ ಮಾನನಷ್ಟ ಮೊಕದ್ದಮೆ ಹೂಡುವಂತಾದರೆ ಪರಿಷತ್ತು ಏನು ಮಾಡಬೇಕು ? ಪುನರೂರು ಮತ್ತು ಅವರ ಪರಿವಾರ ಈಗಿಂದೀಗಲೆ ಪರಿಷತ್ತಿನಿಂದ ನಿರ್ಗಮಿಸಲು ಇದೊಂದು ಕಾರಣ ಸಾಲದೆ ?

ತಿಂಗಳ ಪತ್ರಿಕೆ

ಹೊಸತು

ನಿಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ



ಸಂಪುಟ-೩ ಸಂಚಿಕೆ - ೭ ಫೆಬ್ರವರಿ ೨೦೦೨

*ಪ್ರಧಾನ ಸಂಪಾದಕ*

ಜಿ. ರಾಮಕೃಷ್ಣ

*ಸಂಪಾದಕ ಮಂಡಲಿ*

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಸ್. ಪಾರ್ಥಸಾರಥಿ
ಮಲ್ಲೇಪುರಂ ಜಿ. ವೆಂಕಟೇಶ್
ಬಿ. ವಿ. ವೀರಭದ್ರಪ್ಪ
ಟಿ. ಶ್ರೀನಿವಾಸರಾಜು
ಕೆ. ಪಿ. ಸ್ವಾಮಿ

*ವ್ಯವಸ್ಥಾಪಕರು*

ಎಸ್. ಸುರೇಂದ್ರ
ಎ. ಆರ್. ಉಡುಪ

*ಮುದ್ರಕ-ಪ್ರಕಾಶಕ*

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

*ಮುದ್ರಣ*

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೮೩೯೭೪೨೬

*ಹೊಸತು ಕಚೇರಿಯ ವಿಳಾಸ*




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೦೩೫೮೦ / ೮೧ / ೮೨
e-mail : nkp@bgl.vsnl.net.in

## ಸಂಪಾದಕೀಯ

# ಭಾರತಕ್ಕೆ ಇಂತಹ ದುಃಸ್ಥಿತಿಯೆ ?

ರಥಯಾತ್ರಾ ಪ್ರವೀಣರಾದ ಅಡ್ವಾನಿಯವರ ಈಚಿನ ಎರಡು 'ಸಾಧನೆಗಳು' ನಮ್ಮನ್ನು ಬಡಿದೆಬ್ಬಿಸಬೇಕು : ಸಾರ್ವಭೌಮ ಭಾರತದ ಕೇಂದ್ರ ಗೃಹಮಂತ್ರಿಗಳ ಪೈಕಿ ಮೊಟ್ಟಮೊದಲ ಆಹ್ವಾನಿತನಾಗಿ ಅಮೆರಿಕಾಕ್ಕೆ ತೆರಳಿ ಅಲ್ಲಿಯ ಕೇಂದ್ರ ಗುಪ್ತಚಾರ ಸಂಸ್ಥೆಯ ನಿರ್ದೇಶಕನೊಡನೆ ಮಾತುಕತೆ ನಡೆಸಿಬಂದದ್ದು ಮತ್ತು ಆಯೋಧ್ಯೆ ಧ್ವಂಸದ ಪ್ರಕರಣದಲ್ಲಿ ಲಿಬರ್ಹಾನ್ ಆಯೋಗದ ಮುಂದೆ ಹಸಿಸುಳ್ಳಿನ ಸಾಕ್ಷ್ಯ ನೀಡಿದ್ದು. ಇಡೀ ಪ್ರಪಂಚಕ್ಕೆ ತಿಳಿದಿರುವಂತೆ ಅಡ್ವಾನಿಯವರ ಪಕ್ಷವು ಚುನಾವಣೆಗಳಲ್ಲಿ ಮುನ್ನಡೆ ಸಾಧಿಸಲು ಬಳಸಿದ ಪ್ರಬಲವಾದ ತಂತ್ರ ರಥಯಾತ್ರೆ, ಇಟ್ಟಿಗೆ ಪೂಜೆ, ಧರ್ಮಸಂಸತ್ತು, ಮಸೀದಿ ಧ್ವಂಸ, ಮಂದಿರ ನಿರ್ಮಾಣದ ಅಬ್ಬರ, ಇತ್ಯಾದಿ. ಆದರೆ ಲಿಬರ್ಹಾನ್ ಆಯೋಗದ ಮುಂದೆ ಸಾಕ್ಷ್ಯ ನೀಡುವಾಗ, ಹಿಂದೆ ಅವರ ಪಕ್ಷದ ಅಧ್ಯಕ್ಷರೂ ಆಗಿದ್ದು ಕಾರ್ಯತಂತ್ರಗಳನ್ನು ರೂಪಿಸಿದ್ದ ಅಡ್ವಾನಿಯವರು ಹೇಳಿದ್ದಿದು : ''ಅಯೋಧ್ಯೆಯಲ್ಲಿ ಮಸೀದಿಯನ್ನು ಧ್ವಂಸ ಮಾಡಿದ್ದರಿಂದ ರಾಜಕೀಯವಾಗಿ ನಮ್ಮ ಪಕ್ಷದ ಬೆಳೆವಣಿಗೆಯ ಅವಕಾಶಗಳಿಗೆ ತೊಂದರೆ ಉಂಟಾಯಿತು.'' ಈ ಹೇಳಿಕೆಯ ಹಿಂದಿನ ತಂತ್ರವನ್ನು ವಿಶ್ಲೇಷಣೆ ಮಾಡಿಕೊಳ್ಳಬೇಕು. ಮುಂದೆ ಅವರ ಮೇಲೆ ಬರಬೇಕಾಗಿರುವ ಆರೋಪದ ಪಟ್ಟಿ ಮತ್ತು ವಿಚಾರಣೆಗಳಿಗೆ ಈಗಲೇ ಅವರು ಸ್ವಯಂ ರಕ್ಷಣಾ ಭೂಮಿಕೆಯನ್ನು ಸಿದ್ಧಪಡಿಸಿಕೊಳ್ಳುತ್ತಿದ್ದಾರೆ. ಇಂತಹ ಬುದ್ಧಿವಂತಿಕೆಯವರು ನಮ್ಮ ಗೃಹಮಂತ್ರಿಯಾಗಿ ಪೋಟೋ ಆಯುಧವನ್ನು ಬತ್ತಳಿಕೆಯಲ್ಲಿಟ್ಟುಕೊಂಡಿದ್ದಾರೆಂದರೆ ಇಡೀ ದೇಶವು ಗಂಭೀರವಾಗಿ ಭವಿಷ್ಯದ ಬೆಳೆವಣಿಗೆಗಳ ಸಾಧ್ಯತೆಯನ್ನು ಗುರುತಿಸಬೇಕು. ಎರಡನೆಯದು ಇನ್ನೂ ಹೆಚ್ಚು ಗಂಡಾಂತರಕಾರಿ ಸಂಗತಿ. ಅವರು ವಿರೋಧ ಪಕ್ಷದಲ್ಲಿದ್ದಷ್ಟೂ ಕಾಲ ಅಡ್ವಾನಿ-ವಾಜಪೇಯಿ ಘೋಷಣೆ ಅಲಿಪ್ತ ನೀತಿಯ ವಿರುದ್ಧವಾಗಿಯೇ ಇತ್ತು. ಇಂಡೊನೇಷ್ಯಾದಲ್ಲಿ ಹತರಾದ ಲಕ್ಷಕ್ಕೂ ಹೆಚ್ಚು ಕಮ್ಯುನಿಸ್ಟರಿಗೆ ಸುಹಾರ್ತೊ ಮುಖಾಂತರ ಅಮೆರಿಕಾ ಸರಿಯಾದ ಪಾಠ ಕಲಿಸಿತೆಂದು ಬಹಿರಂಗವಾಗಿ ಹೇಳಿದ್ದ ಈ ರಾಜಕಾರಣಿಗಳು 'ಅಮೆರಿಕಾವು ವಿಯೆಟ್ನಾಂನಲ್ಲಿ ಭಾರತದ ಯುದ್ಧವನ್ನು ನಡೆಸುತ್ತಿದೆ' ಎಂಬ ಅತ್ಯಂತ ಮಾರ್ಮಿಕ ಮತ್ತು ಕ್ಷುದ್ರ ಮಾತುಗಳನ್ನಾಡಿದ್ದರು. ಚಿಲಿಯ ಅಧ್ಯಕ್ಷ ಅಲೆಂಡೆಯನ್ನು ಅಮೆರಿಕಾ ಸಾಯಿಸಿದಾಗ ಇವರು ಅದನ್ನು ಖಂಡಿಸುವ ಪಾಪ ಮಾಡಿದವರಲ್ಲ! ಅಂತಹ ನೂರು ಪ್ರಸಂಗಗಳನ್ನು ಹೆಸರಿಸಬಹುದು, ಆದರೆ ಅದರ ಅಗತ್ಯವಿಲ್ಲ. ನಮ್ಮ ದೇಶದ ಮೌಲ್ಯಯುತವಾದ ಅಲಿಪ್ತ ನೀತಿಯನ್ನು ಅಮೆರಿಕಾದ ಡಲೆಸ್ ''ಅನೀತಿಯ ನೀತಿ''ಯೆಂದು ಜರಿದಾಗ ಅವನಿಂದ ಪಾಠ ಕಲಿತ ವಾಜಪೇಯಿ-ಅಡ್ವಾನಿ ನಮ್ಮ ವಿದೇಶಾಂಗ ನೀತಿಯನ್ನು ''ನೈಜ ಅಲಿಪ್ತ ನೀತಿ''ಯನ್ನಾಗಿ ಮಾರ್ಪಾಟು ಮಾಡಬೇಕೆಂದು ಒತ್ತಾಯಿಸುತ್ತಲೇ ಬಂದಿದ್ದರು. ಅವರ ಪಕ್ಷ ಮತ್ತು ಅಮೆರಿಕಾದ ಅಂತಸ್ಸಂಬಂಧಗಳ ಬಗ್ಗೆ ಅರಿವಿಲ್ಲದಿದ್ದವರಿಗೆ ಈಗ ಅಡ್ವಾನಿ ಪಕ್ಷದ ಅಲಿಪ್ತ ನೀತಿ ಎಂದರೇನು ಎಂಬುದು ಸಂಪೂರ್ಣವಾಗಿ ತಿಳಿಯುವಂತಾಗಿದೆ. ಅದು ಅಮೆರಿಕಾದ ಅಪ್ಪುಗೆಯಲ್ಲಿರುವುದು ಮತ್ತು ಭಾರತದ ಸಾರ್ವಭೌಮತ್ವವನ್ನು ಅಮೆರಿಕಾದ ಅಡಿಯಾಳನ್ನಾಗಿಸುವುದು.

ಎಲ್ಲ ದೇಶಗಳಲ್ಲೂ ಜನವಿರೋಧಿ ಬುಡಮೇಲು ಕೃತ್ಯಗಳಿಗೆ ಕುಖ್ಯಾತವಾದ ಸಿ.ಐ.ಎ. ಕೇಂದ್ರಕಛೇರಿಗೆ ನಮ್ಮ ಕೇಂದ್ರ ಗೃಹಮಂತ್ರಿ ಹೋಗುವುದರ ಅರ್ಥ ನಮ್ಮ ದೇಶದ ಮೇಲಿನ ಭಯೋತ್ಪಾದಕತೆಯನ್ನು ಎದುರಿಸಲು ಸಂಧಾನವೆಂದು ಭಾವಿಸುವುದು ಬಾಲಿಶ ವಿಶ್ಲೇಷಣೆಯಾಗುತ್ತದೆ. ಬೇರಿನ್ನಾವ ದೇಶದ ಗೃಹಮಂತ್ರಿಗೂ ಇಲ್ಲದ ಮನ್ನಣೆ ಅಡ್ವಾನಿಯವರಿಗೆ ಸಿ.ಐ.ಎ. ನಿರ್ದೇಶಕನಿಂದ ದೊರೆತಿದೆಯೆಂದರೆ ಭಾರತದಲ್ಲಿ ಜನಪರ ಕಾಳಜಿ ಹೊಂದಿರುವ ಶಕ್ತಿಗಳು ಮತ್ತು ಪಕ್ಷಗಳು ಎಚ್ಚೆತ್ತುಕೊಳ್ಳಬೇಕಾದ ಸಂದರ್ಭ ಬಂದಿದೆ ಎಂದರ್ಥ. ನಮ್ಮ ಸೈನ್ಯದ ಕಾರ್ಯಾಚರಣೆಗಳ ಬಗೆಗೆ ಕೂಡ ಅಮೆರಿಕಾ ಆದೇಶ ನೀಡುತ್ತದೆ, ನಮ್ಮ ಸರ್ಕಾರವು ಯಾವುದೋ ಉಚ್ಚ ಸೈನ್ಯಾಧಿಕಾರಿಯನ್ನು ಅಮಾನತ್ತಿನಲ್ಲಿ ಇಡುತ್ತದೆ, ದಿನಬೆಳಗಾದರೆ ಅಮೆರಿಕಾದ ವಿದೇಶಾಂಗ ಸಚಿವ (ಆತನೂ ಮಿಲಿಟರಿ ದಂಡಾಧಿಕಾರಿಯಾಗಿದ್ದವನೇ!) ದೂರವಾಣಿಯಲ್ಲಿ ಭಾರತದ ಸರ್ಕಾರಕ್ಕೆ ಹೀಗೆ ಮಾಡಿ – ಹಾಗೆ ಮಾಡಿ ಎಂದು ಆಜ್ಞೆ ನೀಡುತ್ತಾನೆ ಮತ್ತು ಇವರು ನಿಗರ್ವಿಗಳಾಗಿ ಅದನ್ನು ಪಾಲಿಸುತ್ತಾರೆ! ಸ್ವತಂತ್ರ ಭಾರತಕ್ಕೆ ಇಂತಹ ದುಃಸ್ಥಿತಿ ಬರುತ್ತದೆಯೆಂದು ಯಾರೂ ನಿರೀಕ್ಷಿಸಿರಲಿಲ್ಲ, ಆದರೆ ರಾಷ್ಟ್ರೀಯತೆಯು ತಮ್ಮ ರಕ್ತದಲ್ಲಿ ಸಾಂದ್ರವಾಗಿದೆಯೆಂದು ಪೊಳ್ಳು ಕೂಗು ಕೊಡುತ್ತಿದ್ದ ವಾಜಪೇಯಿ ಪಕ್ಷ ಭಾರತವನ್ನು ಅಂತಹ ಘೋರಕೂಪಕ್ಕೆ ತಳ್ಳಿದೆ. ಪ್ರಮೋದ ಮಹಾಜನ್ ಎಂಬ ಇನ್ನೊಬ್ಬ ಸಚಿವರ ಹಾಸ್ಯ ಪ್ರಜ್ಞೆ ಎಷ್ಟು ಅದ್ಭುತವಾಗಿದೆಯೆಂದರೆ ಇತ್ತೀಚೆಗೆ ಉದ್ಯಮಿಗಳ ಅಧಿವೇಶನದಲ್ಲಿ ಮಾತನಾಡುತ್ತಾ ಆತ ಹೇಳಿದ್ದಿದು : ''ಶೂನ್ಯ ಮತ್ತು ಮಾಹಿತಿ ತಂತ್ರಜ್ಞಾನ ಭಾರತದ ಉದಾತ್ತ ಸಾಧನೆಗಳಲ್ಲಿ ಎರಡು. ತಾನೂ ಬ್ರಿಟನ್ನಿನ ಆಳ್ವಿಕೆಗೆ ಒಳಪಡದೆ ಎಂತಹ ನಷ್ಟವಾಯಿತೆಂದು ಚೀಣಾಕ್ಕೆ ಈಗ ಮನವರಿಕೆಯಾಗಿರಬೇಕು!'' ಟೋನಿ ಬ್ಲೇರ್ ಈ ಮಾತನ್ನು ಕೇಳಿ ಮನದಲ್ಲಿ ಮುದವನ್ನು ಅನುಭವಿಸಿರಬಹುದು, ಆದರೆ ಭಾರತದ ಪ್ರಜೆಗೆ ಇದು ವಿಷ ಎಂಬುದರಲ್ಲಿ ಸಂದೇಹವಿಲ್ಲ.

ಕಠ್ಮಂಡುವಿನ ಸಮ್ಮೇಳನದ ಸಂದರ್ಭದಲ್ಲಿ ಭಾರತ-ಪಾಕಿಸ್ತಾನಗಳ ವಿದೇಶಾಂಗ ಸಚಿವರು ಕಲೆತು ಮಾತನಾಡಬೇಕೆಂದು ಕಾಲಿನ್ ಪವೆಲ್ ಹೇಳಿದ್ದಕ್ಕೆ ಭಾರತ ಸಮ್ಮತಿಸಿತಾದರೂ ಸಭೆ ನಡೆಯಲಿಲ್ಲವೆಂಬ ಸುಳ್ಳನ್ನು ಈಗಲೂ ದೆಹಲಿಯ ವಕ್ತಾರರು ಉಸುರುತ್ತಿದ್ದಾರೆ. ನೆರೆರಾಷ್ಟ್ರದ ಸಚಿವರನ್ನು ಭೇಟಿಯಾಗಲು ಅಮೆರಿಕಾದ ಒತ್ತಡವು ಕಾರಣವಾಗಬೇಕೆ? ಮತ್ತು ಮಾತುಕತೆ ನಡೆಸಿದರೆ ಅದನ್ನು ಮುಚ್ಚಿಡಬೇಕೆ? ನಮ್ಮ ಅಲಿಪ್ತ ನೀತಿಯ ಹತ್ತಾರು ವರ್ಷಗಳಲ್ಲಿ ಇಂತಹ ಹೀನಾಯ ಪರಿಸ್ಥಿತಿ ಭಾರತಕ್ಕೆ ಎಂದೂ ಬಂದಿರಲಿಲ್ಲವೆಂಬುದು ಮಾತ್ರ ಖಚಿತ. ಇಂದಿನ ಸನ್ನಿವೇಶದಲ್ಲಿ ಇನ್ನೂ ಒಂದೆರಡು ವಿಪತ್ಕಾರಿ ಅಂಶಗಳಿವೆ: (ಅ) ಭಾರತದಲ್ಲಿ ನೆಲೆ ನೀಡುವುದಿಲ್ಲವೆಂದು ಹೇಳುತ್ತಿರುವಾಗಲೆ ಅಮೆರಿಕಾದ ಮಿಲಿಟರಿ ನೌಕೆಗಳಿಗೆ ಎಲ್ಲ ಸೌಲಭ್ಯಗಳನ್ನೂ ನೀಡಲಾಗಿದೆ; (ಆ) ಅಮೆರಿಕಾದ ಸೈನಿಕರು ಹಾಗೂ ಮಿಲಿಟರಿ ನೆಲೆಗಳು ಪಾಕಿಸ್ತಾನ ಮತ್ತು ಆಫ್ಘಾನಿಸ್ತಾನಗಳಲ್ಲಿ ಹೆಚ್ಚುಕಮ್ಮಿ ಶಾಶ್ವತವಾಗಿ ಉಳಿಯುವ ಯೋಜನೆ ಕಾರ್ಯಗತವಾಗಿದೆ; ಮತ್ತು (ಇ) ನೇಪಾಳದ ರಾಜಕೀಯದಲ್ಲಿ ನೇರವಾಗಿ ತಲೆತೂರಿಸಿ ಅಮೆರಿಕಾವು ಆ ದೇಶದ ಜನಪರ ಹೋರಾಟಗಾರರಾದ ಕಮ್ಯುನಿಸ್ಟರನ್ನು ಸದೆಬಡಿಯಲು ನೆರವು ನೀಡುವುದಾಗಿ ಹೇಳಿದೆ. ಇದಕ್ಕೆ ಭಾರತದ ಸರ್ಕಾರವು ಯಾವ ಪ್ರತಿಭಟನೆಯನ್ನೂ ನೀಡಿಲ್ಲ. ಇಂದು ನೇಪಾಳ, ನಾಳೆ ಭಾರತ. ಇದನ್ನು ನೆನಪಿನಲ್ಲಿಡೋಣ.

ಭಾರತೀಯ ಜನತಾ ಪಕ್ಷದ ನೇತೃತ್ವದಲ್ಲಿ ನಮ್ಮ ಆಂತರಿಕ ಪ್ರಜಾಪ್ರಭುತ್ವ ಮತ್ತು ಮೌಲಿಕ ವಿದೇಶಾಂಗ ನೀತಿ, ಎರಡೂ ನಶಿಸುವ ಹಾದಿಯಲ್ಲಿವೆ. ಇವೆರಡೂ ಪಕ್ಷಗಳ ಪ್ರಶ್ನೆಯಲ್ಲ; ಅವು ದೇಶದ ಪ್ರಶ್ನೆಗಳು. ಭಾರತೀಯ ಜನತಾ ಪಕ್ಷವೂ ಸೇರಿದಂತೆ ಎಲ್ಲ ಪಕ್ಷಗಳು ಹಾಗೂ ದೇಶದ ಪ್ರಜೆಗಳು ನಮ್ಮ ಹಿತ, ನಮ್ಮ ಸಾರ್ವಭೌಮತ್ವ, ನಮ್ಮ ಸಂರಕ್ಷಣೆ, ನಮ್ಮ ಸಾಮಾಜಿಕ-ಆರ್ಥಿಕ-ಸಾಂಸ್ಕೃತಿಕ ಆಕಾಂಕ್ಷೆಗಳು, ಮುಂತಾದುವನ್ನೆಲ್ಲಾ ವಿಮರ್ಶೆ ಮಾಡಿಕೊಂಡು ದಿಟ್ಟವಾದ ಸ್ವತಂತ್ರ ಹೆಜ್ಜೆ ಇಡಬೇಕಾದ ಅನಿವಾರ್ಯತೆ ಹಿಂದೆಂದಿಗಿಂತಲೂ ಇಂದು ಹೆಚ್ಚಿನದಾಗಿದೆ.

## ವ್ಯವಸಾಯೋತ್ಪನ್ನ ಮತ್ತು ವಿಶ್ವವಾಣಿಜ್ಯ ನೀತಿ

ಮುಂದುವರಿದ ರಾಷ್ಟ್ರಗಳು ತಮ್ಮ ವ್ಯವಸಾಯೋತ್ಪನ್ನಗಳಿಗೆ ಕೊಡುವ ಸರ್ಕಾರಿ ನೆರವು ಪ್ರತಿದಿನ ಸುಮಾರು ಒಂದು ಬಿಲಿಯನ್ ಡಾಲರು, ಅಂದರೆ ಸುಮಾರು ೪೮೦೦ ಕೋಟಿ ರೂ.ಗಳೆಂದು ಅಂದಾಜು ಮಾಡಲಾಗಿದೆ. ವಿಶ್ವವಾಣಿಜ್ಯ ಸಂಸ್ಥೆಯ ಚರ್ಚೆಯಲ್ಲಿ ಈ ರಾಷ್ಟ್ರಗಳದ್ದೇ ಬಲ. ಇವು ಅಭಿವೃದ್ಧಿಶೀಲ ರಾಷ್ಟ್ರಗಳಿಗೆ ತಮ್ಮ ವ್ಯವಸಾಯೋತ್ಪನ್ನಕ್ಕೆ ಯಾವ ತೆರನ ನೆರವನ್ನೂ ನೀಡಕೂಡದೆಂದು ಹೇಳುತ್ತವೆ. ನಮ್ಮ ದೇಶದ ವ್ಯವಸಾಯೋತ್ಪನ್ನಗಳು ವಿದೇಶೀ ಮಾರುಕಟ್ಟೆಯಲ್ಲಿ ದುಬಾರಿಯಾಗಿ ಕಾಣುತ್ತವೆ. ಹೀಗಾಗಿ ಮುಕ್ತ ವ್ಯಾಪಾರ – ಮುಕ್ತ ಮಾರುಕಟ್ಟೆ ಬಂದರೂ, ನಮ್ಮ ವ್ಯವಸಾಯೋತ್ಪನ್ನಗಳು ಅವರ ಮಾರುಕಟ್ಟೆಯನ್ನು ಹೊಗಲಾರವು. ಅವರ ಉತ್ಪನ್ನಗಳು ನಮ್ಮ ಮಾರುಕಟ್ಟೆಯನ್ನು ಪ್ರವೇಶಿಸಿ, ನಮ್ಮ ವ್ಯವಸಾಯದ ಆರ್ಥಿಕತೆಯನ್ನೇ ನಾಶಮಾಡಬಲ್ಲವು. ಇದಕ್ಕೆ ಈಗಾಗಲೆ ಸಾಕಷ್ಟು ನಿದರ್ಶನಗಳು ದೊರೆತಿವೆ.

ವ್ಯವಸಾಯೋತ್ಪನ್ನದ ಕ್ಷೇತ್ರಕ್ಕೆ ಯೂರೋಪಿನ ರಾಷ್ಟ್ರಗಳು ತಾವು ನೀಡುತ್ತಿರುವ ನೆರವನ್ನು ನಿಲ್ಲಿಸಬೇಕೆಂದು ಅಮೆರಿಕ ಬಹಳ ವರ್ಷದಿಂದ ಒತ್ತಾಯಿಸುತ್ತಿದ್ದು ದೋಹಾದ ಸಭೆಯ ವೇಳೆಗೆ ಒಂದು ತೀರ್ಮಾನಕ್ಕೆ ಬರಲೇಬೇಕಿದ್ದ ವಿಷಯವಾಗಿತ್ತು. ವಿಶ್ವವಾಣಿಜ್ಯ ಸಂಸ್ಥೆಯ ವಿವಾದ ಪರಿಹಾರದ ವ್ಯವಸ್ಥೆಯಲ್ಲೂ ಯೂರೋಪು ತನ್ನ ವಿರುದ್ಧವಾದ ತೀರ್ಪನ್ನು ಎದುರುಗೊಳ್ಳುವುದರಲ್ಲಿತ್ತು. ಕೊನೆಗೆ ಒಂದು ನಿರ್ದಿಷ್ಟ ಕಾಲಕ್ರಮದಲ್ಲಿ ತಮ್ಮ ನೆರವಿನ ಪ್ರಮಾಣವನ್ನು ಕಡಿತ ಮಾಡಿ ನಿಲ್ಲಿಸುವುದಾಗಿ ಯೂರೋಪ್ ದೇಶಗಳ ಒಕ್ಕೂಟ ಒಪ್ಪಿಕೊಳ್ಳಬೇಕಾಯಿತು. ಇದನ್ನು ನಮ್ಮ ಸಂಧಾನಕಾರರು ತಾವು ಪಡೆದ ಜಯವೆಂದು ಸಾರುತ್ತಿದ್ದಾರೆ! ಇದಕ್ಕೆ ಪ್ರತಿಯಾಗಿ ನಮ್ಮಲ್ಲೂ ಅನೇಕ ರೀತಿಯ ವ್ಯವಸಾಯ ಕ್ಷೇತ್ರದ ನೆರವುಗಳನ್ನು, ರಫ್ತಿಗೆ ಕೊಡುವ ರಿಯಾಯಿತಿಗಳನ್ನು ಕಡಿತ ಮಾಡುವುದಾಗಿ ಒಪ್ಪಿಕೊಂಡಿದ್ದಾರೆ. ವಾಸ್ತವದಲ್ಲಿ ಮುಂದುವರಿದ ರಾಷ್ಟ್ರಗಳ ನೆರವಿನ ರಿಯಾಯಿತಿ ಪ್ರಮಾಣಗಳಿಗೆ ಹೋಲಿಸಿದರೆ, ನಾವು ನೀಡುತ್ತಿರುವ ನೆರವು ಕ್ಷುಲ್ಲಕ. ಇದನ್ನು ನಿಲ್ಲಿಸದೆ ಇದ್ದರೆ ನಾವು ವಿಶ್ವವಾಣಿಜ್ಯದ ದೃಷ್ಟಿಯಿಂದ ಯಾವ ತಪ್ಪನ್ನೂ ಮಾಡಿದಂತಾಗುವುದಿಲ್ಲ. ಆದರೂ ನಗದಿನ ಕೊರತೆಯಿಂದ ನಡೆಯುತ್ತಿರುವ ಸರ್ಕಾರ ನಮ್ಮ ವಿಶ್ವವಾಣಿಜ್ಯದ ಹೊಣೆಗಾರಿಕೆಯನ್ನು ನೆವಮಾಡಿ, ನಮ್ಮ ರೈತರಿಗೆ ಕೊಡುತ್ತಿರುವ ಅಲ್ಪ ನೆರವನ್ನೂ, ರಿಯಾಯಿತಿಯನ್ನೂ ಹಿಂದೆಗೆದುಕೊಳ್ಳುವಂತಿದೆ. ಸರ್ಕಾರದ ನಗದಿನ ಕೊರತೆಗೆ ಕೆಲವು ಮುಖ್ಯ ಕಾರಣಗಳು, ಕಳೆದ ಹತ್ತು ವರ್ಷದಿಂದ ಕೈಗಾರಿಕಾ ಕ್ಷೇತ್ರಕ್ಕೆ ನೀಡುತ್ತಾ ಬಂದಿರುವ ಸುಂಕಗಳಲ್ಲಿನ ವಿನಾಯಿತಿ, ನೆರವು ಹಾಗೂ ವಸೂಲಾಗಬೇಕಾದ ಸುಂಕಗಳನ್ನು ವಸೂಲಿ ಮಾಡದಿರುವುದರಿಂದ. ಇದೇ ಕೈಗಾರಿಕಾ ಧುರೀಣರು ಇಂದಿನ ಸರ್ಕಾರದ ಆರ್ಥಿಕ ನೀತಿಯನ್ನೂ ಹಿಂಬದಿಯಿಂದ ನಿರ್ಧರಿಸುತ್ತಿರುವುದೇ ಈ ರೈತ ವಿರೋಧಿ ನೀತಿಗೆ ಕಾರಣವಾಗಿರುವಂತಿದೆ.

ದೋಹಾದಲ್ಲಿ ಪಶ್ಚಿಮ ರಾಷ್ಟ್ರಗಳು ತಮ್ಮ ವ್ಯವಸಾಯ ಕ್ಷೇತ್ರಕ್ಕೆ ನೆರವು, ರಿಯಾಯಿತಿ ಕಡಿತ ಮಾಡುವಂತೆ ಒಪ್ಪಿದ್ದು ತಮ್ಮ ವಿಕ್ರಮವೆಂದು ಉದ್ಯಮಿ ರಾಹುಲ ಬಜಾಜ್ ಜಂಭಕೊಚ್ಚಿಕೊಂಡಿರುವುದು ಪೊಳ್ಳು ಮಾತು.

ಪಶ್ಚಿಮ ದೇಶಗಳು ತಮ್ಮ ರೈತರಿಗೆ ನೆರವು ನೀಡುವಾಗ ಅನುಸರಿಸುವ ಮಾರ್ಗಗಳು ನಮ್ಮದಕ್ಕಿಂತ ವಿಭಿನ್ನವಾದುವು. ಅವನ್ನು ಅಭ್ಯಸಿಸಿ, ನಾವೂ ಅದೇ ಮಾರ್ಗವನ್ನು ಅನುಸರಿಸುವುದು ಅತಿ ಜರೂರಾದ ವಿಷಯ. ಈಗಿನಂತೆ ಕೊಬ್ಬಿದ ಜಮೀನುದಾರರಿಗೇ ತಲಪುವ ನೆರವಿನ ರೀತಿ, ಬೇಡದ ದವಸವನ್ನು ಸಲ್ಲದ ಬೆಲೆ ಕೊಟ್ಟು ಕೊಂಡು ಪೋಲು ಮಾಡುವುದು, ಅಷ್ಟಾದರೂ ಆಹಾರವಿಲ್ಲದೆ ಜನ ಸಾಯುವ ನೀತಿ ತಿಳಿಗೇಡಿತನದ್ದು. ಒಂದು ವಿಪರ್ಯಾಸಕರ ಸುದ್ದಿ ಹೀಗಿದೆ: ಆಹಾರದಾಸ್ತಾನು ಹೆಚ್ಚಿದೆ. ಅದನ್ನು ರಫ್ತು ಮಾಡಿ. ಅಂತರರಾಷ್ಟ್ರೀಯ ಮಾರುಕಟ್ಟೆಯ ಬೆಲೆಗೆ ಅದನ್ನು ಮಾರಿ. ಆದರೆ ಆ ಬೆಲೆ ನಮ್ಮ ಬಡತನದ ರೇಖೆಯವರಿಗೆ ಮಾರುವ ಬೆಲೆಗಿಂತ ಕಡಿಮೆಯಾದುದು! ಆದರೂ ರಫ್ತು ಮಾಡಿ. ಬಡವರಿಗೆ ಅದು ಸಿಗದೆ, ಅವರು ಸತ್ತರೂ ಸರಿ. ರಫ್ತು ಮಾಡಿ ಡಾಲರ್ ಸಂಪಾದಿಸಿ. ಡಾಲರ್ ನಮ್ಮ ಕೈಗಾರಿಕೋದ್ಯಮಿಗಳಿಗೆ ಅಗತ್ಯ! ವಿಶ್ವದ ಯಾವ ಹಿಂದುಳಿದ ರಾಷ್ಟ್ರವೂ ಇಷ್ಟು ತಿಳಿಗೇಡಿತನದಿಂದ ವರ್ತಿಸುತ್ತಿರಲಾರದು.

ದೋಹಾದಲ್ಲಿ ಔಷಧಿಗಳಿಗೆ ಸಂಬಂಧಪಟ್ಟಂತೆ ಮತ್ತು ವ್ಯವಸಾಯೋತ್ಪನ್ನಗಳ ರಫ್ತಿಗೆ ಸಂಬಂಧಪಟ್ಟಂತೆ ಪಡೆದುಕೊಂಡ ರಿಯಾಯಿತಿಗಳು ವಾಸ್ತವದಲ್ಲಿ ಪಶ್ಚಿಮದ ಚಾಣಾಕ್ಷ ಸಂಧಾನಕಾರರು ತಮ್ಮ ಬಹುಮುಖ್ಯ ಗುರಿಯನ್ನು ಸಾಧಿಸಿಕೊಳ್ಳಲು ಹೂಡಿದ ಉಪಾಯಗಳಷ್ಟೆ. ಇವೆರಡು ರಿಯಾಯಿತಿ ಕೊಡುತ್ತೇವೆ. ಆದರೆ ಹೊಸ ವಿಷಯಗಳ ಹೊಸ ಸುತ್ತು ಆರಂಭಿಸಲು ನೀವು ಒಪ್ಪಿ, ಎಂದು ತಮ್ಮ ಮುಖ್ಯ ಗುರಿಯನ್ನು ಸಾಧಿಸಿಕೊಂಡರು. ಈಗಾಗಲೇ ಒಪ್ಪಿತವಾದ ವಿಷಯಗಳನ್ನು ಕಾರ್ಯಗತಗೊಳಿಸುವ ವಿಷಯದಲ್ಲಿ ವಿಳಂಬದ ವಿಷಯ? ಅದನ್ನು ಆದಷ್ಟು ಬೇಗ ಪರಿಹರಿಸುವ ಮಾರ್ಗ ಕಂಡುಹಿಡಿಯಲು ಚರ್ಚಿಸುವ! ಒಮ್ಮೆ ನೀವು ಹೊಸ ಸುತ್ತಿನ ಹೊಸ ಚರ್ಚೆಗೆ ಒಪ್ಪಿದರೆ ಮಾತ್ರ! ಇದನ್ನು ನಮ್ಮ ಸಂಧಾನಕಾರರು ತಮ್ಮ ವಿಜಯವೆಂದು ಬಣ್ಣಿಸುತ್ತಿದ್ದಾರೆ. ಅಷ್ಟೇ ಅಲ್ಲ, ಇಷ್ಟು ದಿವಸ ಪರಿಸರಕ್ಕೆ ಸಂಬಂಧಪಟ್ಟ ಚರ್ಚೆ ಕೂಡದೆಂದು ಹೇಳುತ್ತಿದ್ದವರು, ಅದನ್ನು ಚರ್ಚಿಸಲು ಒಪ್ಪಿಕೊಂಡು ಬಂದಿದ್ದಾರೆ. ಇಂತಹ ಸೋಲುಗಳು ನಮ್ಮ ದೇಶವನ್ನು ಎತ್ತ ಕೊಂಡೊಯ್ಯುತ್ತವೆಂದು ಗಂಭೀರವಾಗಿ ಯೋಚಿಸಿ ಸಾರ್ವಜನಿಕರು ಕ್ರಿಯಾಶೀಲರಾಗಬೇಕು.

*– ಕೆ. ಎಸ್. ಪಾರ್ಥಸಾರಥಿ*


ತಿಂಗಳ ಪತ್ರಿಕೆ
**ಹೊಸತು**
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ





*ಚಂದಾ ವಿವರಗಳು*

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ. ೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

*ನವಕರ್ನಾಟಕ ಶಾಖೆಗಳು*

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯ ☎: ೨೨೫೧೩೮೨
ಕೆಂಪೇಗೌಡ ವೃತ್ತದ ಬಳಿ
ಬೆಂಗಳೂರು - ೫೬೦ ೦೦೯ ☎: ೨೮೭೨೩೮೫
ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧ ☎: ೪೪೦೦೧೬
ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪ ☎: ೪೨೪೦೯೪
ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨ ☎: ೨೪೩೦೨




**ಹೊ**ಸತು ವಿಶೇಷ ಸಂಚಿಕೆ ವೈವಿಧ್ಯಮಯ ಲೇಖನ, ಕವನಗಳಿಂದ ನಿಜಕ್ಕೂ 'ಹೊಸತಾಗಿ' ಬಂದಿದೆ. ಎಲ್ಲ ವರ್ಗದ ಜನ ಓದಿ ಸಂತೋಷಪಟ್ಟು ತಮ್ಮ ಅರಿವಿನ ಪರಿಧಿಯನ್ನು ಹೆಚ್ಚಿಸಿಕೊಳ್ಳುವ ಸಂಚಿಕೆಯಿದು. ಅಭಿನಂದನೆಗಳು.

ನನ್ನ ಲೇಖನದಲ್ಲಿ ಎರಡು ಕಡೆ 'ರೀಖ್ತ' ಎಂಬುದು 'ರೀಖ್ತಿ' ಎಂದು ಅಚ್ಚಾಗಿದೆ. ಈ ಎರಡು ಶಬ್ದಗಳಲ್ಲಿ ಬಹಳ ಅರ್ಥ ವ್ಯತ್ಯಾಸವಿದೆ. ನನ್ನ ಲೇಖನ 'ರೀಖ್ತಿ' ಯ ಎರಡನೆಯ ಪ್ಯಾರಾದ ಮೊದಲನೆಯ ಸಾಲು ಮತ್ತು ಮೂರನೆಯ ಸಾಲಿನಲ್ಲಿ 'ರೀಖ್ತಿ' ಎಂದು ತಪ್ಪಾಗಿ ಪ್ರಕಟವಾಗಿದೆ. ಅದನ್ನು 'ರೀಖ್ತ' ಎಂದು ಓದಿಕೊಳ್ಳಬೇಕು.

*ಗುಲ್ಬರ್ಗ* **ಶಾಂತರಸ**

ನಮ್ಮ 'ಹೊಸತು' ಪತ್ರಿಕೆಯಲ್ಲಿ ಕರ್ನಾಟಕದಲ್ಲಿ ಸಮಾನತೆ, ಸಾಮಾಜಿಕ ನ್ಯಾಯ, ವೈಚಾರಿಕ ನೆಲೆಗಟ್ಟು, ನಿರ್ಭಯವಾದ ವರದಿಗಳು ತುಂಬಾ ಚೆನ್ನಾಗಿ ಬರುತ್ತಿವೆ. ನಮ್ಮ ರಾಷ್ಟ್ರದ ನ್ಯಾಯಾಲಯ ಎತ್ತ ಸಾಗಿದೆ ಎಂಬುದನ್ನು ಸಂಪಾದಕೀಯದಲ್ಲಿ ಧೈರ್ಯವಾಗಿ ಸತ್ಯವನ್ನು ಚಿಮ್ಮಿಸಿದ್ದೀರಿ. ನಮ್ಮ ನ್ಯಾಯಾಲಯಗಳು ಬಡವರ ಬಗ್ಗೆ ಉದಾಸೀನ ಮಾಡುತ್ತಿವೆ. ಮುಂದೆ ಪರಿಣಾಮ ಘೋರವಾಗಿರುತ್ತದೆ. 'ಹೊಸತು' ಪತ್ರಿಕೆಯಲ್ಲಿ ವಿಡಂಬನೆ ಚಿತ್ರ ತುಂಬಾ ಅರ್ಥದಿಂದ ಕೂಡಿದೆ.

*ಬೀರೂರು* **ಜಗದೀಶ ಜಿ. ಸಿ.**

ಸಂಚಿಕೆಯು ತುಂಬಾ ಚೆನ್ನಾಗಿ ಮೂಡಿಬಂದಿದೆ. ಇದಕ್ಕಾಗಿ ನನ್ನ ಅಭಿನಂದನೆಗಳು

*ಬೆಂಗಳೂರು* **ಡಾ|| ಎಸ್. ಬಿಸಲಯ್ಯ**

ಪರ್ವತಾರೋಹಣದಲ್ಲಿ ಗುಹಾಭ್ರಾಂತಿ, ಶಿಲಾ ಭ್ರಾಂತಿ ಸಾಮಾನ್ಯ! ಅಂತೆಯೇ ಸಾಹಿತ್ಯಾಭ್ಯಾಸದಲ್ಲಿ 'ಸೂಕ್ತಿಭ್ರಾಂತಿ'ಯೂ ಸಾಧ್ಯವೆಂಬುದನ್ನು ನನಗೆ ತೋರಿಸಿ ಕೊಟ್ಟು ಎಚ್ಚರಿಸಿರುವ ಎಲ್. ಎಸ್. ಶೇಷಗಿರಿರಾವ್ ಮತ್ತು ಬ. ನಾ. ರಘುರಾಮ ಅವರಿಗೆ ಕೃತಜ್ಞತೆಗಳು.

ಭಗವದ್ಗೀತೆಯಲ್ಲಿ 'ಸ್ವಧರ್ಮ'ವೆಂಬ ಶಬ್ದಕ್ಕೆ 'ವರ್ಣಧರ್ಮ'ವೆಂದು ನಿರ್ಧರಿಸಿ ವ್ಯಾಖ್ಯಾನ ಮಾಡುವುದನ್ನು ವರಕವಿ ದ.ರಾ.ಬೇಂದ್ರೆ ಬಹು ಹಿಂದೆಯೇ ವಿರೋಧಿಸಿದ್ದಾರೆ. (ನೋಡಿ: *ಭಗವದ್ಗೀತೆಯ ಧರ್ಮಸಿದ್ಧಾಂತ,* ಕುಮಟಾ ಉಪನ್ಯಾಸ). ಬೇಂದ್ರೆ ವ್ಯಾಖ್ಯಾನದ ತಿಳಿವಿನ ಜಲಪಾನ ಮಾಡಿರುವ ನಾನು ಅದೇ ಅಭಿಪ್ರಾಯವನ್ನಿಟ್ಟುಕೊಂಡಿದ್ದು 'ಸ್ವಧರ್ಮೇ ನಿಧನಂ ಶ್ರೇಯಃ'' (ಹೊಸತು, ಡಿಸೆಂಬರ್ ೨೦೦೧) ಎಂಬ ನುಡಿಯನ್ನು ವಿಮರ್ಶಿಸಿದ್ದೇನೆ. ''ಪ್ರತಿಯೊಬ್ಬರೂ ಭಗವದ್ಗೀತೆ ಓದಿದರೂ ಅವರಿಗೆ ಅದರಲ್ಲಿ ಅವರ ಮಾತು ಅಂತ ಏನು ಸಿಗತದೋ, ಅಷ್ಟೇ ಅವರದು. ಇನ್ನೊಬ್ಬರಿಗೆ ಸಿಕ್ಕ ಮಾತು ನಿಮಗ ಸಿಗೋದು ಸಾಧ್ಯ ಇಲ್ಲ'' ಎಂಬ ಬೇಂದ್ರೆ ವಾಣಿ ಸತ್ಯಸ್ಯ ಸತ್ಯವಾಗಿದೆ.

*ಕೋಲಾರ* **ವಿ. ಚಂದ್ರಶೇಖರ ನಂಗಲಿ**

'ಹೊಸತು' ವಿಶೇಷ ಸಂಚಿಕೆಯು ಚಿಂತನೆ, ಮಾಹಿತಿ ಮತ್ತು ಭಾವನೆಗಳ ಸಂಗ್ರಹಯೋಗ್ಯ ಸಂಪುಟವಾಗಿದೆ. ಲೇಖನಗಳು ಅಧ್ಯಯನ ಪೂರ್ಣವಾಗಿವೆ. ಜಿ. ಕೆ. ಗೋವಿಂದರಾಯರ ಲೇಖನ – ಅನುಭವ – ಜ್ಞಾನ – ಸಾಹಿತ್ಯ – ನನ್ನನ್ನು ಓದುವಂತೆ ಒತ್ತಾಯಿಸಿದೆ. ಪರಸ್ಪರ ನಿಯಂತ್ರಣಕ್ಕೊಳಪಡುವ ಎಡ, ಬಲಗಳ ಚಿಂತನೆ ಮೆದುಳಿಗಷ್ಟೇ ಸೀಮಿತವಾಗಿರದೆ ಸಾಮಾಜಿಕ ಜೀವನ ಸಂದರ್ಭದಲ್ಲೂ ಪ್ರಸ್ತುತವಾಗಿದೆ. ಈ ನಿಟ್ಟಿನಲ್ಲಿ 'ಹೊಸತು' ಪತ್ರಿಕೆಯ ಪಾತ್ರ ಗಮನಾರ್ಹ.

*ಸುಳ್ಯ* **ಕಿರಣ**




'ಹೊಸತು' ಸಂಚಿಕೆ ಚೆನ್ನಾಗಿ ಬಂದಿದೆ. ರಹಮತ್ ತರೀಕೆರೆಯವರ ಲೇಖನ ವಿಶೇಷ ಅನುಭವ ನೀಡುತ್ತದೆ. ಲಂಕೇಶರ ಬರವಣಿಗೆಯ ಸ್ಟೈಲ್ ರೈಟರ್ ಎಂದು ಇವರನ್ನ ಕರೆಯಬಹುದು. ಆಕರ್ಷಕ ಶೈಲಿ ಇದೆ. ದ್ವೀಪಗಳ ಪ್ರವಾಸ ಅನುಭವ ಆಪ್ಯಾಯಮಾನ. ನಮಗೂ ಕೂಡ ಪ್ರವಾಸದ ಆಸಕ್ತಿ ಹೆಚ್ಚಿಸುತ್ತದೆ.

*ಜಮಖಂಡಿ* **ಅರ್ಜುನ ಕೋರಟಕರ**

ಮೊಗವೀರ' ಕನ್ನಡ ಮಾಸಿಕ ಪತ್ರಿಕೆಯು ಸಾಹಿತ್ಯ ಸ್ಪರ್ಧೆಯೊಂದನ್ನು ಏರ್ಪಡಿಸಿದೆ. ಕಥೆ, ಕವನ, ವೈಚಾರಿಕ ಲೇಖನ ಹಾಗೂ ಕವನಗಳನ್ನು ಸ್ಪರ್ಧೆಗೆ ಆಹ್ವಾನಿಸಲಾಗಿದೆ. ಹಾಳೆಯ ಒಂದೇ ಮಗ್ಗುಲಲ್ಲಿ ಸ್ಫುಟವಾಗಿ ಬರೆದ ಲೇಖನಗಳು ಬೇರೆಲ್ಲೂ ಪ್ರಕಟವಾಗಿರಬಾರದು ಮತ್ತು ಮಾರ್ಚ್ ೩೧ರೊಳಗಾಗಿ ಈ ವಿಳಾಸಕ್ಕೆ ತಲುಪಬೇಕು.

The Editor, Mogaveera Competition Section, Manek Mansion, 8, Nanabhai Lane, Fort, Mumbai - 400 001

ಕೃತಿಕಾರರು ಹೆಸರು ಮತ್ತು ವಿಳಾಸವನ್ನು ಪ್ರತ್ಯೇಕ ಕಾಗದದಲ್ಲಿ ಬರೆದಿರಬೇಕು. ೧,೫೦೦, ೧,೦೦೦ ಮತ್ತು ೫೦೦ ರೂಪಾಯಿಗಳ ೧೨ ಬಹುಮಾನಗಳಿವೆ.

ಜನವರಿ ೨೦೦೨ ವಿಶೇಷ ಸಂಚಿಕೆಯಲ್ಲಿ **'ವಿಜ್ಞಾನದ ಪ್ರಕ್ರಿಯೆ : ಕೆಲವು ಹೊಳವುಗಳು'** ಎಂಬ ಲೇಖನ ಪ್ರಕಟವಾಗಿದೆ (ಪು. ೧೪೭-೧೫೦). ಅದನ್ನು ಬರೆದವರು **ಪ್ರೊ|| ಆದ್ಯನಡ್ಕ ಕೃಷ್ಣಭಟ್ಟ** ಅವರು. ತಪ್ಪಾಗಿ ಲೇಖಕರ ಹೆಸರು **ಪ್ರೊ|| ಡಿ. ಆರ್. ಬಳೂರಗಿ** ಎಂದು ಅಚ್ಚಾಗಿದೆ. ಈ ಅಕ್ಷಮ್ಯ ಪ್ರಮಾದಕ್ಕಾಗಿ ವಿಷಾದಿಸುತ್ತಾ **ಪ್ರೊ|| ಕೃಷ್ಣಭಟ್ಟರ ಕ್ಷಮೆ ಕೇಳಲಾಗಿದೆ. ಅವರ ವಿಳಾಸ :** ***ಸಾರಸ, ೨೩೦೧, ೨ನೇ ಕ್ರಾಸ್, ವಿಜಯನಗರ-II, ಮೈಸೂರು-೫೭೦ ೦೧೭.***

ಪ್ರೊ|| ಬಳೂರಗಿ ಅವರಿಗೆ ಉಂಟಾಗ ಬಹುದಾದ ಸಂಕೋಚಕ್ಕೆ ವಿಷಾದಿಸುತ್ತೇವೆ.

*- ಸಂಪಾದಕ, 'ಹೊಸತು'*

'ಹೊಸತು' ವಿಶೇಷಾಂಕ ಅತ್ಯಾಕರ್ಷಕವೂ, ವೈಚಾರಿಕವೂ ಆಗಿದೆ. ನಾನು ಇಷ್ಟ ಪಡುವ ಲೇಖಕರೆಲ್ಲ ಇದರೊಳಗೆ ಇದ್ದಾರೆ. ಜಾಗತೀಕರಣದ ಅಪಾಯ ಕುರಿತು, ರೈತಾಪಿ ಜನರ ದುಸ್ಥಿತಿ ಕುರಿತು, ಹಾಗೆಯೇ ಭಯೋತ್ಪಾದನೆ ಕುರಿತು ಲೇಖಕರು ಕಳಕಳಿಯಿಂದ ಬರೆದಿದ್ದಾರೆ. ಭಾರತೀಯ ನಾಗರಿಕತೆ ಕುರಿತು ನಯಪಾಲರ ಆಲೋಚನೆ ಕುರಿತು ಆಮೂರರು ಬರೆದಿರುವ ಲೇಖನ ಅಭ್ಯಾಸಯೋಗ್ಯ. ಅರ್ಜೆಂಟೈನಾಕ್ಕೆ ಒದಗಿರುವ ದುಸ್ಥಿತಿಯ ಕಡೆ ಭಾರತ ಶರವೇಗದಲ್ಲಿ ಧಾವಿಸುತ್ತಿದೆ. ಇಂಥದೊಂದು ಸಂಗ್ರಹಯೋಗ್ಯ ಸಂಚಿಕೆಯನ್ನು ರೂಪಿಸಿಕೊಟ್ಟಿರುವ ನಿಮ್ಮನ್ನು ಅಭಿನಂದಿಸುವೆ. ಆತಂಕ, ದುಗುಡದಿಂದ ಆರಂಭಗೊಂಡಿರುವ ಹೊಸ ವರ್ಷ ನೆಮ್ಮದಿದಾಯಕವಾಗಿರಲಿ.

*ಕೊಟ್ಟೂರು* **ಕುಂ. ವೀರಭದ್ರಪ್ಪ**

ಇಪ್ಪತ್ತೈದು ರೂಪಾಯಿಗೆ ಇಷ್ಟೊಂದು ವಿಷಯ! 'ಹೊಸತು' ಈ ಮಟ್ಟಿಗೆ ವೈಚಾರಿಕವಾಗಿ ಮೂಡಿಬರಲು ಕಾರಣವಾದ ಎಲ್ಲರಿಗೂ ಧನ್ಯವಾದಗಳು. ವ್ಯಾಸರಾಯ ಬಲ್ಲಾಳರ 'ಮಾಧ್ಯಮ ಸಂಸ್ಕೃತಿ' ಲೇಖನ, ಪತ್ರಿಕೋದ್ಯಮದ ಎಲ್ಲಾ ದಿಶೆಗಳ ವಿಮರ್ಶೆಯಾಗಿದೆ. ಮಾರ್ಕ್ಸ್‌ರವರ ಪ್ರಕಾರ ಪತ್ರಿಕಾ ಸ್ವಾತಂತ್ರ್ಯಕ್ಕೆ ಎರಡು ಕಡೆಯಿಂದ ಧಕ್ಕೆ ಬರುತ್ತದೆ. ಒಂದು ಸರ್ಕಾರದಿಂದ, ಇನ್ನೊಂದು ಪತ್ರಿಕೆಯ ಲಾಭಕೋರ ಆಡಳಿತದವರಿಂದ. ಈ ಹೇಳಿಕೆ ಎಷ್ಟೊಂದು ಪ್ರಸ್ತುತ.

*ಬೆಂಗಳೂರು* **ವಿಶ್ವನಾಥ ಗೌಡ. ಎಲ್. ವೇಮಗಲ್**

ಜನವರಿ ೨೦೦೨ ವಿಶೇಷ ಸಂಚಿಕೆಯಲ್ಲಿ ಪ್ರೊ|| ಎಂ. ವಿ. ನಾಡಕರ್ಣಿ ಅವರ ಲೇಖನ (ಪು. ೧೨೧-೧೨೫) ಪ್ರಕಟವಾಗಿದೆ. ಅದರ ಶೀರ್ಷಿಕೆಯನ್ನು ''ಜಾಗತೀಕರಣಗೊಳ್ಳಿ, ಬೆಳವಣಿಗೆ ಸಾಧಿಸಿ?'' ಎಂದು ಓದಿಕೊಳ್ಳಬೇಕು.

*- ಸಂಪಾದಕ 'ಹೊಸತು'*

# ರಾಜ್ಯಪಾಲರ 'ವರದಿ'

ಕರ್ನಾಟಕ ಸರ್ಕಾರದ ನೀತಿಗಳನ್ನು ಹಾಗೂ ಯೋಜನೆಗಳನ್ನು ದಾಖಲು ಮಾಡುವ ಅಂಗವಾಗಿ ಯಥಾಪ್ರಕಾರ ರಾಜ್ಯಪಾಲರ ಬಾಯಲ್ಲಿ ಸುಮಾರು ಆರು ಸಾವಿರ ಪದಗಳ ಭಾಷಣವನ್ನು ಶಾಸನಸಭೆಯಲ್ಲಿ ಮಾಡಿಸಲಾಯಿತಷ್ಟೆ. ಯಾವಾಗಲೂ ಹೇಳುವಂತೆ ಆಳುವ ಪಕ್ಷದವರು ಅದು ಕಲ್ಪವೃಕ್ಷದ ಸೃಷ್ಟಿ ಎಂದರೆ, ವಿರೋಧಪಕ್ಷಗಳವರು ಅದನ್ನು ನೀರಸವೆಂದಿದ್ದಾರೆ. ರಸವತ್ತಾದ ಭಾಷಣ ಮಾಡುವುದು ರಾಜ್ಯಪಾಲರ ಉದ್ದೇಶವಾಗಿರುವುದಿಲ್ಲವೆಂಬುದು ನಿಜ. ಆದರೆ ಸರ್ಕಾರವು ನೀತಿಗಳನ್ನು ಅವರ ಮುಖೇನ ಮಂಡಿಸುತ್ತದಾದ್ದರಿಂದ ಅದರ ಅವಲೋಕನ ಅಗತ್ಯ. ಈಗಾಗಲೆ ರಾಜ್ಯದ ಜನರಿಗೆ ತಿಳಿಯದ ಯಾವ ಹೊಸನೀತಿಯ ಉಲ್ಲೇಖವೂ ಇಲ್ಲದಿರುವುದು ಹೊಸ ಚರ್ಚೆಗೆ ಅವಕಾಶವನ್ನು ತುಂಡರಿಸಿದೆ.



ಕಾನೂನು - ಶಿಸ್ತು ಪಾಲನೆಗಾಗಿ ಇನ್ನಷ್ಟು ಪೊಲೀಸ್ ದಳಗಳ ರಚನೆ ಮಾಡಲಿರುವ ಸರ್ಕಾರವು ಈಗಾಗಲೆ ಕೋಕ ಕಾಯಿದೆಯನ್ನು ಬಗಲಲ್ಲಿ ಇರಿಸಿ ಕೊಂಡಿದೆ. ವಿಶ್ವವಿದ್ಯಾಲಯಗಳು, ಸಂಸ್ಕೃತಿ ನಿರ್ದೇಶನಾಲಯ, ಮುಂತಾದುವುಗಳಿಗೆ ಪೊಲೀಸ್ ಅಧಿಕಾರಿಗಳನ್ನು ತುಂಬಲು ಸರ್ಕಾರವು ತುದಿಗಾಲಲ್ಲಿ ನಿಂತಿದೆ. ಬರಗಾಲವನ್ನು ಎದುರಿಸಲು ಸಿದ್ಧವೆಂದು ಹೇಳುವಾಗ ತೊಗರಿ ನಾಶವಾಗಲಿ, ಆಲಿಕಲ್ಲು ಮಳೆಯಿಂದ ಉಂಟಾದ ಬೆಳೆ ನಾಶವಾಗಲಿ ಪ್ರಸ್ತಾಪಕ್ಕೆ ಬಂದಿಲ್ಲ. ಆ ರೈತರು ರಾಜ್ಯಪಾಲರ ಕಣ್ಣಿಗೆ ಬೀಳುವ ಸಂಭವವಿದೆಯೆ? ರೈತರ ಅಭಿವೃದ್ಧಿಗಾಗಿ ಜೀವ ತಂತ್ರಜ್ಞಾನವನ್ನು ಹಮ್ಮಿಕೊಂಡು ಇನ್ನಷ್ಟು ಭೂಮಿ ಕಬಳಿಸುವ ಸಾಧ್ಯತೆ ಇಲ್ಲದಿಲ್ಲ. ಲಾಭವು ಬಹುರಾಷ್ಟ್ರೀಯ ಕಂಪೆನಿಗಳಿಗೋ ಅಥವಾ ರೈತರಿಗೋ ಎನ್ನುವುದು ರಹಸ್ಯವೇನಲ್ಲ. ಅದಕ್ಕಾಗಿ ವಿದೇಶಿ ಬಂಡವಾಳವನ್ನು ಆಕರ್ಷಿಸುವ ಆಶಯವಿದೆ. ಈಗಾಗಲೆ ಬಂದಿರುವ ಬಂಡವಾಳದಿಂದ ಜನ ಎಷ್ಟು ನೆಮ್ಮದಿ ಪಡೆದರೆಂಬುದರ ಚರ್ಚೆ ಅಪ್ರಸ್ತುತವಲ್ಲ. ತೋಟಗಾರಿಕೆ ಹೆಚ್ಚಿಸಿ, ಆಹಾರ ಉತ್ಪಾದನೆಯನ್ನು ಕುಂಠಿತಗೊಳಿಸಿ, ಹೂವು ಬೆಳೆದು ರಫ್ತು ಮಾಡುವ ರಾಜ್ಯ ನಮ್ಮದಾಗಲಿದೆ.

ರಾಜ್ಯಪಾಲರ ಭಾಷಣವು ಒಂದು ಉದ್ದನೆ ವರದಿಯಂತಿದೆ. ಅದರಲ್ಲಿ ಹತ್ತು ಬಾರಿಯಾದರೂ ವಿಶ್ವ ಬ್ಯಾಂಕ್ ಕಾಣಿಸಿಕೊಳ್ಳುತ್ತದೆ. ನೀರು, ಆರೋಗ್ಯ, ಶಿಕ್ಷಣ, ರಸ್ತೆ, ಆಹಾರ, - ಎಲ್ಲದರಲ್ಲೂ ಈ ಬ್ಯಾಂಕಿನದೇ ಹಾವಳಿ. ಆ ಬ್ಯಾಂಕು ನೀಡುವ ಸಾಲವನ್ನು 'ನೆರವು' ಎನ್ನುವುದೊಂದು ಕುಚೋದ್ಯ. ಅದಕ್ಕೆ ವಿಧಿಸಲಾಗಿರುವ ಷರತ್ತುಗಳ ಪ್ರಸ್ತಾಪವಿಲ್ಲದಿರುವುದೊಂದು ಮಹಾನ್ ಕೊರತೆ ಎನ್ನಬೇಕು.

ಶಿಕ್ಷಣದ ಕ್ಷೇತ್ರಕ್ಕೆ ಬಂದರೆ ಮಂತ್ರಿಗಳ ಹುಚ್ಚುತನವನ್ನು ರಾಜ್ಯಪಾಲರು ಖಂಡಿಸಬೇಕಾಗಿತ್ತೇನೋ ಎನಿಸುತ್ತದೆ. ಶಾಲೆಗಳಿಗೆ ಪ್ರವೇಶ ನೀಡಲು ಸ್ಪರ್ಧಾ ಪರೀಕ್ಷೆ ನಡೆಸುತ್ತಾರಂತೆ! ಈ ಯೋಜನೆಯನ್ನು ಪ್ರಕಟಿಸುವ ಸರ್ಕಾರವು ಮೂಲತಃ ಖಾಸಗಿತನವನ್ನು ಮೆಚ್ಚಿಕೊಂಡು ಶಿಕ್ಷಣ ಕ್ಷೇತ್ರದಲ್ಲಿ ತನ್ನ ಜವಾಬ್ದಾರಿಯಿಂದ ಹಿಂದೆ ಸರಿಯುತ್ತಿದೆ. ಅನುದಾನವನ್ನು ಕೂಡ ನಿಲ್ಲಿಸಿ ಸರ್ಕಾರಿ ಶಾಲಾ-ಕಾಲೇಜುಗಳನ್ನು ಮುಚ್ಚಬೇಕೆಂದಿರುವ ಸರ್ಕಾರವು ಖಾಸಗಿಯವರ ನಿಯಂತ್ರಣ ಸಾಧಿಸಬೇಕೆಂದು ಅಪೇಕ್ಷಿಸಬಹುದೆ? ಶಿಕ್ಷಣದ ಬಗೆಗೆ ಸರ್ವಾಧಿಕಾರಿ ತಂತ್ರ ಅನುಸರಿಸುತ್ತಿರುವ ಸರ್ಕಾರವು ರಾಜ್ಯಪಾಲರ ಬಾಯಲ್ಲಿ ಏನೇನು ಹೇಳಿಸಿದರೂ ವಸ್ತುಸ್ಥಿತಿ ತಿಳಿಯದಿರುವುದಿಲ್ಲ.

ಶಿಕ್ಷಣದಂತೆ ವಿದ್ಯುತ್ ಮತ್ತು ನೀರಿನ ವಿಲೇವಾರಿಯೂ ಖಾಸಗಿಯವರಿಗೆ ಬಿಟ್ಟುಕೊಡಲಿರುವ ಸರ್ಕಾರವು ವಿದ್ಯುಚ್ಛಕ್ತಿಯ ಕೊರತೆಯನ್ನು ನೀಗಿಸಲು ಹಲವಾರು ಯೋಜನೆಗಳನ್ನು ಪ್ರಕಟಿಸುವ ಮೂಲಕ ರಾಜ್ಯಪಾಲರಿಗೆ ಮುಜುಗರ ಉಂಟುಮಾಡಿದೆಯೆಂದರೆ ತಪ್ಪಾಗಲಾರದು.

ಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ ಕರ್ನಾಟಕವು ಶರವೇಗದಿಂದ ವಿದೇಶಿ ಬಂಡವಳಿಗರ ಹಾಗೂ ವಿಶ್ವ ಬ್ಯಾಂಕಿನ ತೊತ್ತಿನಲ್ಲಿರಲು ಧಾವಿಸುತ್ತಿದೆ ಎನ್ನಿಸುವ ಭಾವನೆ. ಬೇರೆಲ್ಲಾ ಪರಿಹಾರಗಳನ್ನು ಪ್ರಕಟಿಸುವಾಗ ಸರ್ಕಾರವು ಇದನ್ನು ಮುಚ್ಚಿಹಾಕಲಾರದು.

ಒಟ್ಟಿನಲ್ಲಿ ಹೇಳುವುದಾದರೆ, ರಾಜ್ಯಪಾಲರು ಎಚ್ಚರಿಕೆ ಗಂಟೆ ಬಾರಿಸಿದ್ದಾರೆ, ನಿದ್ರಿಸುತ್ತಿರುವ ಸಾರ್ವಜನಿಕರು ಜಾಗೃತರಾಗಬೇಕಾಗಿದೆ.

*- ವರದಿಗಾರ, 'ಹೊಸತು'*

# ಪ್ರೊ॥ ಆರ್. ಎಲ್. ಎನ್. ನೆನಪುಗಳು

ಜನವರಿ ೨೦೦೨ರ 'ಹೊಸತು' ವಿಶೇಷಾಂಕ ಸುಂದರವಾಗಿ ಬಂದಿದೆ. ಇದರಲ್ಲಿ ನನ್ನ ಗುರುಗಳಾಗಿದ್ದ ಆರ್. ಎಲ್. ನರಸಿಂಹಯ್ಯನವರ ಕೆಲವು ನೆನಪುಗಳನ್ನು ಜಿ. ಆರ್. ಲಕ್ಷ್ಮಣರಾವ್ ಅವರು ಆತ್ಮೀಯವಾಗಿ ಚಿತ್ರಿಸಿದ್ದಾರೆ. ಅದಕ್ಕಾಗಿ ಅವರಿಗೆ ನನ್ನ ಕೃತಜ್ಞತೆಗಳನ್ನು ಸಮರ್ಪಿಸುತ್ತೇನೆ.

ಆರ್. ಎಲ್. ಎನ್. ಅವರಂಥ ಉತ್ಸಾಹಿ ಆದರ್ಶ ಅಧ್ಯಾಪಕರು, ವಿಜ್ಞಾನ ಕ್ಷೇತ್ರದಲ್ಲಿ ವಿದ್ಯಾರ್ಥಿಗಳಿಗೆ ಆಸಕ್ತಿ ಕೆರಳುವಂತೆ ಬೋಧಿಸುವುದರಲ್ಲಿ ಇನ್ನೊಬ್ಬರನ್ನು ನಾನು ಕಂಡಿಲ್ಲ. ಒಂದು ನಿದರ್ಶನ ನೀಡಿದರೆ ಅಪ್ರಸ್ತುತವಾಗಲಾರದು.

ಆಚಾರ್ಯ ಪಾಠಶಾಲಾ ಬೆಳಗಿನ ಕಾಲೇಜಿನಲ್ಲಿ ಗೌರವ ಪ್ರಾಧ್ಯಾಪಕರಾಗಿ ಕೆಲಸ ಮಾಡುತ್ತಿದ್ದ ಆರ್. ಎಲ್. ಎನ್. ಅವರ ತರಗತಿ ಪಾಠ ಕುತೂಹಲದ ವಿಚಾರಗಳಿಂದ ಕೂಡಿರುತ್ತಿತ್ತು. ಆಗ ಕಲಾ ವಿದ್ಯಾರ್ಥಿಗಳಿಗೆ ವಿಜ್ಞಾನ ಪರಿಚಯ ಇರಬೇಕು, ವಿಜ್ಞಾನದ ವಿದ್ಯಾರ್ಥಿಗಳಿಗೆ ಕಲಾ ಪರಿಚಯವಿರಬೇಕು ಎಂಬ ಶಿಕ್ಷಣ ಸುಧಾರಣೆ ಅಂಗವಾಗಿ ಬಿ. ಎ. ವಿದ್ಯಾರ್ಥಿಗಳಿಗೆ ಜನರಲ್ ಸೈನ್ಸ್ ಎಂಬ ಪಠ್ಯಭಾಗದಲ್ಲಿ ಭೌತ, ರಸಾಯನ, ಜೀವಶಾಸ್ತ್ರಗಳ ಪಾಠಗಳು ಇರುತ್ತಿದ್ದವು. ಆಗ ರಷ್ಯ ಸ್ಪುಟ್ನಿಕ್ ಹಾರಿಸಿತ್ತು. ಜಗತ್ತೆಲ್ಲಾ ಬೆರಗಾಗಿತ್ತು. ಅದರ ಬಗ್ಗೆ ತಿಳಿಸಲು ಆರ್. ಎಲ್. ಎನ್. ಅಮೆರಿಕಾದಿಂದ ಅವರ ಮಿತ್ರರೊಬ್ಬರಿಂದ 'ಸ್ಪುಟ್ನಿಕ್ ಟಾಯ್' ತರಿಸಿದ್ದರು. ಕಾಲೇಜಿನ ಆಟದ ಮೈದಾನಕ್ಕೆ ನಮ್ಮೆಲ್ಲರನ್ನು ಕರೆದೊಯ್ದು ಒಂದು ಬಕೀಟಿನಲ್ಲಿ ನೀರಿಟ್ಟುಕೊಂಡು ಅದನ್ನು ಆ ಸ್ಪುಟ್ನಿಕ್ ಆಟಿಕೆಯಲ್ಲಿ ತುಂಬಿ, ಅದನ್ನು ಒತ್ತಿ ಮೇಲಕ್ಕೆ ಬಿಟ್ಟು ಹತ್ತಾರು ಅಡಿ ಮೇಲೆ ಹೋಗಿ ಅಲ್ಲಿ ಬೇರ್ಪಡೆ ಆಗಿ ಕೆಳಗೆ ಬಿದ್ದಾಗ ಅದನ್ನು ವಿವರಿಸುವುದರಲ್ಲಿ ರಾಕೆಟ್ ಪರಿಚಯ ನೀಡಿದ್ದರು. ಚಾಮರಾಜಪೇಟೆಯಲ್ಲಿಯೇ ಅವರ ಮನೆ, ನಮ್ಮ ಮನೆ ಇದ್ದಾಗ ಎಷ್ಟೋ ಸಲ ಬುಲ್ ಟೆಂಪಲ್ ರಸ್ತೆಯಲ್ಲಿ ಒಟ್ಟಿಗೆ ಬರುತ್ತಿದ್ದಾಗ ದಾರಿಯುದ್ದಕ್ಕೂ ಕೇಳುತ್ತಿದ್ದ ಪ್ರಶ್ನೆಗಳಿಗೆಲ್ಲ ಸೊಗಸಾಗಿ ಉತ್ತರಿಸುತ್ತಿದ್ದರು. ಒಮ್ಮೆ ಒಳ್ಳೆಯ ಕಥೆ ಅಥವಾ ಕಾದಂಬರಿ ಓದುವ ಹಾಗೆ ಅನುಭವವಾಗಬೇಕು, ಭಾಷೆ, ನಿರೂಪಣೆ ಎಲ್ಲಾ ಏನೂ ವಿಷಯ ತಿಳಿಯದ ಪಾಮರನಲ್ಲೂ ವಿಜ್ಞಾನದಲ್ಲಿ ಆಸಕ್ತಿ ಹುಟ್ಟಿಸಬೇಕು, ಅಂತಹ ಪುಸ್ತಕ ಇಂಗ್ಲಿಷ್‌ನಲ್ಲಿ ಇದೆಯೆ ಎಂದು ಕೇಳಿದೆ. ಮಾರನೇ ದಿನವೇ ಇದನ್ನು ಓದಿ ಎಂದು ಸುಮಾರು ೪೦೦ ಪುಟದಷ್ಟು ಗಾತ್ರದ ಬಯಾಲಜಿ ವಿಷಯದ ಪುಸ್ತಕವೊಂದನ್ನು ತಂದುಕೊಟ್ಟರು. ಹೆಸರು ಮರೆತಿದ್ದೇನೆ. ಪುಟ್ಟಪುಟ್ಟ ವಾಕ್ಯಗಳಲ್ಲಿ ಸರಳ ನಿರೂಪಣೆಯ ಆ ವಿಜ್ಞಾನದ ಗ್ರಂಥವನ್ನು ಕೆಲವೇ ದಿನಗಳಲ್ಲಿ ಓದಿ ಮುಗಿಸಿ ಹಿಂದಕ್ಕೆ ಕೊಟ್ಟೆ, ಒಂದು ಕಥೆ ಪುಸ್ತಕ ಓದಿದ ಹಾಗಿತ್ತು. ಆಗ ಅವರೊಂದು ಮಾತು ಹೇಳಿದರು: ನೋಡಿ, ನೀವು ಪುಸ್ತಕ ಚೆನ್ನಾಗಿದೆ ಎಂದಿರಿ. ಏಕೆ ಗೊತ್ತೆ? ಓದುವವರಿಗೆ ಆಸಕ್ತಿ ಇರಬೇಕು, ಪುಸ್ತಕ ಓದಿಸಿಕೊಂಡು ಹೋಗುವ ಹಾಗಿರಬೇಕು. ಲೇಖಕ ಹಾಗೆ ಬರೆದಿರಬೇಕು. ವಿಷಯವನ್ನು ಚೆನ್ನಾಗಿ ಪರಿಪೂರ್ಣವಾಗಿ ತಿಳಿದ ವಿದ್ವಾಂಸ ಲೇಖಕನಾಗಿರಬೇಕು. ಅವನು ಬರೆಯುವಾಗ ಏನೂ ತಿಳಿಯದ ಓದುಗನಿಗೆ ತಿಳಿಯುವಂತೆ, ಆಸಕ್ತಿ ಉಳಿಯುವಂತೆ ಬರೆಯುವುದು ಹೇಗೆ ಎಂಬುದಕ್ಕೆ ತನ್ನ ಪಾಂಡಿತ್ಯ ಬಳಸಬೇಕು. ಆಗ ನೋಡಿ, ಜನಪ್ರಿಯ ವಿಜ್ಞಾನದ ಗ್ರಂಥ ಜನಪ್ರಿಯವಾಗಲು ಸಾಧ್ಯ, ಎಂದರು. ಇಂಥ ಹಲವಾರು ನೆನಪುಗಳು ಲಕ್ಷ್ಮಣರಾಯರ ಲೇಖನ ಓದಿದಾಗ ನನ್ನಲ್ಲಿ ಮೂಡಿಬಂದವು.

*ಬೆಂಗಳೂರು*

**ಪ್ರೊ. ಜಿ. ಅಶ್ವತ್ಥನಾರಾಯಣ**

# ತಲೆಯ ಮೇಗಡೆ ಬೇರು

■ ಜಿ. ಶಿವಕುಮಾರ್

ಭಾರತ ಬಹುಕಾಲದಿಂದ ಜಾತಿ-ಮತಗಳೆಂಬ ವಿಷ ಬೀಜವನ್ನು ಬಿತ್ತುತ್ತಿದೆ. ಮನುಷ್ಯ ಮನುಷ್ಯರ ನಡುವೆ ಒಡಕನ್ನು ಸೃಷ್ಟಿಸುತ್ತಿದೆ. ಯಾರೂ ಹುಟ್ಟುತ್ತಲೇ ಮೇಲಲ್ಲ, ಕೀಳಲ್ಲ ಎಂಬ ನಾಣ್ನುಡಿ ಇಂದಿಗೂ ಜೀವಂತವಿದೆ. ಆದರೂ ಅದನ್ನು ಮೀರಿ ಮನುಷ್ಯ ಮನುಷ್ಯನನ್ನೇ ಕಿತ್ತು ತಿನ್ನುವ ಪ್ರವೃತ್ತಿಯನ್ನು ರೂಢಿಸಿಕೊಂಡಿದ್ದಾನೆ. ಮೇಲು ಕೀಳಿನ ತಾರತಮ್ಯ ಕಾರ್ಕೋಟಕ ವಿಷವಾಗಿ ದೇಶದೆಲ್ಲೆಡೆ ಈಗಲೂ ಹರಡಿದೆ. ''ಒಂದೇ ಜಲ, ಒಂದೇ ಕುಲ, ಒಂದೇ ಗಾಳಿ, ಒಂದೇ ಜಾತಿ, ನಾವು ಮನುಜರು'' ಎಂಬ ಅಡಿಗರ ನುಡಿ ಹೇಳಿಕೆಯಾಗಿಯೇ ಉಳಿದಿದೆ. ಮನುಷ್ಯ ಮನುಷ್ಯರ ನಡುವಿನ ವಿರಸ ಮರುಹುಟ್ಟು ಪಡೆಯುತ್ತಲೇ ಸಾಗಿದೆ.

ಈಗ ದಲಿತರ ಜೀವನ ಶೈಲಿ ಅಲ್ಲಲ್ಲಿ ಸುಧಾರಣೆಯನ್ನು ಕಾಣುತ್ತಿದ್ದರೂ, ಅಗಣಿತ ಸಂಖ್ಯೆಯ ದಲಿತರು ಇಂದಿಗೂ ಗತಕಾಲದ ಜೀವನ ಮಾದರಿಯನ್ನೇ ರೂಢಿಸಿಕೊಂಡು ಬದುಕುತ್ತಿದ್ದಾರೆ. ಅವರು ಸವರ್ಣೀಯರ ಕುತಂತ್ರಗಳಿಗೆ ಮಾರುಹೋಗಿ, ಅವುಗಳಿಂದ ಹೊರಬರಲಾಗದೆ ತಿಣುಕುತ್ತಾ ಬದುಕು ಸವೆಸುತ್ತಿರುವುದನ್ನೂ ನಾವು ಕಾಣುತ್ತಲೇ ಇದ್ದೇವೆ.

ಹದಿನೆಂಟನೇ ಶತಮಾನದಲ್ಲಿ ಪರಂಗಿಯವರು ದಲಿತರ ದಮನ ಮಾಡಲು ಷಡ್ಯಂತ್ರಗಳನ್ನು ರೂಪಿಸುತ್ತಿದ್ದ ಸಂದರ್ಭವಿತ್ತಷ್ಟೆ. ಆಗ ಕ್ರಿಶ್ಚಿಯನ್ನರು ಹಾಗೂ ಮುಸ್ಲಿಂ ಲೀಗ್‌ಗಳು ದಲಿತರ ದಮನವನ್ನು ಖಂಡಿಸಿದ್ದವು. ಆಶ್ಚರ್ಯವೆಂದರೆ ಹಿಂದೂ ಸಮಾಜದಲ್ಲೆ ಹುಟ್ಟಿ, ಬೆಳೆದು, ಹಿಂದೂ ಸಮಾಜಕ್ಕಾಗಿಯೇ ಜೀವ ಮುಡಿಪಾಗಿಟ್ಟ ದಲಿತರನ್ನು ಸವರ್ಣೀಯರು ತುಚ್ಛವಾಗಿ, ನಿಕೃಷ್ಟವಾಗಿ ನಾಯಿ, ನರಿಗಳಿಗಿಂತಲೂ ಹೀನವಾಗಿ ಕಾಣುತ್ತಿದ್ದರು. ಇಂದಿನ ಇಪ್ಪತ್ತೊಂದನೇ ಶತಮಾನದಲ್ಲಿ ಜಾಗತಿಕ ಅಲೆ ಎಲ್ಲೆಲ್ಲಿಯೂ ಹರಡುತ್ತಿದ್ದರೂ ಇಂತಹ ಹೀನ ಬೆಳವಣಿಗೆಗಳು ಇನ್ನೂ ನಮ್ಮ ನಡುವೆ ಜೀವಂತವಾಗಿವೆ. ಸ್ಮೃತಿ ಮೊದಲಾದ ಶಾಸ್ತ್ರಗಳಲ್ಲಿ ಶೂದ್ರರನ್ನು 'ದರಿದ್ರರು, ಲೋಕನಿಂದಕರು' ಎಂದು ಸಾರುತ್ತ ದಲಿತರ ಆತ್ಮಾಭಿಮಾನವನ್ನು ಕಸಿದುಕೊಳ್ಳಲಾಗಿತ್ತು. ಅಲ್ಲದೆ, ಪುರೋಹಿತಶಾಹಿವರ್ಗ ತಮ್ಮ ಉಳಿವು, ಸ್ವಾರ್ಥ, ಅಧಿಕಾರಕ್ಕಾಗಿ ತಮ್ಮಷ್ಟಕ್ಕೆ ತಾವೇ ದೇವರಾದರು, ದೇವರಿಗಿಂತ ಮಿಗಿಲಾದರು, ದೇವರ ಅಧಿಪತಿಗಳೂ ಆದರು. ಆದರೂ ಹುಟ್ಟಿದ ಮೇಲೆ ಬದುಕಲೇಬೇಕಲ್ಲ, ಸಾವು ನಿಶ್ಚಿತವಾದರೂ ಅದನ್ನು ಹುಡುಕಿಕೊಂಡು ಹೋಗುವುದು ಮಹಾಪಾಪ(?) ಎಂದು ಬೋಧಿಸಿದರು.

ಇದರಿಂದ ದಲಿತರು ಸಾವನ್ನು ಹುಡುಕಿಕೊಂಡು ಹೋಗುವ ಬದಲು ಸಾವೇ ದಲಿತರ ಮನೆ ಬಾಗಿಲಿಗೆ ಬಂದಂತಾಯಿತು. ದಲಿತರು ಸಾವಿನ ಹಂಗು ತೊರೆದರೂ ಅವರನ್ನು ಮಾರಿಯಾಗಿ ಅದು ಕಾಡುತ್ತಿತ್ತು. (ಉದಾ: ಶೂದ್ರರು ನಾಯಿ, ಬೆಕ್ಕು, ಕಪ್ಪೆ, ಕತ್ತೆ, ಕಾಗೆ, ಗೂಬೆಗಳಿಗೆ ಸಮಾನವಾದವರು. ಆದ್ದರಿಂದ ಇವರ ಹತ್ಯೆಗೆ ಶಿಕ್ಷೆಯಿಲ್ಲ.) ಈ ರೀತಿ ಶೂದ್ರರು ಸಾವಿನ ಕಡೆ ವಾಲದಂತೆ ಮಾಡುವುದೇ ಅಲ್ಲದೆ, ತಮಗೆ ಶೂದ್ರನ ಅವಶ್ಯಕತೆ ಇಲ್ಲ ಎನಿಸಿದಾಗ ಅವರನ್ನು ತಮ್ಮ ಮನೋಯಿಚ್ಛೆ ಹತ್ಯೆ ಮಾಡುವ ಒಳಸಂಚು. ಇಂದಿಗೂ ಇಂತಹ ನೂರಾರು ಪ್ರಕರಣಗಳು ಸರ್ವೇಸಾಮಾನ್ಯವಾಗಿಬಿಟ್ಟಿವೆ.

ಬಹುಮುಖ್ಯವಾಗಿ ಶಿಕ್ಷಣ - ಸಮಾನತೆಯಲ್ಲಿ ಶೂದ್ರರನ್ನು ದೂರೀಕರಿಸಿದ್ದ ಮನುಕುಲ ಶೂದ್ರ ಮತ್ತು ಅಸ್ಪೃಶ್ಯ ಸ್ತ್ರೀಯನ್ನು ಮೇಲ್ಜಾತಿಯವರು ಮೋಜಿಗಾಗಿ, ತೀಟೆಗಾಗಿ ತಮ್ಮ ವಾಂಛೆಗಳನ್ನು ತೀರಿಸಿಕೊಳ್ಳಲು ಆಟಿಕೆ ವಸ್ತುವಾಗಿ ಬಳಸಿಕೊಳ್ಳುತ್ತಿದ್ದರು. ಇಂದಿಗೂ ಈ ಶೋಷಣೆಗಳು ಜೀವಂತವಾಗಿವೆ. ದಲಿತನು ಈ ಘೋರ ವಂಚನೆ-ಮೋಸದ ಬಲೆಯಲ್ಲೇ ಈ ಹೊತ್ತು ಬದುಕುತ್ತಿದ್ದಾನೆ. 'ವಿವಸ್ತ್ರ ಸೇವೆ' ಅಥವಾ 'ಬೆತ್ತಲೆ ಸೇವೆ' ಎಂಬ ಹೆಸರಿನಲ್ಲಿ ದಲಿತೇತರರು ಸಾಮೂಹಿಕ ಅತ್ಯಾಚಾರ ಎಸಗುತ್ತಿದ್ದಾರೆ. ಅದನ್ನೇ ನಂಬಿಕೆ (ಮೂಢ) ಎಂಬ ಭ್ರಮೆಯಲ್ಲಿ 'ದೇವರಿಗೆ ಸೇವೆ ಸಲ್ಲಿಸಿದೆವು. ಇನ್ನು ಮುಂದೆ ಯಾವುದೇ ಪೀಡೆ, ಪಿಶಾಚಿಯ ಕಾಟ ನಮಗೆ ಇರುವುದಿಲ್ಲ' ಎನ್ನುವ ಸ್ಲೋಗನ್ನಿನೊಂದಿಗೆ ಆತ್ಮತೃಪ್ತಿಯನ್ನು ದಲಿತನಾದವನು ಕಾಣುತ್ತಿದ್ದಾನೆ.

ಸ್ಪೃಶ್ಯ ಸಮಾಜವು ಗೌಡಿಕೆ ಹೆಸರಿನಲ್ಲಿ ತಮ್ಮ ತೀಟೆ ತೆವಲುಗಳಿಗಾಗಿ ಅಸ್ಪೃಶ್ಯರ ಕೇರಿಯ ಹರೆಯದ ಹೆಣ್ಣು ಮಕ್ಕಳನ್ನು ಬಳಸಿಕೊಳ್ಳುತ್ತಿದೆ. ಯಾರದೋ ತೆವಲಿಗೆ, ದ್ವೇಷಕ್ಕೆ ಸಾಮೂಹಿಕವಾಗಿ ಗಂಡಂದಿರನ್ನು ಕೊಂದು, ಹೆಂಡಂದಿರನ್ನು ಹಾಳುಗೆಡವಿ ಮುಂಡೆಯರನ್ನೋ, ನಿತ್ಯ ಜಾರೆಯರನ್ನೋ ಮಾಡಿ, ನೂರಾರು ಮಕ್ಕಳನ್ನು ಅನಾಥರನ್ನಾಗಿ ಮಾಡುತ್ತಿರುವ ದೃಶ್ಯಗಳು ಈಗ ಸರ್ವೇಸಾಮಾನ್ಯವಾಗಿವೆ. ಕಳೆದ ಆಗಸ್ಟ್ ೨೮ರಂದು ಬಳ್ಳಾರಿಯ ವಣೇನೂರಿನಲ್ಲಿ ನಡೆದ ಯರ್ರೆಮ್ಮಳ ಬೆತ್ತಲೆ ಮೆರವಣಿಗೆ, ಸೆಪ್ಟಂಬರ್ ೧೭ರಂದು ತುಮಕೂರಿನ ಅಜ್ಜನಹಳ್ಳಿ ಶಾಂತಮ್ಮಳ ಅರೆಬೆತ್ತಲೆ ಮೆರವಣಿಗೆಗಳು ಈಚಿನ ಉದಾಹರಣೆಗಳಾಗಿವೆ.

### ಅನಾದಿಯೆಂಬ ಆದಿ

ಅನಾದಿ ಕಾಲದಿಂದಲೂ ಶೋಷಣೆಯನ್ನು ಮಿಸುಕಾಡದಂತೆ ಸವರ್ಣೀಯರು ಎಚ್ಚರವಹಿಸುತ್ತಾ ಬಂದಿರುವುದಲ್ಲದೆ, ಅದನ್ನು ತಮ್ಮ ಮುಷ್ಟಿಯಲ್ಲಿ ಅದುಮಿಟ್ಟುಕೊಂಡು ಬರುತ್ತಿದ್ದಾರೆ. ಇಂಡಿಯಾದ ವ್ಯವಸ್ಥೆಯು ಅದನ್ನು ಪುಷ್ಟೀಕರಿಸುತ್ತಲೇ ಬರುತ್ತಿರುವುದು ವಿಪರ್ಯಾಸ. ಇದರಿಂದ ಹೊರಬರಲು ಶೋಷಿತರು ಪ್ರಯತ್ನಿಸುತ್ತಲೇ ಬರುತ್ತಿರುವುದು ಮೇಲ್ನೋಟದ ಮಾತಲ್ಲ. ಇಂಡಿಯಾದಲ್ಲಿ ಜಾತಿ ವ್ಯವಸ್ಥೆಯು ಚಾಲ್ತಿಗೆ ಬಂದದ್ದು ಮನುವಿನ ತರುವಾಯ ಎಂದು ಹೇಳಲಾಗುತ್ತಿದೆ. ಆದರೆ, ಅದಕ್ಕಿಂತ ಪೂರ್ವದಲ್ಲಿ ಶೋಷಣೆ ಇರಲಿಲ್ಲವೇ? ಇತ್ತು. ಆದರೆ ವರ್ಣವ್ಯವಸ್ಥೆ ಚಾಲ್ತಿಯಲ್ಲಿದ್ದು, ಅದಕ್ಕೂ ಪೂರ್ವದಲ್ಲಿ ಗುಲಾಮಿ ಪದ್ಧತಿ ಚಾಲ್ತಿಯಲ್ಲಿದ್ದುದು ಈಗ ಎಲ್ಲರೂ ತಿಳಿದ ವಿಷಯವೇ. ಈ ಗುಲಾಮಿ ಪದ್ಧತಿಯ ಆರಂಭದ ದಿನಗಳಿಗಿಂತ ಪೂರ್ವದಲ್ಲೇ ಶೋಷಣೆ ಹೆಪ್ಪುಗಟ್ಟಿತ್ತು ಎಂಬುದಕ್ಕೆ ಹಲವು ಪುರಾವೆಗಳಿವೆ.

ಈ ಶೋಷಣೆಯ ವಿರುದ್ಧ ಅನೇಕಾನೇಕ ಗಣ್ಯಾತಿಗಣ್ಯರು ಧ್ವನಿ ಎತ್ತಿದರೂ ಮಡಿವಂತರ ಕುತಂತ್ರದಿಂದ ಏನೂ ಪ್ರಯೋಜನ ಆಗದಿರುವುದು ವಿಪರ್ಯಾಸ. ಬುದ್ಧ, ಬಸವಣ್ಣ, ಜ್ಯೋತಿಬಾ ಫುಲೆ, ನಾರಾಯಣಗುರು, ಪೆರಿಯಾರ್, ಡಾ|| ಬಿ. ಆರ್. ಅಂಬೇಡ್ಕರರನ್ನು ಒಳಗೊಂಡಂತೆ ಅನೇಕ ಚಿಂತಕರು ಶೋಷಣೆಯ ವಿರುದ್ಧ ಮೆಟ್ಟಿನಿಂತು ಅದಕ್ಕಾಗಿ ತಮ್ಮ ಜೀವನವನ್ನೇ ಮುಡಿಪಾಗಿಟ್ಟರು. ಇವರುಗಳ ನಿಲುವು ಒಂದೇ ಆದರೂ ಕಂಡುಕೊಂಡ ದಾರಿ ಹಲವು. ಆದರೆ ಬುದ್ಧ ಹಾಗೂ ಬಸವಣ್ಣನಿಗಿಂತ ಡಾ|| ಬಿ. ಆರ್. ಅಂಬೇಡ್ಕರರು ಕಂಡುಕೊಂಡ ದಾರಿ ಭಿನ್ನವಾಗಿದೆ. ಅವರು ಬೌದ್ಧಮತಕ್ಕೆ ಸೇರಿದರು. ಆದರೆ, ಈಚಿನ ದಿನಗಳಲ್ಲಿ ಬೌದ್ಧರಾಗುತ್ತಿರುವುದು ರಾಜಕಾರಣದ ನೆಲೆಯೇ ಹೊರತು ಬೇರೆ ಅಲ್ಲವೆಂಬುದು ಸೂರ್ಯಸ್ಪಷ್ಟ!

*'ಮನುಷ್ಯ ಯೋಚಿಸುತ್ತಾನೆಂಬುದು ಜೀವಶಾಸ್ತ್ರೀಯ ಸತ್ಯ, ಆದರೆ ಏನು ಯೋಚಿಸುತ್ತಾನೆಂಬುದು ಸಾಮಾಜಿಕ ಸತ್ಯ' ಎನ್ನುತ್ತಾನೆ ಪ್ರೊ. ಥಾರ್ನ್‌ಡೈಕ್. ಆ ಮಾತನ್ನು ಮೂಲವಾಕ್ಯವನ್ನಾಗಿ ಹೊಂದಿ ಶೋಷಣೆಯ ಚಾರಿತ್ರಿಕ ಹಿನ್ನೆಲೆ ಮತ್ತು ಸಾಮಾಜಿಕ ಸಂಬಂಧಗಳನ್ನಿಲ್ಲಿ ಗುರುತಿಸಲಾಗಿದೆ.*

ಶೋಷಣೆಗೆ ಹಲವಾರು ಕಾರಣಗಳಿವೆ. ನನ್ನ ದೃಷ್ಟಿಯಲ್ಲಿ ಶೋಷಣೆಗೆ ಜಾತಿ ಮತ್ತು ಮತ ಎರಡೂ ಕಾರಣಗಳೇ. ಈ ವ್ಯವಸ್ಥೆ ಮತದ ಹೆಸರನ್ನು ಹೇಳಿಕೊಂಡು ಜಾತಿ ಮತ್ತು ಶೋಷಣೆಯನ್ನು ಎತ್ತಿಹಿಡಿಯುತ್ತಲೇ ಬರುತ್ತಿರುವುದು ನಮ್ಮ ದೌರ್ಭಾಗ್ಯ. ಅಲ್ಲದೆ ಮತದ ಅಮಲಿನಲ್ಲಿ ಜಾತಿಯನ್ನು ಯಾವ ಅರಿವೂ ಇಲ್ಲದೆ ಸೃಷ್ಟಿಸಿಕೊಂಡು, ಹಾರೈಸುತ್ತಾ, ಆರಾಧಿಸುತ್ತಾ ಬರುತ್ತಿದೆ. ಆದರೆ ಬಹು ಮುಖ್ಯವಾಗಿ ನಾವು ಗಮನಿಸಬೇಕಾದ ಸತ್ಯಸಂಗತಿಯೊಂದಿದೆ. ಇಂಡಿಯಾ ಯಾವುದೇ ಒಂದು ಮತವನ್ನಾಗಲಿ ಅಥವಾ ಜಾತಿಯನ್ನಾಗಲಿ ಸಲಹುತ್ತಿಲ್ಲ. ಇಲ್ಲಿ ಹಲವು ಮತ, ಹೆಜ್ಜೆಗೊಂದು ಜಾತಿ, ಜಾತಿಗೆ ನೂರು ಉಪಜಾತಿಗಳು ರೂಪಿತವಾಗುತ್ತಿವೆ. ಈ ಜಾತಿ-ಮತಗಳನ್ನು ಸಮತೋಲನವಾಗಿ ರೂಪಿಸಲು ೫೭ ವರ್ಷ ಇಂಡಿಯಾವನ್ನು ಆಳಿದ ಮತ್ತು ಆಳುತ್ತಿರುವ ಸರ್ಕಾರಗಳು ಯಾವುದೇ ಪ್ರಯತ್ನ ಮಾಡದೇ ಇರುವುದು ಗಮನಿಸಿದಾಗ, ಆಳುತ್ತಿರುವ ವ್ಯವಸ್ಥೆಯಾಗಲಿ, ಹಿಂದೆ ಆಳಿದ ವ್ಯವಸ್ಥೆಯಾಗಲಿ ಜಾತಿ-ಮತವನ್ನು ನಿರ್ಮೂಲನೆ ಮಾಡುವ ಮನೋಭಾವನೆ ಹೊಂದಿರಲಿಲ್ಲ ಎಂಬುದನ್ನು ಭಾರತೀಯ ಇತಿಹಾಸದುದ್ದಕ್ಕೂ ನಾವು ಕಾಣುತ್ತೇವೆ.

### ಜಾಗೃತಗೊಂಡ ಅಸ್ಪೃಶ್ಯ

ಇಂಡಿಯಾವನ್ನು ಆಳಿದ, ಆಳುತ್ತಿರುವ ಹಾಗೂ ಆಳಲು ಹೊರಟಿರುವ ಪಕ್ಷಗಳು ಒಡೆದು ಆಳುವ

ನೀತಿಯನ್ನು ಅನುಸರಿಸುತ್ತಿವೆ. ಪರಂಗಿಯರ ಆಗಮನದ ಪೂರ್ವದಲ್ಲಿಯೆ ಶೋಷಿತರು ಜಾಗೃತರಾಗಿದ್ದರು. ಈ ಜಾಗೃತಿಯು ಅಂದಿನಿಂದ ಇಂದಿನವರೆಗೂ ಹಲವು ಏರಿಳಿತಗಳ ನಡುವೆಯೂ ನಿರಂತರವಾಗಿ ಪರಿವರ್ತನೆ, ಹಕ್ಕು, ಸಮಾನತೆಗಾಗಿ ಸಂಘಟಿತವಾಗುತ್ತಲೇ ಬರುತ್ತಿದೆ. ಈ ಸಮತೋಲನವನ್ನು ಹೋಗಲಾಡಿಸಲು ಬೇರೆ ಬೇರೆ ಜಾತಿ ಮತದವರು (ಕೆಲವೆ) ಪ್ರಯತ್ನಿಸಿ ವಿಫಲಗೊಂಡು ಮಣ್ಣಲ್ಲಿ ಮಣ್ಣಾದರು. ಒಂದು ಆಧಾರದ ಮೇಲೆ ಹೇಳುವುದಾದರೆ ಜಾಗೃತಿ ಎನ್ನುವುದು ತೀರ ಇತ್ತೀಚಿನದಲ್ಲ. ಮೇಲೆಯೇ ಹೇಳಿರುವಂತೆ ಇದು ಬುದ್ಧನ ಕಾಲದಲ್ಲಿಯೇ ಹೆಪ್ಪುಗಟ್ಟಿ ಹೆಮ್ಮರವಾಗಿತ್ತು ಎಂಬುದಕ್ಕೆ ಅವರು ಮಾಡಿರುವ ಪ್ರಯತ್ನಗಳು ಸಾಕ್ಷಿಯಾಗಿವೆ. ಬುದ್ಧ ಮನುಷ್ಯತ್ವವನ್ನು ಎತ್ತಿಹಿಡಿದು ವರ್ಣಾಶ್ರಮವನ್ನು ಮೆಟ್ಟಿನಿಂತ, ಬಸವಣ್ಣ ಗುಡಿಗಳ ಸಾಂಸ್ಥಿಕ ಸ್ವರೂಪವನ್ನು ಬದಿಗೊತ್ತಿ ಶೂದ್ರರನ್ನು ಗುಡಿಗಳೊಳಗೆ ಬಿಟ್ಟುಕೊಟ್ಟ ಮತ್ತು ಅಂತರ್ಜಾತಿ ವಿವಾಹ ಪದ್ಧತಿಗೆ ಮಹತ್ವ ಕೊಟ್ಟು ಆ ನಿಟ್ಟಿನಲ್ಲಿ ಪ್ರಯತ್ನಿಸಿದ. ಆದರೆ ಅದನ್ನೆಲ್ಲ ವ್ಯವಸ್ಥಿತವಾಗಿ ಸವರ್ಣೀಯರು ನಿರಾಕರಿಸುತ್ತಾ, ವಿರೋಧಿಸುತ್ತಲೇ ನಡೆದರು.

ಬಸವಣ್ಣನ ಸಮಕಾಲೀನ ಶೂದ್ರರಾದ ದೇವರ ದಾಸಿಮಯ್ಯ, ಅಲ್ಲಮಪ್ರಭು, ಮಾದರ ಚೆನ್ನಯ್ಯ, ಡೋಹಾರ ಕಕ್ಕಯ್ಯ, ಸಮಗಾರ ಹರಳಯ್ಯ, ಅಂಬಿಗರ ಚೌಡಯ್ಯ, ಸೂಳೆ ಸಂಕವ್ವೆ, ಕಾಳವ್ವೆ, ಗಾಳದ ಕನ್ನಯ್ಯ, ಮಾಚಿದೇವ, ಮಾರಿತಂದೆ ಇನ್ನೂ ಅನೇಕರು ವಚನ ಚಳುವಳಿಯ ಮೂಲಕ ಬಂಡೆದ್ದರು. ವಚನ ಚಳುವಳಿಯು ಎಷ್ಟು ತೀವ್ರವಾಗಿತ್ತು ಎಂಬುದಕ್ಕೆ ಅವರು ರಚಿಸಿರುವ ವಚನಗಳೇ ಸಾಕ್ಷಿ. ಇವು ಶೂದ್ರರಲ್ಲಿಯ ಪ್ರೌಢಿಮೆ, ನೋವು, ಸಂಕಟ, ಸಂಘಟನೆ ಮತ್ತು ಅಸಹಾಯಕತೆಗಳ ಪ್ರತಿರೂಪವಾಗಿವೆ. ಬಸವಣ್ಣ ಕಾಲವಾದ ತರುವಾಯ ಅವನ ಅನುಯಾಯಿಗಳೆಲ್ಲ ಲಿಂಗವಂತರಾದರು. ಅವರ ಪಾಲಿಗೆ ಬಸವಣ್ಣ ದೈವಸಂಭೂತನಾಗಿ ರಾರಾಜಿಸಿದ. ಆದರೆ ಯಾರೊಬ್ಬರೂ ಶೂದ್ರರನ್ನು, ಶೂದ್ರ ವಚನಕಾರರನ್ನು ಅನುಯಾಯಿಗಳಾಗಿ ಸ್ವೀಕರಿಸುವ ಉದಾರ ವ್ಯಕ್ತಿತ್ವ ತೋರಲಿಲ್ಲ. ಬಸವಣ್ಣನ ನಂತರ ಇವರೆಲ್ಲ ತಮ್ಮ ಮೂಲ ಕುಲಕಸುಬುಗಳಿಗೆ ಮರಳಿದ್ದು ಸಂಕಟದ ಮಾತು. ಹಾಗೆಂದ ಮಾತ್ರಕ್ಕೆ ಬಸವಣ್ಣ ಇರುವವರೆಗೂ ಇವರೆಲ್ಲ ನೆಮ್ಮದಿಯ ಬದುಕು ನಡೆಸಿದ್ದರು ಎಂದಲ್ಲ; ತಮ್ಮ ಕಾಯಕದಲ್ಲಿಯೇ ಆತ್ಮತೃಪ್ತಿಯನ್ನು, ಪರಿವರ್ತನೆ ಎಂಬ ಕನಸಿನ ರಕ್ಕಸನನ್ನು ಹಗಲಿನಲ್ಲಿ ಹೊತ್ತುಕೊಂಡೆ ಬದುಕಿದವರು. ಆದರೆ ಆದದ್ದು ಏನು?

ಇಲ್ಲಿ ಒಂದು ಪ್ರಸಂಗವನ್ನು ಹೇಳಲೇಬೇಕು. ಇಲ್ಲವಾದರೆ ತಪ್ಪಾದೀತು. ಸಮಗಾರ ಹರಳಯ್ಯ ಬಸವಣ್ಣನಿಗೆ ತನ್ನ ಹಾಗೂ ತನ್ನ ಸಹವರ್ತಿ(ಪತ್ನಿ)ಯ ತೊಡೆಯ ಚರ್ಮವನ್ನೇ ತೆಗೆದು ಕೆರ ಮಾಡಿಕೊಟ್ಟ, ಇದರರ್ಥ ಆ ಕಾಲದಲ್ಲಿಯೇ (ಗುಲಾಮಿ ಪದ್ಧತಿಯ ಕಾಲ) ಶೂದ್ರರು ಎಷ್ಟು ನೊಂದಿದ್ದರು, ಮತ್ತು ಪರಿವರ್ತನೆಗಾಗಿ ಎಷ್ಟು ಹಂಬಲಿಸುತ್ತಿದ್ದರೆಂಬುದು ತಿಳಿಯುತ್ತದೆ. ವಚನ ಪುರಾಣದಲ್ಲಿ ಹೇಳಿದಂತೆ "ಸಮಗಾರ ಹರಳಯ್ಯ ಶರಣ ಬಸವಣ್ಣನಿಗೆ ಶರಣು! ಎಂದು ನಮಸ್ಕರಿಸುತ್ತಾನೆ. ಅದಕ್ಕೆ ಪ್ರತಿಯಾಗಿ ಬಸವಣ್ಣ *ಶರಣು ! ಶರಣು !!* ಎಂದು ಎರಡು ಬಾರಿ ನಮಸ್ಕರಿಸುತ್ತಾನೆ. ಅದು ಹರಳಯ್ಯನ ಮನದಲ್ಲಿ ಪಾಪಪ್ರಜ್ಞೆಯಾಗಿ ಕಾಡುತ್ತದೆ. ಈ ಪಾಪದಿಂದ ಮುಕ್ತಿಯನ್ನು ಹೊಂದಲು ತನ್ನ ಹಾಗೂ ತನ್ನ ಸಹವರ್ತಿ(ಪತ್ನಿ)ಯ ತೊಡೆಯ ಚರ್ಮ ತೆಗೆದು ಬಸವಣ್ಣನಿಗೆ ಕೆರ ಮಾಡಿಕೊಡುತ್ತಾನೆ. ಆದರೆ ಬಸವಣ್ಣ ಅದನ್ನು ಮೆಟ್ಟಿಕೊಳ್ಳಲು ನಾನು ಅನರ್ಹನೆಂದೂ, ಇದು ಕೂಡಲಸಂಗಮನಿಗೆ ಸಲ್ಲಬೇಕಾದುದೆಂದೂ, ಅವನ ಹೊರತು ಬೇರಾರೂ ಇದನ್ನು ಮೆಟ್ಟಲು ಅರ್ಹರಲ್ಲವೆಂದೂ ತಲೆಯ ಮೇಲೆ ಹೊತ್ತು ನಡೆಯುತ್ತಾನೆ''. ಇದು ವಚನದಲ್ಲಿ ಬರುವ ಸನ್ನಿವೇಶವಾದರೂ, ನಾವು ಆ ದೃಷ್ಟಿಕೋನವನ್ನು ಬದಲಿಸಿ ನೋಡಿದಾಗ ಅವರ ನೋವಿನ ಅರಿವಾಗುತ್ತದೆ. ದೇಹದಲ್ಲಿ ಅತಿ ಮೃದುವಾದ ಅಂಗ ತೊಡೆ. ಇದರ ಚರ್ಮ ತೆಗೆಯುವಾಗ ಆಗುವ ನೋವಿಗಿಂತ, ಅವನು ತಲೆತಲಾಂತರದಿಂದ ಅನುಭವಿಸಿದ ಸಂಕಟಕ್ಕಿಂತ, ಪಾಪಪ್ರಜ್ಞೆಯೇ ಅವನಲ್ಲಿ ಎದ್ದು ಕಾಣುತ್ತವೆ. ಈ ನೋವಿನ ಮುಂದೆ ಬೇರೆ ಎಲ್ಲಾ ನೋವುಗಳು ತೃಣಸಮಾನವಾಗಿ ಕಾಣುತ್ತವೆ. ಅಲ್ಲದೆ, ಆ ನೋವುಗಳು ಅವನಲ್ಲಿ ರೂಢಿಗತವಾಗಿದ್ದವು. ಈ ನಿಟ್ಟಿನಲ್ಲಿ ಶರಣರಿಗಿಂತ ತಳವರ್ಗದವರ ಮಾನವತ್ವ ಎದ್ದು ಕಾಣುತ್ತದೆ.

**ಶೂದ್ರಾತಿಶೂದ್ರರು ಮತ್ತು ಅಸ್ಪೃಶ್ಯರು**

ಈಗ ಶೂದ್ರಾತಿಶೂದ್ರರ ಚಾರಿತ್ರಿಕ ನೆಲೆಯನ್ನು ಯೋಚಿಸಬಹುದು. ಶೋಷಣೆ ಆರಂಭವಾಗುವುದಕ್ಕೆ ಪೂರ್ವದಲ್ಲಿ ಶೋಷಿತರು ಏನಾಗಿದ್ದರು? ಈ ಶೂದ್ರರು ಯಾರು ? ಯಾಕಾಗಿ ಶೂದ್ರರಾದರು? ಇದರ ನಿವಾರಣೆ ಯಾವಾಗ? ಎಂದಿಗೆ? ಇದು ಸಾಧ್ಯವೆ? ನಾವು ಏನಾಗಬೇಕು? ಏನಾಗಿದ್ದೇವೆ? ಹೀಗೇಕಾಗಿದ್ದೇವೆ? ಈ ಬಗೆಯ ಹತ್ತಾರು ಪ್ರಶ್ನೆಗಳು ಕಾಡುತ್ತಿವೆ.

ಈ ಪ್ರಶ್ನೆಗಳಿಗೆ ನಿಖರವಾಗಿ ಉತ್ತರ ಕಂಡುಕೊಳ್ಳಲು ಸಾಧ್ಯವಿಲ್ಲ. ಆದರೆ ಒಂದು ಮೂಲದ ಪ್ರಕಾರ ಹೇಳುವುದಾದರೆ ಗುಲಾಮಿ ಪದ್ಧತಿಯ ಕಾಲದ ತರುವಾಯ ಅಂದರೆ, ಆರ್ಯರ ಆಗಮನದ ನಂತರ ಇಂಡಿಯಾದಲ್ಲಿ ವರ್ಣವ್ಯವಸ್ಥೆ ಚಾಲ್ತಿಗೆ ಬಂದಿತು. ಶೂದ್ರರು ವರ್ಣಗಳ ಒಂದು ಭಾಗ. ಆದರೂ ನಾಲ್ಕು ವರ್ಣಗಳಲ್ಲಿ ಶೂದ್ರರದು ನಾಲ್ಕನೆಯ (ಕೊನೆ ಮತ್ತು ಕೀಳು) ವರ್ಣ. ಈ ವರ್ಣವ್ಯವಸ್ಥೆಯಲ್ಲಿ ಶೂದ್ರರನ್ನು ಕೆಳದರ್ಜೆಯಲ್ಲಿ ಇಡುವುದಷ್ಟೇ ಅಲ್ಲದೆ ಮತ (ಧರ್ಮ) ನಿರ್ಧರಿಸುವ ಮತ್ತು ನಿರ್ಧರಿಸಿರುವ ವ್ಯವಸ್ಥೆಯಿಂದ ಮೇಲೇಳದಂತೆ ತಡೆಗಟ್ಟುತ್ತಾ ಅವರು ಅಗೌರವಗಳಿಗೂ ಅನರ್ಹತೆಗಳಿಗೂ ಪಾತ್ರರಾದವರು ಎಂದು ಹೇಳಿತು. ಮುಖ್ಯವಾಗಿ ಶೂದ್ರರನ್ನು ನಾಗರಿಕತೆ, ಸಂಸ್ಕೃತಿ, ಗೌರವ, ಸ್ಥಾನ ಮತ್ತು ವ್ಯಾಸಂಗದಿಂದ ವಂಚಿತರನ್ನಾಗಿ ಮಾಡುತ್ತಾ ಬಂದಿರುವುದು. ಡಾ|| ಬಿ. ಆರ್. ಅಂಬೇಡ್ಕರರು ಹೇಳುವಂತೆ *'ಶೂದ್ರರು ಸೂರ್ಯವಂಶದ ಆರ್ಯ ಸಮುದಾಯಗಳಲ್ಲಿನ ಒಂದು ಭಾಗ. ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯಗಳನ್ನು ಮಾತ್ರ ಆರಂಭದಲ್ಲಿ ಆರ್ಯ ಸಮಾಜವು ಮಾನ್ಯ ಮಾಡಿತ್ತು. ಶೂದ್ರರು ಪ್ರತ್ಯೇಕ ಒಂದು ವರ್ಣ ಆಗಿರಲಿಲ್ಲ. ಶೂದ್ರರು ಹಿಂದು-ಆರ್ಯ ಸಮಾಜದಲ್ಲಿ ಕ್ಷತ್ರಿಯ ವರ್ಣದ ಒಂದು ಭಾಗವಾಗಿದ್ದರು. ಅಲ್ಲದೆ ಪ್ರಾಚೀನ ಆರ್ಯ ಸಮುದಾಯಗಳಲ್ಲಿ ಕೆಲ ಶ್ರೇಷ್ಠ ಹಾಗೂ ಪ್ರಬಲ ರಾಜರಾಗಿದ್ದರು. ಶೂದ್ರ ರಾಜ ಮತ್ತು ಬ್ರಾಹ್ಮಣರ ಆಂತರಿಕ ಕಲಹಗಳಿಂದ ಬ್ರಾಹ್ಮಣರು ಶೂದ್ರ , ರಾಜರಿಗೆ ಉಪನಯನ ಮಾಡುವುದನ್ನು ನಿರಾಕರಿಸಿದರು. ಇದರಿಂದ ಸಾಮಾಜಿಕವಾಗಿ ಕೆಳದರ್ಜೆಗಿಳಿದರು. ತದನಂತರ ಈ ಬೇರ್ಪಟ್ಟ ಜನರೆ ಶೂದ್ರರಾದರು. ಅರ್ಥಾತ್ ನಾಲ್ಕನೆ ವರ್ಣವಾದರು.'*

ಕಾಲಕ್ರಮೇಣ ಈ ಶೂದ್ರರು ಬದಲಾಗುತ್ತಾ ಅಸ್ಪೃಶ್ಯರಾಗಿ, ಈಗ ದಲಿತರಾಗಿ ಮಾರ್ಪಟ್ಟಿದ್ದಾರೆ. ಆದರೆ ಶೂದ್ರರ ಬದುಕು, ಜೀವನ ಮಾತ್ರ ಎಳೆಯಷ್ಟೂ ಬದಲಾಗದೇ ಇರುವುದೂ ನಮ್ಮ ದೌರ್ಭಾಗ್ಯ.



**ಶೋಷಣೆಯ ಚಾರಿತ್ರಿಕ ನೆಲೆ**

*ಬ್ರಾಹ್ಮಣೋಽಸ್ಯ ಮುಖಮಾಸೀದ್ಬಾಹೂ ರಾಜನ್ಯಃ ಕೃತಃ।*
*ಊರೂ ತದಸ್ಯ ಯದ್ವೈಶ್ಯಃ ಪದ್ಭ್ಯಾಂ ಶೂದ್ರೋ ಅಜಾಯತ॥*

(ಋಗ್ವೇದ ೧೦. ೬೦.೧೨)

ಋಗ್ವೇದದ ಪುರುಷಸೂಕ್ತದಲ್ಲಿ ಬರುವ ಈ ಮಂತ್ರ ಒಬ್ಬ ವಿರಾಟ್(ಬ್ರಹ್ಮ) *ಪುರುಷನ ಮುಖವಾಗಿ ಬ್ರಾಹ್ಮಣನು, ಬಾಹುಗಳು ಕ್ಷತ್ರಿಯನಾಗಿ, ತೊಡೆಗಳು ವೈಶ್ಯರಾಗಿ ಹಾಗೂ ಶೂದ್ರರು ಪಾದಗಳಿಂದ* ಜನಿಸಿದರು ಎಂದು ಹೇಳುತ್ತದೆ. ಇಲ್ಲಿ ಮುಖ್ಯವಾಗಿ ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯ ದೇಹದ ಮೇಲ್ಭಾಗಗಳಾದರೆ, ಶೂದ್ರನು ಮಾತ್ರ ಪಾದಗಳಿಂದ ಜನಿಸಿದವನು ಅಥವಾ ಪಾದಗಳಾಗಿಯೇ ಇರುವವನು ಎಂಬ ಅರ್ಥವನ್ನು ಕೊಡುತ್ತದೆ. ಆದರೆ ಇಲ್ಲಿ ಎರಡು ಬಗೆಯ ಅರ್ಥಗಳನ್ನು ಗ್ರಹಿಸಬಹುದಾಗಿದೆ. ಮೊದಲನೆಯದು: ಇಲ್ಲಿ ಬರುವ ನಾಲ್ಕು ವರ್ಣಗಳು ಒಬ್ಬ ವ್ಯಕ್ತಿಯಿಂದ ಅಥವಾ ವ್ಯಕ್ತಿಯನ್ನಾಗಿ ರೂಪಿಸಿರುವುದು. ಮುಖ್ಯವಾಗಿ ಯಾವುದೇ ವ್ಯಕ್ತಿ ಚಾಲನೆಗೆ ಅತ್ಯವಶ್ಯವಾಗಿ ಬೇಕಾದಂತಹ ಅಂಗ ಕಾಲುಗಳು ತಾನೇ ? ಇದಿಲ್ಲದೆ ಯಾವುದೇ ವ್ಯಕ್ತಿ ಅಥವಾ ವ್ಯವಸ್ಥೆಯು ಅಂಗಹೀನವಾಗುತ್ತದೆ. ಉದಾ: ಕಾಲಿಲ್ಲದ ಒಬ್ಬ ಕುಂಟ ಪ್ರತಿಯೊಂದಕ್ಕೂ ಪರರನ್ನು ಅವಲಂಬಿಸಿರುತ್ತಾನೆ. ಆದರೆ ಇಲ್ಲಿ ಅವಲಂಬಿಸಲು ಯಾರೂ ಇಲ್ಲ. ಶೂದ್ರರೇ ಈ ವ್ಯವಸ್ಥೆಯ ಜೀವಾಳ ಎಂಬುದು ಗಮನಿಸಬೇಕಾಗಿದೆ. ಶೂದ್ರರನ್ನು ಹೊರತು ಪಡಿಸಿದರೆ ವ್ಯವಸ್ಥೆಯು ಅಂಗವಿಕಲವಾಗುವುದು. ಎರಡನೆಯದು : ಆರಂಭದಲ್ಲಿಯೆ ಶೂದ್ರರನ್ನು ಪಾದಗಳಿಂದ ಜನಿಸಿದವನು ಅಥವಾ ಇರುವವನು ಎಂದು ಸಾರುವುದರೊಂದಿಗೆ ಅವನನ್ನು ನಿಕೃಷ್ಟವಾಗಿ ಕಾಣುತ್ತಿರುವುದು. ಈ ಎರಡು ಅಂಶಗಳನ್ನು ಬಹುಮುಖ್ಯವಾಗಿ ಗ್ರಹಿಸಬೇಕಾಗಿದೆ.

ಅಂದಿನಿಂದ ಇಂದಿನವರೆಗೂ ತುಳಿತ, ನೋವು, ಅಸಹಾಯಕತೆಗಳಿಂದ ಅಸ್ಪೃಶ್ಯ ಬಳಲುತ್ತಲೇ ಬರುತ್ತಿದ್ದಾನೆ. ಅಸ್ಪೃಶ್ಯರು ಎಂಬ ಪದ ಅಧಿಕೃತವಾಗಿ ಕ್ರಿ.ಪೂ. ೪೦೦ರ ಸುಮಾರಿನಲ್ಲಿ ಅಸ್ತಿತ್ವಕ್ಕೆ ಬಂದಿತು ಎಂದು ಹೇಳಲಾಗಿದೆ. ಮೂಲತಃ ಬುಡಕಟ್ಟು ಜನರಾದ ಅಸ್ಪೃಶ್ಯರು ಕಾಲಕ್ರಮೇಣ ಬುಡಕಟ್ಟುಗಳಿಂದ ಒಡೆದು ಹೊರಬಂದು ಪಂಗಡಗಳಾದ ಜನರೇ ಅಸ್ಪೃಶ್ಯರಾದರು ಎಂದು ಹೇಳಲಾಗಿದೆ. ಆದರೆ ಅಸ್ಪೃಶ್ಯ ಮತ್ತು ಶೂದ್ರರ ಬದುಕು ಭಿನ್ನವಾಗೇನೂ ಇಲ್ಲ. ಅಸ್ಪೃಶ್ಯ ಮತ್ತು ಶೂದ್ರ ಕೆಳದರ್ಜೆಯಲ್ಲಿ ಇರಲು ಮುಖ್ಯ ಕಾರಣ, ಮತದ ಅಮಲಿನಲ್ಲಿ ಶಾಸ್ತ್ರಗಳು ಅನಂತ, ಅನಾದಿ, ಸತ್ಯ; ಆದ್ದರಿಂದ ಇದರ ಬದಲಾವಣೆ ಅನಗತ್ಯ; ಇವುಗಳನ್ನು ಒಪ್ಪಿಕೊಂಡು ಅಪ್ಪಿಕೊಳ್ಳಲೇಬೇಕು, ಎಂದು 'ಶಾಸ್ತ್ರಜ್ಞ'ರು ಬೋಧಿಸುತ್ತಾ ಬರುತ್ತಿದ್ದಾರೆ. ಅಲ್ಲದೆ ಮತದ ಅನುಯಾಯಿಗಳು ಸಮಾಜದ ಮೇಲೆ ಒತ್ತಡ ಹೇರುತ್ತಾ ಜಡ ಸಮಾಜವನ್ನಾಗಿ ಮಾಡುತ್ತಾ ಬರುತ್ತಿದ್ದಾರೆ. ಜೊತೆಗೆ ಮತವನ್ನು ರಕ್ಷಿಸುತ್ತೇವೆಂದು ಹೇಳುತ್ತಾ ಅದನ್ನು ವ್ಯಾಪಾರದ ವಸ್ತುವನ್ನಾಗಿ ಮಾಡಿಕೊಂಡು ಬರುತ್ತಿದ್ದಾರೆ. ಅವರು ಜಾತಿಯ ಪಟ್ಟಭದ್ರ ಹಿತಾಸಕ್ತಿಗಳನ್ನು ಬೆಂಬಲಿಸುವುದಕ್ಕಾಗಿ ಬುದ್ಧಿಶಕ್ತಿಯನ್ನು ಭ್ರಷ್ಟಗೊಳಿಸಲು ಹಿಂಜರಿಯುವುದಿಲ್ಲ. ಮುಖ್ಯವಾಗಿ ಯಾವುದೇ ಒಂದು ಮತದ ಅಥವಾ ಜಾತಿಯ ಪಟ್ಟಭದ್ರ ಹಿತಾಸಕ್ತಿಗಳ ಆಮಿಷಗಳಿಗೆ ಅಸ್ಪೃಶ್ಯ ಬಹುಬೇಗ ಬಲಿಯಾಗುತ್ತಾನೆ. ಅವನ ಮುಗ್ಧತೆಯನ್ನು ಬಂಡವಾಳ ಮಾಡಿಕೊಂಡದ್ದೇ ಅಲ್ಲದೆ ಆಮಿಷಗಳನ್ನು ತೋರಿಸುತ್ತಲೇ ಅವನನ್ನು ಗುಲಾಮನನ್ನಾಗಿ ಮಾಡಿಕೊಂಡು ಬಂದಿದ್ದಾರೆ.

ಈ ಅನಂತ, ಅನಾದಿಗಳನ್ನು ನಂಬಿಕೊಂಡು, ಪರಜಾತಿ ಮತ್ತು ಮತದವರು ನೀಡುತ್ತಿರುವ ಆಮಿಷಗಳಿಗೆ ತಲೆಯೊಡ್ಡುತ್ತಾ ಸಾಗಿರುವ ಈ ಅಸ್ಪೃಶ್ಯ ಮೂಲತಃ ಬುಡಕಟ್ಟಿನವನಾದುದರಿಂದಲೂ, ಹಾಗೂ ಅದರ ಪೂರ್ವಿಕರೂ ಆಗಿರುವುದರಿಂದಲೂ ಇದನ್ನು ಒಪ್ಪಿಕೊಂಡೇ ಬರುತ್ತಿದ್ದಾನೆ. ಅಸ್ಪೃಶ್ಯ ಹೀಗೆ ಮಡಿವಂತ ಸವರ್ಣೀಯರ ಆಮಿಷಗಳಿಗೆ ಬಲಿಯಾಗುತ್ತಾ ಯುಗಗಳನ್ನೇ ಕಳೆದ. ಆದರೆ ಅಸ್ಪೃಶ್ಯ ಗಾಢವಾಗಿ ನಂಬಿಕೊಂಡಿದ್ದ ಮತ ಮತ್ತು ಆಮಿಷಗಳನ್ನು ನೀಡುತ್ತಿದ್ದ ಮಡಿವಂತ ಸವರ್ಣೀಯರು ಅಸ್ಪೃಶ್ಯತೆಯನ್ನು ಸಲಹುತ್ತಲೇ ನಡೆದರೇ ವಿನಾ, ತೊಲಗಿಸಲು ಪ್ರಯತ್ನಿಸಲೇ ಇಲ್ಲ. ಇದು ನಗ್ನ ಸತ್ಯ. ಹಾಗೂ ಅದು ಬೇಕಾಗಿಯೂ ಇರಲಿಲ್ಲ, ಕಾರಣ ಸ್ಪಷ್ಟ. ಅಸ್ಪೃಶ್ಯತೆ ನಿವಾರಣೆಯಾದರೆ ಇವರನ್ನು ಸಲಹುವವರು ಇಲ್ಲವಾಗುತ್ತಾರೆ. ಈ ಅಂಶ ಒಂದು ಕ್ರೂರಸತ್ಯವಾಗಿ ಇಂದಿಗೂ ಉಳಿದಿದೆ.

**ಮನು ಮತ್ತು ಅಸ್ಪೃಶ್ಯತೆ**

ಮಡಿವಂತ (ಸವರ್ಣೀಯ)ರು ಒಂದು ಕಡೆ ಅಸ್ಪೃಶ್ಯತೆಯನ್ನು ಸಲಹುತ್ತಾ, ಮತ್ತೊಂದು ಕಡೆ ಅಸ್ಪೃಶ್ಯರನ್ನು ಪ್ರಾಣಿಗಳಿಗಿಂತ ನಿಕೃಷ್ಟವಾಗಿ ಕಡೆಗಾಣಿಸುತ್ತಾ ನಡೆದರು. ಈ ವ್ಯವಸ್ಥೆಯನ್ನು ಪುಷ್ಟೀಕರಿಸಲು ಮನು ಬ್ರಾಹ್ಮಣ್ಯವನ್ನು ಸಾರುತ್ತಾ ಅಸ್ಪೃಶ್ಯರನ್ನು ವ್ಯವಸ್ಥಿತವಾಗಿ ತಮ್ಮ ಕಂಟ್ರೋಲ್‌ಗೆ ತೆಗೆದುಕೊಳ್ಳಲು ಸ್ಮೃತಿಯನ್ನು ಬರೆದನು. ಮುಂದೆ ಅದು 'ಮನುಸ್ಮೃತಿ' ಎಂದೇ ಪ್ರಖ್ಯಾತವಾಯಿತು. ಮನುಷ್ಯ-ಮನುಷ್ಯರ ನಡುವಿನ ಕಂದಕವನ್ನು ಇದು ಮತ್ತಷ್ಟು ಬಲಪಡಿಸಿತು. ಅಸ್ಪೃಶ್ಯ ಮತ್ತು ಸವರ್ಣೀಯರು ಇಂಡಿಯಾ (ಹಿಂದೂ-ಧರ್ಮ)ದಲ್ಲೆ ಹುಟ್ಟಿದರೂ, ಅಸ್ಪೃಶ್ಯರನ್ನು ದುಡಿತಕ್ಕಾಗಿ ಅಥವಾ ಸೇವೆ ಮಾಡುವುದಕ್ಕಾಗಿಯೇ ಹುಟ್ಟುವವರು ಎಂದು ಸಾರುವ ಮನುಸ್ಮೃತಿಯ ಸೂತ್ರಗಳನ್ನು ಕೊಂಚ ಗಮನಿಸೋಣ:

*''ಊರ ಹೊರಗೆ ಅಸ್ಪೃಶ್ಯರ ವಾಸಸ್ಥಾನ. ಕತ್ತೆ ಮತ್ತು ನಾಯಿಗಳು ಅವರ ಆಸ್ತಿ.*
*ಹೆಣದ ಮೇಲಿನ ಅರಿವೆಯೇ ಅವರ ಉಡುಗೆ ತೊಡುಗೆ.*
*ಒಡೆದ ಬೋಕಿ ಮತ್ತು ಭಗ್ಗರಿಗಳಲ್ಲಿಯೇ ಅವರ ಊಟ-ಉಪಚಾರ.*
*ಕಟ್ಟಿಗೆ ಮತ್ತು ಕಬ್ಬಿಣದ ವಸ್ತುಗಳೇ ಅವರ ಆಭರಣಗಳು.*
*ಅವರು ನಿರಂತರವಾಗಿ ಅಲೆಮಾರಿ ಜೀವನ ಸಾಗಿಸಬೇಕು.''*

ಮುಂದುವರಿದು : ಇವರಿಗೆ *ಊರೊಳಗೆ ಪ್ರವೇಶವಿಲ್ಲ. ಆದರೆ ರಾಜಾಜ್ಞೆಯ ಮೇರೆಗೆ ಗೊತ್ತುಪಡಿಸಿದ ಸ್ಥಳಗಳಿಗೆ ಅದೂ ಹಗಲಿನಲ್ಲಿ ಮಾತ್ರ ಪ್ರವೇಶ ಮಾಡಿ ನಿರ್ಗತಿಕ ಶವಗಳ ಸಂಸ್ಕಾರ ಮಾಡಬೇಕು.* ಹೀಗೆ ಹೇಳುತ್ತಾ ಅವರಿಗೆ ಅಗತ್ಯವಿದ್ದ ಸಂದರ್ಭಗಳಲ್ಲಿ ಅಸ್ಪೃಶ್ಯರನ್ನು ತುಂಬಾ ವ್ಯವಸ್ಥಿತವಾಗಿ ದುಡಿಸಿಕೊಳ್ಳುತ್ತಾರೆ. ಮುಂದುವರಿದು, *''ಅಸ್ಪೃಶ್ಯರಿಗೆ ಧನಾರ್ಜನೆ ಮಾಡುವ ಸಾಮರ್ಥ್ಯವಿದ್ದರೂ ಧನವನ್ನಾಗಲಿ, ಆಸ್ತಿ-ಪಾಸ್ತಿಯನ್ನಾಗಲಿ ಗಳಿಸಬಾರದು. ಒಂದು ವೇಳೆ ಇದನ್ನು ನಿರ್ಲಕ್ಷಿಸಿ ಗಳಿಸಿದ್ದೇ ಆದಲ್ಲಿ ಯಾವ ಸಂಕೋಚವೂ ಇಲ್ಲದೆ ಅವುಗಳನ್ನು ಬ್ರಾಹ್ಮಣರು ಕಿತ್ತುಕೊಳ್ಳಬಹುದು. ಬ್ರಾಹ್ಮಣರ ಸೇವೆಗಾಗಿಯೇ ಜನಿಸಿದ ಇವರಿಗೆ ಯಾವುದೇ ಆಸ್ತಿ-ಪಾಸ್ತಿ ಗಳಿಸುವ ಹಕ್ಕಿಲ್ಲ. ಅವರ ಗಳಿಕೆ ಎಲ್ಲವೂ ಬ್ರಾಹ್ಮಣನದು'',*

ಎಂದು ಬೋಧಿಸುತ್ತಾ ಅಸ್ಪೃಶ್ಯ (ಶೂದ್ರ)ರನ್ನು ನಿರ್ಗತಿಕ, ದಾರಿದ್ರ್ಯ, ಬಡತನದಲ್ಲಿ ತೊಳಲಾಡುವಂತೆ ಎಚ್ಚರಿಕೆ ವಹಿಸುವುದರ ಜೊತೆಗೆ, ಅಸ್ಪೃಶ್ಯರ ಹಕ್ಕು ಮತ್ತು ಸ್ವಾಭಿಮಾನವನ್ನು ಕಸಿದುಕೊಂಡು ಲೋಕನಿಂದಕರನ್ನಾಗಿ ಮಾಡಲಾಗಿದೆ. ಪ್ರತ್ಯೇಕ ಊರು-ಕೇರಿಗಳನ್ನು ನಿರ್ಮಿಸಿಕೊಂಡು ಬದುಕುವಂತಿದ್ದರೂ ಅವರು ಸ್ವತಂತ್ರರಲ್ಲ. ಅವನಿಗೆ ಕಟ್ಟುಪಾಡುಗಳನ್ನು ವಿಧಿಸಲಾಗಿದೆ. ಶವಗಳ ಮೇಲಿನ ಅರಿವೆಯನ್ನು ಧರಿಸಬೇಕು. ಕೂಳಾಕಿ ಬಿಸಾಡಿದ ಮಡಿಕೆಗಳಲ್ಲಿಯೇ (ಅವು ಒಡೆದಿರುವುವು) ಬೇಯಿಸಿ ತಿನ್ನಬೇಕು ಎಂದು ಕಟು ನಿರ್ಬಂಧ ವಿಧಿಸಲಾಗಿತ್ತು.

*''ಬ್ರಾಹ್ಮಣನಾದವನು ಎಂಥ ಘೋರ ಅಪರಾಧ ಮಾಡಿದರೂ,*
*ಧನಸಹಿತವಾಗಿ ಅವನನ್ನು ಓಡಿಸುವುದೇ ಅವನಿಗೆ ಕೊಡುವ ಶಿಕ್ಷೆ,''*

ಎಂದು ಹೇಳುತ್ತಲೇ ಮುಂದುವರಿದು...

*''ಶೂದ್ರನಿಗೆ ವಿದ್ಯೆ, ಬುದ್ಧಿ, ಅನ್ನ, ಆಯಸ್ಸು,*
*ವ್ರತ, ನಿಯಮ ಮತ್ತು ಮತ ಇವುಗಳೆಲ್ಲವು ನಿಷೇಧ,''*

ಮತ್ತು

*''ಯಾರೊಬ್ಬರು ಕೇಳಿದರೆ ಅಥವಾ ಹೇಳಿದರೆ,*
*ಹೇಳಿದವನು ಮತ್ತು ಕೇಳಿದವನು ಕೂಡಿಯೇ ನರಕಕ್ಕೆ ಹೋಗುವರು,''*

ಎಂದು ಧರ್ಮ(ಮತ)ದಿಂದ ಬೆದರಿಕೆಯನ್ನು ಒಡ್ಡಲಾಗಿದೆ. ಹಾಗೆಯೇ ಮುಂದುವರಿದು...

*''ಯಾರೊಬ್ಬ ಶೂದ್ರನು ಮತದ ಬಗ್ಗೆ ಪ್ರಶ್ನಿಸಿದರೆ ಅಥವಾ ಕೇಳಿದರೆ*
*ಕಾದ ಎಣ್ಣೆಯನ್ನು ಅವನ ಕಿವಿ ಮತ್ತು ಮೈಗೆ ಸುರಿಯುವುದು.*
*ಹೀಯಾಳಿಸಿದರೆ ಅಥವಾ ನಿಂದಿಸಿದರೆ*
*ಅವನ ನಾಲಿಗೆ ಮತ್ತು ಜನನೇಂದ್ರಿಯಗಳನ್ನು ಕತ್ತರಿಸಲಾಗುವುದು.''*

ಹೀಗೆ ಅನೇಕ ಕಟ್ಟುಪಾಡುಗಳನ್ನು ವಿಧಿಸುತ್ತಾ ಶೂದ್ರರನ್ನು ನಿಕೃಷ್ಟವಾಗಿ ಹಾಗೂ ನಪುಂಸಕರನ್ನಾಗಿ ಮಾಡುತ್ತಾ ಬರುತ್ತಿದ್ದ ಕಾಲವದು. ಅನಿವಾರ್ಯವೋ ಅಥವಾ ರೋಗರುಜಿನಗಳಿಂದಲೋ ಮುಂದಕ್ಕೆ ಒಂದು ಹೆಜ್ಜೆಯನ್ನು ಇಡಲಾರದಂಥ ಪರಿಸ್ಥಿತಿಯಲ್ಲಿ ಮೈಮರೆತು ''ಬ್ರಾಹ್ಮಣ ಸವರ್ಣೀಯರ ಪಕ್ಕ

---

ನಾಗಾಲೋಟ
ಅ. ರಾ. ಮಿತ್ರ

**ಸರಕಾರಿ ಅಧಿಕಾರಿ**

ಮಳೆಯಿಲ್ಲದ ಮೋಡ ನೀರಿಲ್ಲದ ಭೂಮಿ
ಹೊಳಪಿಲ್ಲದ ಕನ್ನಡಿ
ಅಂದರೆ ಯಾವುದೂರೀ ?
''ಸರಕಾರಿ ಅಧಿಕಾರಿ ಮುಖಾರೀ !''

**ಕೋಷ್ಟಕ - ೧ ಅಸ್ಪೃಶ್ಯರ ಹೋರಾಟದಿಂದ ಸಾರ್ವತ್ರಿಕವಾಗಿ ಲಭಿಸಿದ ಪ್ರತಿಫಲಗಳ ಪಕ್ಷಿನೋಟ**

| (ಫೆಬ್ರವರಿ ೭, ೧೯೩೩ರ ವಾರದ ಅಂತ್ಯಕ್ಕೆ) | (ಜುಲೈ ೧೫, ೧೯೩೩ರ ವಾರದ ಅಂತ್ಯಕ್ಕೆ) |
|---|---|
| ೧. ಉತ್ತರ ಕಲಕತ್ತಾದಲ್ಲಿ ಒಂದೂವರೆ ಲಕ್ಷದ ವೆಚ್ಚದಲ್ಲಿ ನಿರ್ಮಾಣಗೊಂಡ ಒಂದು ದೇವಾಲಯಕ್ಕೆ ಮುಕ್ತ ಪ್ರವೇಶ.<br>೨. ಮದ್ರಾಸ್ ಜಿಲ್ಲೆಯ ಗಾಂಜಾಂನ ಭಾಪುರ ಎಂಬ ಹಳ್ಳಿಯಲ್ಲಿ ಒಂದು ದೇವಾಲಯಕ್ಕೆ ಪ್ರವೇಶ.<br>೩. ಪಂಜಾಬ್‌ನ ಜಲಂಧರ್‌ನ ನವ್‌ರಾನಿಯದಲ್ಲಿ ಠಾಕೂರ್ ದ್ವಾರದ ಒಂದು ದೇವಾಲಯಕ್ಕೆ ಮುಕ್ತ ಪ್ರವೇಶ<br>೪. ಒರಿಸ್ಸಾದ ಕಟಕ್ ಜಿಲ್ಲೆಯ ಜಯಪುರದ ಗೌರಿಪುರದಲ್ಲಿ ಮೂರು ಬಾವಿಗಳ ನಿರ್ಮಾಣಕ್ಕೆ ಸಮ್ಮತಿ.<br>೫. ಉತ್ತರ ಪ್ರದೇಶದ ಆಗ್ರದಲ್ಲಿಯ ವಜೀಪುರ ಮತ್ತು ನಿಕಿಗಾಲಿ ಎಂಬಲ್ಲಿ ಒಂದೊಂದು ಬಾವಿಗಳಿಗೆ ಮುಕ್ತ ಪ್ರವೇಶ.<br>೬. ಮದ್ರಾಸ್‌ನ ತಿರುಚನಾಪಲ್ಲಿಯಲ್ಲಿ ಓರ್ವ ಬ್ರಾಹ್ಮಣ ಸಾಮೂಹಿಕ ಉಪಯೋಗಕ್ಕಾಗಿ ಮೂರು ಬಾವಿಗಳನ್ನು ನಿರ್ಮಿಸಲು ಹಣ ನೀಡಿದ್ದು.<br>೭. ಉತ್ತರ ಪ್ರದೇಶದ ಮೀರಜ್ ಜಿಲ್ಲೆಯ ಬಚ್ ರೋಬಾದಲ್ಲಿ ಒಂದು ಉಚಿತ ಶಾಲೆ.<br>೮. ರಾಜಪುಟಾಣದ ಮೆಟ್ಟಾ ಜಿಲ್ಲೆಯಲ್ಲಿ ಒಂದು ಶಾಲೆ.<br>೯. ರಾಜಪುಟಾಣದ ಜಯಪುರದ ಫತ್ತೇಪುರ, ಚಿಮನ್ ಮತ್ತು ಅಭಯಾಪುರದಲ್ಲಿ ಒಂದೊಂದು ಶಾಲೆಗಳಿಗೆ ಮುಕ್ತಪ್ರವೇಶ.<br>೧೦. ಉತ್ತರ ಪ್ರದೇಶದ ಫರೂಕಾಬಾದ್‌ನ ಫತ್ತೇಘರ್‌ನಲ್ಲಿ ಒಂದು ಶಾಲೆಗೆ ಪ್ರವೇಶ.<br>೧೧. ಉತ್ತರ ಪ್ರದೇಶದ ಮುತ್ರದಲ್ಲಿ ಮೂರು ರಾತ್ರಿ ಶಾಲೆಗಳನ್ನು ತೆರೆಯಲಾಯಿತು.<br>೧೨. ಉತ್ತರ ಪ್ರದೇಶದ ಗೋರಖಪುರ ಜಿಲ್ಲೆಯಲ್ಲಿ ಮೂರು ರಾತ್ರಿ ಶಾಲೆಗಳನ್ನು ತೆರೆಯಲಾಯಿತು.<br>೧೩. ಉತ್ತರ ಪ್ರದೇಶದ ಗೋರಖಪುರ ಜಿಲ್ಲೆಯ ಹಟ ತಹಸೀಲ್ ಎಂಬಲ್ಲಿ ಒಂದು ರಾತ್ರಿ ಶಾಲೆ.<br>೧೪. ಹರಿಜನರಿಗೆ ಅನೇಕ ಸೌಲಭ್ಯಗಳನ್ನು ಒದಗಿಸುವಂತೆ ಪಲಿಟಾನ (ಕಾಥಿವಾರ) ವಿಧಾನಸಭೆಯು ಬಹುಮತದಿಂದ ಗೊತ್ತುವಳಿಯನ್ನು ಸ್ವೀಕರಿಸಿದೆ.<br>೧೫. ಹರಿಜನರ ಸ್ಥಿತಿಗತಿ ಸುಧಾರಿಸಲು ಮದ್ರಾಸ್‌ನ ಸೊಂಡೂರು ಸಂಸ್ಥಾನವು ಒಂದು ಸ್ಥಾಯಿ ಸಮಿತಿಯನ್ನು ನೇಮಿಸಿದೆ.<br>೧೬.ಗೋರಖಪುರ ಜಿಲ್ಲೆಯ ಖಾಶಿ ಬಳಿಯ ಹರಿಜನರು ಸತ್ತ ಪ್ರಾಣಿಗಳ ಸೇವನೆಯನ್ನು ತ್ಯಜಿಸಿದ್ದಾರೆ.<br>೧೭. ಬಸಂತ ಪಂಚಮಿಯ ಉತ್ಸವದಂದು ಬಿಹಾರದಲ್ಲಿಯ ಮುಜಫರ್‌ಪುರದಲ್ಲಿ ಹರಿಜನ ಸೇವಾ ಸಂಘದ ಆಶ್ರಯದಲ್ಲಿ ಸವರ್ಣೀಯ ಹಿಂದೂಗಳು ಸೇರಿ ಶ್ರೀ ಚತುರ್ಭುಜ ನಾಥಾಜೀ ದೇವಾಲಯದ ವಸಂತೋತ್ಸವವನ್ನು ಆಚರಿಸಲಾಗಿದೆ. | ೧. ಉತ್ತರ ಆರ್ಕಾಟ್ ಜಿಲ್ಲೆಯಲ್ಲಿ ಹರಿಜನರಿಗೆಂದೇ ಎಸ್.ಯು.ಎಸ್. ಘಟಕ ಮೂರು ವಾಚನಾಲಯಗಳನ್ನು ತೆರೆದಿದೆ.<br>೨. ಮಧುರೆ ಜಿಲ್ಲೆಯ ಎಸ್.ಯು.ಎಸ್. ಘಟಕ ಹರಿಜನ ವಿದ್ಯಾರ್ಥಿಗಳನ್ನು ವಿರಾಗನೂರು ತಾಲೂಕು ಬೋರ್ಡಿನ ಶಾಲೆಗೆ ಸೇರಿಸಿದ್ದಾರೆ.<br>೩. ಮೇಲಾಚೇರಿ ಶಾಲೆಯ ಹರಿಜನ ವಿದ್ಯಾರ್ಥಿಗಳಿಗೆ ಬನಿಯನ್, ಟವಲ್ಲು, ಸ್ಲೇಟು ಇನ್ನಿತರ ವಸ್ತುಗಳನ್ನು ಮಧುರ ಎಸ್. ಯು. ಎಸ್. ಘಟಕ ಉಚಿತವಾಗಿ ವಿತರಿಸಿದೆ.<br>೪. ದೆಹಲಿಯ ರಾಮದಾಸ್ ಕಾಲೇಜಿನ ಪ್ರಾಂಶುಪಾಲರಾದ ಧಡನಿ ಅವರು ತಮ್ಮ ಕಾಲೇಜಿನ ಮೂರು ಹರಿಜನ ವಿದ್ಯಾರ್ಥಿಗಳಿಗೆ ಉಚಿತ ವೇತನ ಹಾಗೂ ವಸತಿ ಸೌಕರ್ಯ ಕಲ್ಪಿಸಿಕೊಟ್ಟಿದ್ದಾರೆ.<br>೫. ಕೊಯಮತ್ತೂರ್ ಜಿಲ್ಲೆಯಲ್ಲಿ ಮೂರು ಬಾವಿಗಳನ್ನು ದುರಸ್ತಿಗೊಳಿಸಿ ನೀಡಲಾಗಿದೆ.<br>೬. ಆಂಧ್ರ ಪ್ರದೇಶದಲ್ಲಿ ಒಂದು ಪಕ್ಷ ಕಾಲಾವಧಿ (ಅಂದರೆ ೫ ವರ್ಷ)ಯಲ್ಲಿ ಒಂದುನೂರ ಇಪ್ಪತ್ತೈದು ಬಾವಿಗೆ ಪ್ರವೇಶ ಹಾಗೂ ಐದು ಬಾವಿ ನಿರ್ಮಾಣಗೊಳಿಸಲು ಸಮ್ಮತಿ ನೀಡಲಾಗಿದೆ.<br>೭. ದಕ್ಷಿಣ ಆರ್ಕಾಟ್ ಜಿಲ್ಲೆಯಲ್ಲಿ ನಾಲ್ಕು ಬಾವಿಗಳ ನಿರ್ಮಾಣಕ್ಕೆ ಸಮ್ಮತಿ ನೀಡಲಾಗಿದೆ.<br>೮. ಕಲಕತ್ತಾದ ಬೀಬಿಬಗಾನ್ ಬಸ್ತಿಯ ಒಂದು ಹರಿಜನ ಕುಟುಂಬದ ೬೦ ರೂಪಾಯಿ ಸಾಲದ ಹಣವನ್ನು ಎಸ್. ಯು. ಎಸ್. ಘಟಕ ಪಾವತಿ ಮಾಡಿದೆ.<br>೯. ಭೋಲಾಪುರ (ಬೀರ್‌ಭೂಮ್)ದಲ್ಲಿ ೪೫೦ ಹರಿಜನರು ಮದ್ಯಪಾನವನ್ನು ಹಾಗೂ ೧,೨೭೫ ಮೋಚಿಗಳು ಗೋಮಾಂಸ ಭಕ್ಷಣೆಯನ್ನು ತ್ಯಜಿಸಿದ್ದಾರೆ. |

*ಅಥವಾ ಸಮಾನ, ತಿಳಿಯದೆ ಕುಳಿತರೂ ಅಥವಾ ಬಿದ್ದರೂ ಕಾದ ಕಬ್ಬಿಣದ - ಸಲಾಕೆಯಿಂದ ಬರೆ ಕೊಡುವುದೇ ಅಲ್ಲದೆ ಅವನ ಗುದದ್ವಾರವನ್ನು ಕತ್ತರಿಸಲಾಗುತ್ತಿತ್ತು.''* ಅಲ್ಲದೆ ಸತ್ತ ದನಗಳನ್ನು ಒಯ್ಯುವುದೇ ಅಲ್ಲದೆ ಅದನ್ನೇ ತಿನ್ನಬೇಕಾಗಿತ್ತು. ಅಂದರೆ ನಮ್ಮ ಪೂರ್ವಿಕರು ಇನ್ನೆಂತಹ ನೋವನ್ನು ಅನುಭವಿಸಿರಬೇಕು?

*''ಬ್ರಾಹ್ಮಣ ಹತ್ಯೆ ಬ್ರಹ್ಮ ಹತ್ಯೆ ಮಾಡಿದಂತೆ. ಆದ್ದರಿಂದ ಬ್ರಾಹ್ಮಣ ಹತ್ಯೆ ಮಹಾಪಾಪ.''* ಆದ್ದರಿಂದ ಯಾರೂ ಅದನ್ನು ಕನಸು ಮನಸ್ಸಿನಲ್ಲಿಯೂ ಎಣಿಸಬಾರದು. *''ಶೂದ್ರರು ನಾಯಿ, ಬೆಕ್ಕು, ಕಪ್ಪೆ, ಕತ್ತೆ, ಕಾಗೆ ಮತ್ತು ಗೂಗೆಗಳಿಗೆ ಸಮಾನವಾದವರು; ಆದ್ದರಿಂದ ಇವರ ಹತ್ಯೆಗೆ ಶಿಕ್ಷೆಯೇ ಇಲ್ಲ,''* ಎಂದು ಹೇಳುತ್ತಾ ಪೈಶಾಚಿಕ ಬುದ್ಧಿಯನ್ನು ತೋರಿಸುವಲ್ಲಿ ಮೆರೆದರು.

ಈ ನೋವು, ದುಃಖ, ದುಮ್ಮಾನಗಳಿಂದ ಡಾ॥ ಅಂಬೇಡ್ಕರರು ಹೊರತಾಗಲಿಲ್ಲ. ಹತ್ತೊಂಬತ್ತರ ಪೂರ್ವದಲ್ಲಿ ಈ ಎಲ್ಲ ನೋವುಗಳನ್ನು ಉಂಡು ಉಟ್ಟು ಸಾಕಾಗಿ ಡಾ॥ ಅಂಬೇಡ್ಕರರು ಸಿಡಿದೆದ್ದರು. ಅವರು ಶೋಷಣೆಯ ವಿರುದ್ಧ ಬಂಡೇಳುವವರೆಗೂ ಎಲ್ಲ ನೋವು, ದುಃಖ, ದುಮ್ಮಾನ, ಅಸಹಾಯಕತೆಗಳನ್ನೆಲ್ಲ ಮಡಿಲಲ್ಲೆ ಕೆಂಡವಾಗಿಸಿಕೊಂಡು ಅಸ್ಪೃಶ್ಯ ಬದುಕುತ್ತಿದ್ದ. ಅವನು ಡಾ॥ ಅಂಬೇಡ್ಕರರ ಧ್ವನಿಗೆ ಧ್ವನಿಗೂಡಿಸಲು ಹಲವು ವರ್ಷಗಳೇ ಬೇಕಾಯಿತು. ಅಷ್ಟರಮಟ್ಟಿಗೆ ವ್ಯವಸ್ಥೆ ಅಸ್ಪೃಶ್ಯರ ಮೇಲೆ ತನ್ನ ಪ್ರಭಾವ ಬೀರಿದ್ದನ್ನು ನಾವು ಗ್ರಹಿಸಬಹುದಾಗಿದೆ. ಸಮಾಜವು ಏಳಿಗೆ ಹೊಂದಿ ಸುಭಿಕ್ಷವಾಗಿ ಸಾಗಲು ಪ್ರಮುಖ ಪಾತ್ರಧಾರನಾದ ಹಾಗೂ ಇಂಡಿಯಾ ಸಂಸ್ಕೃತಿಗಳೆಲ್ಲದರ ನೇತಾರ ಅಸ್ಪೃಶ್ಯನೇ ಎಂಬುದು ಇಡೀ ಮನುಕುಲಕ್ಕೆ ತಿಳಿದಿರುವ ಸಂಗತಿ. ಇಂಡಿಯಾದ ವ್ಯವಸ್ಥೆಯು ಅದನ್ನು ಸ್ಥಿರೀಕರಿಸುವಲ್ಲಿ ಒಮ್ಮತದ ಮನಸ್ಸು ಮಾಡುವ ಪ್ರಯತ್ನ ಮಾಡಲೇ ಇಲ್ಲ.

ಆರ್ಯರ ಕಾಲದ ತರುವಾಯ, ಅಂದರೆ ಬುದ್ಧನ ಕಾಲಕ್ಕಿಂತ ಪೂರ್ವದಲ್ಲಿಯೇ, ಅಸ್ಪೃಶ್ಯರು ಶೋಷಣೆಯ ವಿರುದ್ಧ ಜಾಗೃತರಾದಂತೆ ಕಂಡರೂ ಮಾನಸಿಕವಾಗಿ ತಮ್ಮ ಸ್ಥಿರತೆಯನ್ನು ಕಾಯ್ದುಕೊಳ್ಳುವಲ್ಲಿ ವಿಫಲವಾಗಿದ್ದಾರೆ. ಅಲ್ಲದೆ ಅನಾದಿ ಕಾಲದಲ್ಲಿಯೇ ಅಸ್ಪೃಶ್ಯರು ಜಾಗೃತರಾಗಿದ್ದರೂ, ಶೋಷಣೆ ಮತ್ತು ಅಸ್ಪೃಶ್ಯತೆ ಇಂದಿಗೂ ಹೆಮ್ಮರವಾಗಿ ಬೆಳೆಯುತ್ತಲೇ ಇದೆ.

ಪ್ರಮುಖವಾಗಿ ಇಂಡಿಯಾದ ವ್ಯವಸ್ಥೆ ನಂಬಿಕೊಂಡು ಬರುತ್ತಿರುವುದು ಒಡೆದು ಆಳುವ ನೀತಿಯನ್ನಷ್ಟೆ. ಇಂಡಿಯಾದಲ್ಲಿ ರಾಜ್ಯಾಳ್ವಿಕೆ ಬರುವುದಕ್ಕಿಂತ ಪೂರ್ವದಲ್ಲಿಯೇ ಒಡೆದು ಆಳುವ ಪದ್ಧತಿ ಜಾರಿಯಲ್ಲಿದ್ದುದನ್ನು ಕಾಣಬಹುದು. ಉದಾ : ರಾಮಾಯಣ - ಮಹಾಭಾರತವನ್ನು ಆಳವಾಗಿ ಗಮನಿಸಿದಾಗ ತಿಳಿಯುತ್ತದೆ. ಇಂಡಿಯಾವನ್ನು ಪರಂಗಿಯರ ಕೈಗೆ ಒಪ್ಪಿಸಿದ್ದು, ಮತ್ತು ರಾಜರ ಜುಟ್ಟನ್ನು ಅವರ ಕೈಯಿಗೆ ಒಪ್ಪಿಸಿದ್ದು, ಸಾಮ್ರಾಜ್ಯವನ್ನಾಳುತ್ತಿದ್ದ ಮಂತ್ರಿ ಮಹೋದಯರೇ ಎಂಬುದು ತಿಳಿದಾಗ ನೋವಾಗುತ್ತದೆ. ಹಾಗೂ ಪರಂಗಿಯರ ಆಮಿಷಗಳಿಗೆ ಬಲಿಯಾಗಿ ದೇಶದ ಜೊತೆ ತಾವೂ ಅವರ ಗುಲಾಮರಾಗಿ ದೇಶವನ್ನೇ ಹಾಳುಗೆಡಿಸಿದರು. ಪ್ರಸ್ತುತ ಇಂಡಿಯಾದಲ್ಲಿ ಪ್ರಜಾಸತ್ತಾತ್ಮಕ ವ್ಯವಸ್ಥೆ ಜಾರಿಗೆ ಬಂದ ತರುವಾಯ ತಮ್ಮ ಸ್ವಾರ್ಥ, ಅಧಿಕಾರ ಮತ್ತು ಸ್ವಪ್ರತಿಷ್ಠೆಯ ಅಮಲಿನಲ್ಲಿ ಯಾವ ಪಕ್ಷವೂ ಸಮರ್ಥವಾಗಿ ತಮ್ಮ ಅವಧಿಯನ್ನು ಪೂರೈಸಲು ಸಾಧ್ಯವಾಗದೇ ಇರುವುದು ಅಷ್ಟೇ ಸತ್ಯ. ಇದು ಶಿಕ್ಷಣ ಮತ್ತು ಮೀಸಲಾತಿಯಿಂದಲೂ ಹೊರತಾಗಿಲ್ಲವೆಂಬುದು ವಿಷಾದ. ಇಂದಿನ ದಿನಮಾನಗಳಲ್ಲಿ ಒಡೆದು ಆಳುವ ಪದ್ಧತಿಯೇ ಇಂಡಿಯಾವನ್ನು ಆಳುತ್ತಿದೆ ಎಂದರೆ ತಪ್ಪಾಗಲಾರದು.

ಕ್ರಿ.ಶ. ಹದಿನೆಂಟರ ಮಧ್ಯಂತರದಲ್ಲಿ (ವಸಾಹತುಶಾಹಿ ಆರಂಭವಾದ ತರುವಾಯ) ಇಂಡಿಯಾಗೆ ವ್ಯಾಪಾರಕ್ಕಾಗಿ ಬಂದ ಪರಂಗಿಯರ ಕೈಗೆ ನಮ್ಮ ಜುಟ್ಟನ್ನು ನಾವೇ ಕೊಟ್ಟು ಅದರಿಂದ ಬಿಡಿಸಿಕೊಳ್ಳಲು ಶತಮಾನಗಳೇ ಬೇಕಾದವು ಎಂಬುದು ತಿಳಿದ ವಿಷಯವೇ. ಪರಂಗಿಯರ ಒಳಸಂಚನ್ನೇ ಇಂದಿಗೂ ಪಾಲಿಸಿಕೊಂಡು ಸಾಗಿರುವ ನಾವು ಎಷ್ಟರಮಟ್ಟಿಗೆ ಸರಿ ಎಂಬುದು ಪ್ರಜ್ಞಾವಂತರಿಗೆ ಬಿಟ್ಟದ್ದು. ಸ್ವಾತಂತ್ರ್ಯ ಪೂರ್ವದಲ್ಲಿ

ಡಾ॥ ಅಂಬೇಡ್ಕರರ ನೇತೃತ್ವದಲ್ಲಿ ಪುನರಾರಂಭಗೊಂಡ ಜಾಗೃತಿಯು ಶೋಷಣೆಯ ವಿರುದ್ಧ ಮಾತ್ರವಲ್ಲದೆ, ನಿರಂತರವಾಗಿ ಅದನ್ನು ಸಲಹುತ್ತಾ ಬಂದಿರುವ ವ್ಯವಸ್ಥೆಯ ವಿರುದ್ಧವೂ ಆಗಿತ್ತು. ಆ ಸಂದರ್ಭದಲ್ಲಿ ಹಲವರು (ಕೆಲ ಪರಜಾತಿಯವರು) ತಮ್ಮ ಕೈ ಜೋಡಿಸಿದರು. ಹೋರಾಟದ ಸಂಬಂಧವಾಗಿ ಗಾಂಧೀಜಿಯವರೊಂದಿಗೆ ವಾದಿಸುತ್ತಿದ್ದರು. ಇಂತಹ ಅನೇಕ ಬೆಳವಣಿಗೆಗಳಿಂದ ಡಾ॥ ಅಂಬೇಡ್ಕರರು ಹಿಂಸೆ ಮತ್ತು ಹೊಸ ಮಾದರಿ ನೋವುಗಳನ್ನು ಅನುಭವಿಸಬೇಕಾಯಿತು. ಸಾವಿರ ಪೆಟ್ಟು ತಿಂದು ಶಿಲೆ ಒಂದು ಮೂರ್ತಿಯಾಗುವಂತೆ ಅವರು ಅನುಭವಿಸಿದ ಯಾತನೆ, ನೋವು, ಸಂಕಟಗಳೆಲ್ಲವೂ ಅವರನ್ನು ಗಟ್ಟಿಗೊಳಿಸುತ್ತಾ ಹೋಯಿತು. ಅವರು ಛಲಬಿಡದೆ ಮುನ್ನಡೆದರು; ನಿರಂತರವಾಗಿ ಕಾಡುತ್ತಿದ್ದ ಶೋಷಣೆಯಿಂದ ಹೊರಬರಲು ಮಾರ್ಗೋಪಾಯಗಳನ್ನು ಹುಡುಕಿದರು.

**ಶೋಷಣೆಯ ಸಾಮಾಜಿಕ ನೋಟ**

ಪರಜಾತಿಯವರು ನೀಡುತ್ತಿದ್ದ ಆಮಿಷಗಳಿಗೆ ಮತ್ತು ಅವರ ಹಿತಾಸಕ್ತಿಗಳಿಗೆ ತಲೆದೂಗುತ್ತಿದ್ದ ಶೋಷಿತನು ಮಾರ್ಚ್ ೧೯ ಮತ್ತು ೨೦, ೧೯೨೭ರಲ್ಲಿ ಅವುಗಳ ವಿರುದ್ಧ ತಿರುಗಿಬಿದ್ದನು. ಇದನ್ನು *ಮಹಾಡ್ ಸತ್ಯಾಗ್ರಹ ಅಥವಾ ದಲಿತರ ಪ್ರಥಮ ಸ್ವಾತಂತ್ರ್ಯ ಹೋರಾಟ* ಎಂದು ಕರೆಯುತ್ತಾರೆ. ಈ ಹೋರಾಟವು ಮಹಾಡ್ ಕೆರೆಯ ನೀರಿನ ಸ್ಪರ್ಶ ಮಾಡುವುದರೊಂದಿಗೆ ಆರಂಭವಾಯಿತು. ಇಂತಹ ಬೆಳವಣಿಗೆಗಳಿಂದ ಅಸ್ಪೃಶ್ಯರನ್ನು ಶೋಷಣೆ ಮಾಡುತ್ತಿದ್ದ ವ್ಯವಸ್ಥೆ ಅನಿವಾರ್ಯವಾಗಿ ಪೂನಾ ಒಪ್ಪಂದದಲ್ಲಿ ಕೆಲವು ರಾಜಕೀಯ ಹಕ್ಕೊತ್ತಾಯಗಳನ್ನು ನೀಡುವಂತಾಯಿತು. ಡಾ. ಅಂಬೇಡ್ಕರರ ನೇತೃತ್ವದಲ್ಲಿ ಸಂಘಟಿತರಾದ ಶೋಷಿತರು ಸಾರ್ವಜನಿಕ ಕೆರೆ, ಬಾವಿ, ಮಂದಿರಗಳಿಗೆ ಪ್ರವೇಶಿಸಲು ಮುಂದಾದರು. ಇದರ ಕಾರ್ಯವ್ಯಾಪ್ತಿಯು ತುಂಬ ವಿಶಾಲವಾಗಿತ್ತು. ೧೯೩೫ರಲ್ಲಿ ಮುಂಬೈ ಪ್ರಿಸಿಡೆನ್ಸಿಯ ಕೊಲಾಬಾ ಜಿಲ್ಲೆಯ ಮಹಾಡ್‌ನ ಚೌದರ್ ಕೆರೆಯ ನೀರಿಗಾಗಿ, ನಾಸಿಕ್‌ನಲ್ಲಿಯ ಕಾಲಾರಂ ಮಂದಿರ ಪ್ರವೇಶಕ್ಕಾಗಿ ಸತ್ಯಾಗ್ರಹವನ್ನು ನಡೆಸಲಾಯಿತು. ಆದರೆ ಸಾರ್ವಜನಿಕ ಕಳಕಳಿಯ ಬಗ್ಗೆ ಸವರ್ಣೀಯರಲ್ಲಿದ್ದ ಹುಂಬು ನಿಲುವನ್ನು ಗಮನಿಸಿ ಶೋಷಿತ ಹಿಂದೂ ಮತದಿಂದಲೇ ಹೊರನಡೆಯಲು ನಿರ್ಧರಿಸಿ ಸತ್ಯಾಗ್ರಹವನ್ನು ಹಿಂತೆಗೆದುಕೊಳ್ಳಬೇಕಾಯಿತು. ೧೯೩೩ರಲ್ಲಿ ಶ್ರೀರಂಗ ಅಯ್ಯರ್ ಅವರು ಮಂದಿರ ಮಸೂದೆಯನ್ನು ಕೇಂದ್ರ ಶಾಸನ ಸಭೆಯಲ್ಲಿ ಮಂಡಿಸುವಂತೆ ಗಾಂಧೀಜಿ ಸೂಚಿಸಿದ್ದರು. ಆದರೆ ಶ್ರೀರಂಗ ಅಯ್ಯರ್ ಅವರು ಮಂಡಿಸಿದ ಮಸೂದೆ ಶೋಷಿತರ ಪರವಾಗಿದೆ ಎಂಬುದನ್ನರಿತ ಸಮಿತಿ ಅದನ್ನು ತಿರಸ್ಕರಿಸಿತು. ಆದರೆ ನಿರಂತರವಾದ ಹೋರಾಟದಿಂದ ಮತೋಪಾಸಕರು ಅನಿವಾರ್ಯವಾಗಿ ತಮ್ಮ ಅಧೀನದಲ್ಲಿದ್ದ ಕೆರೆ, ಬಾವಿ, ಮಂದಿರಗಳನ್ನು ಬಿಟ್ಟುಕೊಡಬೇಕಾಯಿತು (ಅದರ ಕೆಲ ವಿವರಗಳಿಗೆ ಕೋಷ್ಟಕ-೧ ನೋಡಿ).

ಅಲ್ಲದೆ ಸ್ವಯಂ ಸೇವಾ ಸಂಸ್ಥೆಗಳು ಹರಿಜನರ ಏಳ್ಗೆಗಾಗಿ ದುಡಿಯಲು ಮುಂದಾದವು. ಹರಿಜನರಿಗೆ ಕಡಿಮೆ ಬೆಲೆಯಲ್ಲಿ ದವಸ ಧಾನ್ಯಗಳು ಲಭಿಸುವಂತೆ ಮಳಿಗೆಗಳನ್ನು ತೆರೆಯಲಾಯಿತು. ಬೆಂಕಿ ಅನಾಹುತದ ನಷ್ಟ ಪರಿಹಾರ. ಸವರ್ಣೀಯರು ಹರಿಜನರನ್ನು ಸೇವೆಗೆ ತೆಗೆದುಕೊಳ್ಳಲು ಮುಂದಾಗಿದ್ದರು. ನಿವೇಶನ ಹಂಚಿಕೆ. ಹೀಗೆ ಇನ್ನೂ ಹತ್ತಾರು ಸೌಕರ್ಯಗಳು ಹಾಗೂ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಯಿತು.

**ಸಂವಿಧಾನ-ಶಿಕ್ಷಣ-ಮೀಸಲಾತಿ**

ಜನವರಿ ೨೬, ೧೯೫೦: ಇಂಡಿಯಾ ಸ್ವತಂತ್ರ ಪ್ರಜಾಸತ್ತಾತ್ಮಕ ವ್ಯವಸ್ಥೆಯನ್ನು ಅಂದರೆ ಸಂವಿಧಾನವನ್ನು ಅಂಗೀಕರಿಸಿದ ದಿನ. ವರ್ಷಕ್ಕೆ ಒಂದು ಬಾರಿ ಜನವರಿ ೨೬ನ್ನು ಗಣರಾಜ್ಯ ದಿನಾಚರಣೆ ಎಂಬ ಹೆಸರಿನಲ್ಲಿ ಆಚರಿಸಿ ನಾವು ಸುಮ್ಮನಾಗುತ್ತೇವೆ. ಆದರೆ ದಲಿತರು, ಹಿಂದುಳಿದವರು, ದರಿದ್ರರು ಮತ್ತು ಲೋಕನಿಂದಕರು' ಎನಿಸಿಕೊಂಡವರ ಪಾಲಿಗೆ ಇದು ಮಹತ್ವದ ದಿನವೇ. ಏಕೆಂದರೆ ಡಾ. ಅಂಬೇಡ್ಕರರು ಶೋಷಿತರಿಗೆ ಕಟ್ಟಿಕೊಟ್ಟ *ಬೃಹತ್ ಕೋಟೆ ಅರ್ಥಾತ್ ರಕ್ಷಾಕವಚ.* ಅವರ ನಿರಂತರ ಶ್ರಮ ಹಾಗೂ ಅಪಾರ ವಿದ್ವತ್ತಿನ ಪ್ರತಿರೂಪವಾಗಿ ರೂಪಿತವಾದ ಸಂವಿಧಾನ ೫೦ ವರ್ಷಗಳಲ್ಲಿ ತಲ್ಲಣಿಸಿ ಹೋಯಿತು. ಆದರೆ, ಅವರ ದಲಿತೋದ್ಧಾರದ ಕನಸು ಕನಸಾಗಿಯೇ ಇನ್ನೂ ಉಳಿದಿದೆ.

ಈ ಶೋಷಣೆ ನಿವಾರಣೆಯಾಗಬೇಕಾದರೆ ಶೋಷಿತರೆಲ್ಲರೂ ಶಿಕ್ಷಣ ಪಡೆಯಬೇಕು. ಅವರಿಗೆ ವ್ಯವಸ್ಥೆಯು *ಕಡ್ಡಾಯ ಶಿಕ್ಷಣ* ರೂಪಿಸಿ, ಅದು ಶೋಷಿತರಿಗೆ ತಲುಪುವಂತೆ ಮಾಡಬೇಕು. ಈ ಅಂಶವನ್ನು ಡಾ. ಅಂಬೇಡ್ಕರರು ನಂಬಿದ್ದರು. ಹಾಗೆಯೇ ಸಂವಿಧಾನದಲ್ಲಿ ಅದಕ್ಕೆ ಪ್ರಾತಿನಿಧ್ಯವನ್ನು ನೀಡಿದ್ದರು. ಇಂಡಿಯಾದಲ್ಲಿ ಬಹುಪಾಲು ಶೋಷಿತರಿದ್ದು, ಅವರೆಲ್ಲ ಅನಕ್ಷರಸ್ಥರಾಗಿದ್ದಾರೆ ಎಂದು ಸಂಶೋಧನೆಗಳು ಸ್ಥಿರಪಡಿಸಿವೆ. ಈ ಅನಕ್ಷರತೆಗೆ ಸವರ್ಣೀಯರು ಧರ್ಮದ ಹೆಸರಿನಲ್ಲಿ ಮಾಡಿದ ಮೋಸ, ವಂಚನೆ ಮತ್ತು ಮೂಢನಂಬಿಕೆಗಳು ಮುಖ್ಯ ಪಾತ್ರ ವಹಿಸುತ್ತವೆ. ಜೊತೆಗೆ ಬಡತನ, ದಾರಿದ್ರ್ಯ, ಶಿಕ್ಷಣದ ಬಗ್ಗೆ ಅರಿವಿಲ್ಲದ್ದು ಶೋಷಿತರು ಅನಕ್ಷರಸ್ಥರಾಗಿ ಉಳಿಯಲು ಕಾರಣಗಳಾಗಿವೆ. *"ಶೋಷಿತರು ಸೇವೆ ಮಾಡಲಿಕ್ಕಾಗಿಯೆ ಜನಿಸುವವರು ಮತ್ತು ಅವರಿಗೆ ಶಿಕ್ಷಣ ನಿಷೇಧ"* ಎಂದು ಸಾರುತ್ತಾ, ನಂಬಿಸುತ್ತಾ ಬರುತ್ತಿದ್ದುದು ಒಂದು ಮುಖ್ಯ ಕಾರಣ.

ಶೋಷಿತರು ಕೂಲಿಯಂತಹ ಅವಲಂಬಿತ ವೃತ್ತಿಗಳನ್ನೇ ಅವಲಂಬಿಸಿಕೊಂಡು ಈಗಲೂ ಬದುಕುತ್ತಿದ್ದಾರೆ. ಶೋಷಿತರು ಬಡತನ ರೇಖೆಗಿಂತ ಕೆಳಗಿದ್ದಾರೆ. ಲಕ್ಷಾಂತರ ಜನ ಶೋಷಿತರು ತಮ್ಮ ಜೀವನದ ಆವಶ್ಯಕತೆಗಳಿಗೆ ಒಂದು ರೂಪಾಯಿ ಖರ್ಚು ಮಾಡಲು ಶಕ್ತಿ ಇಲ್ಲವಾಗಿದೆ. ಇಂಡಿಯಾ ರೂಪಿಸಿಕೊಂಡ ಪಂಚವಾರ್ಷಿಕ ಯೋಜನೆಗಳಲ್ಲಿ ದೇಶದ

ಕೋಷ್ಟಕ - ೧

| ಜನಗಣತಿಯ ವರ್ಷ | ಶೇಕಡಾವಾರು ಅನಕ್ಷರಸ್ಥರು | ಶೇಕಡಾವಾರು ಇಳಿಕೆ | ಶೇಕಡಾವಾರು ಏರಿಕೆ |
|---|---|---|---|
| ೧೯೫೧ | ೧೬ % | -- | -- |
| ೧೯೬೧ | ೨೪ % | -- | ೮% |
| ೧೯೭೧ | ೩೦ % | -- | ೬ % |
| ಒಟ್ಟು | | -- | ೧೪ % |

ಆರ್ಥಿಕ ಸ್ಥಿತಿ ಹಾಗೂ ಅನಕ್ಷರತೆಯನ್ನು ೧೦ ವರ್ಷಗಳಲ್ಲಿ ನಿರ್ಮೂಲನ ಮಾಡುವ ಗುರಿಯನ್ನು ಹೊಂದಿ, ಹಲವು ರೀತಿಯ ಕಾರ್ಯಕ್ರಮಗಳನ್ನು ರೂಪಿಸಿದೆ. ಆದರೆ ಇದರಿಂದ ಅಕ್ಷರಸ್ಥರ ಸಂಖ್ಯೆಯಾಗಲಿ, ಆರ್ಥಿಕ ಸ್ಥಿತಿಯಾಗಲಿ ಸುಧಾರಣೆಯಾಗಿಲ್ಲ. ಬದಲಿಗೆ ವೃದ್ಧಿಯಾಗುತ್ತಾ ಸಾಗಿದೆ. ಕಾರಣ ಇಂಡಿಯಾದಲ್ಲಿ ಇರುವ ಲಂಚ-ಭ್ರಷ್ಟಾಚಾರಗಳು. ಇದರಿಂದ ಹಿಂಸೆ ಮತ್ತು ರಕ್ತಪಾತಕ್ಕೆ ನಾಂದಿ ಆಗಿದೆ. ಸಂವಿಧಾನವು ೧೦ ವರ್ಷಗಳಲ್ಲಿ ಅಂದರೆ ೧೯೬೧ರ ವೇಳೆಗೆ ದೇಶದಲ್ಲಿ ಅನಕ್ಷರತೆ ನಿರ್ಮೂಲನೆಯಾಗಬೇಕೆಂದು ಸಾರಿತು. ಅದರ ಫಲಾಫಲಗಳನ್ನು ಅಂಕಿ ಅಂಶಗಳಿಂದ (ಕೋಷ್ಟಕ -೨) ನೋಡೋಣ.

೧೯೫೧ ರಿಂದ ೧೯೬೧ರ ಒಳಗೆ ಹತ್ತು ವರ್ಷಗಳಲ್ಲಿ ಅನಕ್ಷರತೆಯನ್ನು ನಿರ್ಮೂಲನೆ ಮಾಡಬೇಕೆಂಬ ಗುರಿ ಹೊಂದಿದ್ದಿತು. ಆದರೆ ವರ್ಷದಿಂದ ವರ್ಷಕ್ಕೆ ಅನಕ್ಷರತೆಯು ವೃದ್ಧಿಯಾಗುತ್ತಾ ಹೋಗಿರುವುದನ್ನು ಮೇಲಿನ ಕೋಷ್ಟಕದಿಂದ ಕಾಣಬಹುದಾಗಿದೆ. ೧೯೫೧ರಲ್ಲಿ ಶೇ. ೧೬ರಷ್ಟಿದ್ದ ಅನಕ್ಷರಸ್ಥರ ಸಂಖ್ಯೆ ೧೯೭೧ರ ವೇಳೆಗೆ ಶೇ. ೩೦ಕ್ಕೆ ಹೆಚ್ಚಿದೆ. ಅಂದರೆ ೩೪ ಕೋಟಿ ಅನಕ್ಷರಸ್ಥರನ್ನು ಇಂಡಿಯಾ ತನ್ನ ಮಡಿಲಲ್ಲಿ ಬೆಳೆಸಿದ್ದನ್ನು ಕಾಣಬಹುದು.

ಕಾಲಕ್ರಮೇಣ ಇಂಡಿಯಾದ ಜನಸಂಖ್ಯೆ ವೃದ್ಧಿಯಾದಂತೆ ಶಿಕ್ಷಣ ಪಡೆದವರೆಲ್ಲ

ಕೋಷ್ಟಕ - ೩

ಹಿಂದುಳಿದ ವರ್ಗಗಳಿಗೆ ಮೀಸಲಾತಿ ಪ್ರಮಾಣ

(ಕೇಂದ್ರ ಸರ್ಕಾರಿ ಸೇವೆಗಳಲ್ಲಿ)

| ಇಲಾಖೆ | ಕ್ಲಾಸ್-೧ | | ಕ್ಲಾಸ್-೨ | | ಕ್ಲಾಸ್ - ೩-೪ | | ಒಟ್ಟು | |
|---|---|---|---|---|---|---|---|---|
| | ಲಭ್ಯ | ನಿರಾಕೃತ | ಲಭ್ಯ | ನಿರಾಕೃತ | ಲಭ್ಯ | ನಿರಾಕೃತ | ಲಭ್ಯ | ನಿರಾಕೃತ |
| ಇಲಾಖೆ ಮತ್ತು ಸಚಿವಾಲಯಗಳು | ೨.೫೯ | ೪೯.೪೧ | ೩.೯೮ | ೪೮.೦೨ | ೮.೪೧ | ೪೩.೫೯ | ೪.೮೩ | ೪೭.೧೭ |
| ಸ್ವಾಯತ್ತ ಸಂಸ್ಥೆಗಳು | ೫.೦೧ | ೪೬.೯೯ | ೧೧.೭೪ | ೪೦.೨೬ | ೨೦.೯೮ | ೩೦.೦೨ | ೧೪.೪೩ | ೩೭.೫೭ |
| ಕೇಂದ್ರ ಸರ್ಕಾರದ ಸಾರ್ವಜನಿಕ ಉದ್ದಿಮೆಗಳು | ೪.೫೬ | ೪೭.೪೧ | ೯.೯೧ | ೪೨.೦೯ | ೧೫.೭೭ | ೩೬.೨೩ | ೧೦.೬೧ | ೪೧.೩೯ |
| ಒಟ್ಟು | ೪.೬೯ | ೪೭.೩೧ | ೧೦.೬೩ | ೪೧.೩೭ | ೧೮.೯೮ | ೩೩.೫೫ | ೧೨.೫೫ | ೯೯.೪೫ |

ಕಾಂಕ್ರೀಟ್ ಕಾಡಿನತ್ತ ನಡೆದರು. ಇದರಿಂದ ಆರ್ಥಿಕ ಸ್ಥಿತಿ ಸುಧಾರಿಸುವ ಬದಲು ದಾರಿದ್ರ್ಯವು ಹೆಮ್ಮರವಾಗಿ ಬೆಳೆಯಲಾರಂಭಿಸಿತು. ಈ ಬೆಳವಣಿಗೆಯಿಂದ ಉಳ್ಳವರು, ಬಂಡವಾಳಶಾಹಿಗಳು ಖಾಸಗೀಕರಣದ ಕಡೆಗೆ ಮುಖ ತಿರುಗಿಸಿದರು. ಅಲ್ಲಲ್ಲಿ ಕೈಗಾರಿಕಾ ನಗರಗಳು ತಲೆ ಎತ್ತಲಾರಂಭಿಸಿದವು. ಇದರಿಂದಾಗಿ ಇಂದು ಖಾಸಗೀಕರಣ ಎಂಬ ರಕ್ಕಸನನ್ನು ಇಂಡಿಯಾ ಎದುರಿಸಬೇಕಾದಂತಹ ದುರ್ಗತಿ ಬಂದೊದಗಿದೆ.

ಆರ್ಥಿಕ ಮುಗ್ಗಟ್ಟು, ಬೆಲೆ ಏರಿಕೆ, ಬಡತನ, ದಾರಿದ್ರ್ಯ ಇತ್ಯಾದಿಗಳಿಂದ ಶೋಷಿತರು ತಮ್ಮ ಮಕ್ಕಳನ್ನು ಕೂಲಿಗೆ ಕಳಿಸಲು ಆರಂಭಿಸಿದರು. ಇದರಿಂದ ''ಬಾಲಕಾರ್ಮಿಕ''ರು ಎಂಬ ಮತ್ತೊಂದು ಸಮಸ್ಯೆಗೆ ಇಂಡಿಯಾ ಗುರಿಯಾಗಬೇಕಾಯಿತು. ಶಿಕ್ಷಣ ಈ ''ಬಾಲಕಾರ್ಮಿಕ''ರಿಂದ ದೂರವೇ ಉಳಿಯಿತು. ಹೀಗಾಗಿ ಅನಕ್ಷರಸ್ಥರ ಸಂಖ್ಯೆ ದ್ವಿಗುಣಗೊಳ್ಳುತ್ತ ಸಾಗಿತು.

ಶಿಕ್ಷಣದ ಜೊತೆಗೆ ರಾಜಕೀಯ, ಸರ್ಕಾರಿ ಮತ್ತು ಸ್ವಾಯತ್ತ ಸಂಸ್ಥೆಗಳಲ್ಲಿ ಮೀಸಲಾತಿಯನ್ನು ಕಾಯ್ದಿರಿಸುವಂತೆ ಸಂವಿಧಾನದಲ್ಲಿ ಕಾಯಿದೆ ಇದ್ದರೂ ಸ್ವಾತಂತ್ರ್ಯ ಬಂದು ೫೩ ವರ್ಷಗಳು ಗತಿಸಿದರೂ ಮೀಸಲಾತಿ ಇಂದಿಗೂ ಶೋಷಿತರಿಗೆ ತಲುಪಿಲ್ಲ.

ಕೋಷ್ಟಕದಿಂದ (ಕೋಷ್ಟಕ-೩) ತಿಳಿಯುವುದೇನೆಂದರೆ, ಕೆಳ (ನಾಲ್ಕನೆ) ದರ್ಜೆಯಲ್ಲಿ ಹೆಚ್ಚು (ಶೌಚ ಮತ್ತು ಕಸ ಗುಡಿಸುವ) ಹುದ್ದೆಗಳು ಭರ್ತಿಯಾಗಿರುವುದರಿಂದ ಶೋಷಿತರಿಗೆ ಗಣನೀಯ ಪಾಲು ಸಂದಿದೆ ಎಂದು ಹೇಳಲಾಗುತ್ತಿದೆ. ಗಣನೀಯ ಸಂಖ್ಯೆಯಲ್ಲಿ ಮೇಲ್ದರ್ಜೆಯ ಹುದ್ದೆಗಳನ್ನು ನಿರಾಕರಿಸಲಾಗಿದೆ ಎಂಬುದು ಸ್ಪಷ್ಟವಾಗುತ್ತದೆ. ಕ್ಲಾಸ್ ೧, ೨, ೩ ಮತ್ತು ೪ ಸೇರಿ ಶೇ. ೧೨.೫೫ರಷ್ಟು ಹುದ್ದೆಗಳನ್ನು ಭರ್ತಿಮಾಡಿದ್ದು ಶೇ. ೯೯.೪೫ರಷ್ಟು ಹುದ್ದೆಗಳನ್ನು ನಿರಾಕರಿಸಲಾಗಿದೆ. ಹೆಚ್ಚಿನವು ಮೇಲ್ದರ್ಜೆಯ ಹುದ್ದೆಗಳೇ ಆಗಿವೆ. ಹಿಂದುಳಿದ ವರ್ಗಗಳಿಗೆ ಗಣನೀಯ ಪಾಲು ಸಂದಿದೆ ಎಂದು ವಾದಿಸುವ ಬುದ್ಧಿವಂತರು ಇದನ್ನು ಗಮನಿಸಬೇಕಾಗಿದೆ. ಈ ಖಾಲಿ ಹುದ್ದೆಗಳನ್ನು ಭರ್ತಿಮಾಡುವಂತೆ ಅಲ್ಲಲ್ಲಿ ಸಂಘಟನೆಗಳು ಧ್ವನಿ ಎತ್ತಿದರೂ ಪ್ರಯೋಜನ ಲಭಿಸದಂತಾಗಿದೆ. ಮೀಸಲಾತಿಯಿಂದ ವಿದ್ಯಾವಂತ ಹಾಗೂ ಬುದ್ಧಿವಂತ (ಸವರ್ಣೀಯ)ರಿಗೆ ಅನ್ಯಾಯವಾಗುತ್ತಿದೆ ಎಂದು ಕೆಲವರು ವಾದಿಸುತ್ತಾರೆ. ಹಾಗಾದರೆ ಯುಗಾಂತರಗಳಿಂದ ಇವುಗಳನ್ನು ವಂಚಿಸುತ್ತಾ ಬಂದಿರುವ ಸವರ್ಣೀಯ (ಬುದ್ಧಿವಂತ)ರು ಶೋಷಿತರಿಗೆ ಏನನ್ನು ನೀಡಬಲ್ಲರು?

ಮೀಸಲಾತಿ ವಿಷಯದಲ್ಲಿ ತಲೆ ಎತ್ತುವ ಬುದ್ಧಿಜೀವಿ (ಸವರ್ಣೀಯರು)ಗಳು ಶೋಷಣೆಯ ನಿರ್ಮೂಲನೆ ಬಗ್ಗೆ ಏಕೆ ಚಕಾರವೆತ್ತಲಾರರು? ಇದರ ಒಳ ಮರ್ಮವನ್ನು ಸ್ಪಷ್ಟವಾಗಿ ತಿಳಿಯಬಹುದಾಗಿದೆ. ಜೀವನದ ಅತ್ಯವಶ್ಯ ಕೆಲಸಗಳನ್ನು ಶೋಷಿತರು ಬಹಿಷ್ಕರಿಸಿದರೆ ಬುದ್ಧಿಜೀವಿ(ಸವರ್ಣೀಯರು)ಗಳು ಏನು ಮಾಡಿಯಾರು? ಮೂಲತಃ ಶ್ರಮಜೀವಿಗಳಾದ ಶೋಷಿತರು ಹೇಗಾದರೂ ಬದುಕಬಲ್ಲರು. ಅದನ್ನೀಗಾಗಲೇ ಯುಗಾಂತರಗಳಿಂದ ಮಾಡಿಕೊಂಡೇ ಬಂದಿದ್ದಾರೆ. ಆದರೆ ಅವುಗಳನ್ನು ಸವರ್ಣೀಯರು ಮಾಡುವರೆ? ಈ ಸಂದರ್ಭದಲ್ಲಿ ಪ್ರೊ. ರವಿವರ್ಮ ಕುಮಾರ್ ಅವರು ಹೇಳಿರುವ ಮಾತು ನೆನಪಾಗುತ್ತದೆ : ''ನಮ್ಮ ಸಮಾಜದಲ್ಲಿರುವ ಶ್ರೇಣೀಕೃತ ವ್ಯವಸ್ಥೆಗೆ ಜಾತಿ ಅಡಿಪಾಯ. ಸಾಮಾಜಿಕ ಮತ್ತು ಶೈಕ್ಷಣಿಕ ಅಸಮಾನತೆಗೆ ಕಾರಣ. ಈ ನಿಟ್ಟಿನಲ್ಲಿ ಶಿಕ್ಷಣ ಮತ್ತು ಸರಕಾರಿ ಸೇವೆಯಲ್ಲಿ ಮೀಸಲಾತಿ ಆವಶ್ಯಕ. ಇದರಿಂದ ಎಲ್ಲಾ ಜಾತಿಗಳಲ್ಲಿ ಪ್ರತಿಭೆ ಅರಳಲು ಸಾಧ್ಯವಾಗುತ್ತದೆ. ಶಿಕ್ಷಣ, ಸರ್ಕಾರಿ ಸೇವೆಯಲ್ಲೂ ಜನಸಂಖ್ಯೆಗನುಗುಣವಾಗಿ ಪ್ರಾತಿನಿಧ್ಯ ಲಭಿಸಿ ಜಾತಿ-ಜಾತಿಗಳ ನಡುವಿನ ತಾರತಮ್ಯ ಹೋಗಿ ಸಮಾನತೆ ಸೃಷ್ಟಿಯಾಗುತ್ತದೆ. ಎಲ್ಲಾ ಜಾತಿಗಳು ಒಂದು ಸಮಾನ ರೇಖೆ ತಲುಪಿದಾಗ ಜಾತಿ-ಜಾತಿಗಳ ನಡುವಿನ ತಾರತಮ್ಯ ತಂತಾನೆ ನಶಿಸಿಹೋಗುತ್ತದೆ. ಇದರಿಂದ ಸಾಮಾಜಿಕ ಸಮಾನತೆ ಸ್ಥಾಪಿಸಲು ಸಾಧ್ಯವಾಗುತ್ತದೆ. ಮುಖ್ಯವಾಗಿ ಜಾತಿ-ಜಾತಿಗಳ ನಡುವಿನ ವೈಮನಸ್ಯ ತೊಲಗಿಸಲು ಹಾಗೂ ಸಮಾನತೆಯನ್ನು ಸಾರಲು ಮೀಸಲಾತಿಯ ಅವಶ್ಯಕತೆ ಇದೆ.''

ಮೀಸಲಾತಿ ಎಂಬುದು ಒಬ್ಬರಿಂದ ಮತ್ತೊಬ್ಬರು ಕಸಿದುಕೊಳ್ಳುವ ವಸ್ತುವಲ್ಲ ಅಥವಾ ವ್ಯಾಪಾರದ ವಸ್ತುವೂ ಅಲ್ಲ. ಶೋಷಿತನು ಯುಗಾಂತರಗಳಿಂದ ಅನುಭವಿಸಿರುವ ನೋವು ನಿರಂತರವೂ, ಶಾಶ್ವತವೂ ಆಗಕೂಡದು. ಜಾತಿ ಜಾತಿಗಳ ನಡುವಿನ ತಾರತಮ್ಯದ ವಿಮೋಚನೆ ಹಾಗೂ ವ್ಯಕ್ತಿ ಸ್ವಾತಂತ್ರ್ಯದ ಹೋರಾಟದ ಭಾಗವಾಗಿ ಮೀಸಲಾತಿಯನ್ನು ಅರ್ಥಮಾಡಿಕೊಳ್ಳಬೇಕು. ಈ ಅಂಶವನ್ನು ಮನಗಾಣಬೇಕಾಗಿದೆ.

**ಶೋಷಣೆಯ ಬಿಡುಗಡೆ ಹಾದಿ**

ಸ್ವಾತಂತ್ರ್ಯಪೂರ್ವದಲ್ಲಿ ಅಸ್ಪೃಶ್ಯರನ್ನು ''ಹರಿಜನ'' ಎಂದು ಕರೆಯಲಾಗುತ್ತಿತ್ತು. ಅದೇ ರೀತಿ ಬ್ರಿಟಿಷ್ ಆಡಳಿತವು ಅಸ್ಪೃಶ್ಯರನ್ನು ''ನಿಮ್ನವರ್ಗ''ವೆಂದು ಕರೆಯುತ್ತಿತ್ತು. ೧೯೩೫ರಲ್ಲಿ ಬ್ರಿಟಿಷ್ ಭಾರತ ಸರ್ಕಾರವು ''ಹರಿಜನ''ರನ್ನು ''ಪರಿಶಿಷ್ಟ ಜಾತಿ''ಗಳು ಎಂದು ಕರೆಯಿತು. ಅಂದಿನಿಂದ ಅಧಿಕೃತವಾಗಿ ಅಸ್ಪೃಶ್ಯರು ''ಪರಿಶಿಷ್ಟಜಾತಿ''ಗಳಾದರು. ಪರಂಗಿಯರು ಇಟ್ಟ ಈ ನಾಮಕರಣವನ್ನೇ ಇಂದಿಗೂ ಹೊತ್ತು ಕೊಂಡು ಬರುತ್ತಿದ್ದೇವೆ. ಹಲವು ಕಡೆ ''ಪರಿಶಿಷ್ಟ ಜಾತಿ'' ಮತ್ತು ''ಹರಿಜನ'' ಎರಡು ರೀತಿಯಲ್ಲೂ ಕರೆಯುತ್ತಾರೆ. ಆದರೆ ''ಹರಿಜನ'' ಎಂಬ ಪದವನ್ನೇ ಹೆಚ್ಚೆಚ್ಚು ಬಳಕೆ ಮಾಡಲಾಗುತ್ತಿದೆ. ಕಾಲಕ್ರಮೇಣ ಇದರ ವ್ಯಾಪ್ತಿಯು ವಿಶಾಲವಾಗುತ್ತಾ ಹೋಗಿದೆ. ಇಂಡಿಯಾವನ್ನು ಹಾಗೂ ಇಂಡಿಯಾದ ರಾಜ್ಯಗಳನ್ನು ಆಳುತ್ತಿದ್ದ ಸರ್ಕಾರಗಳು ಹಲವು ಪರಜಾತಿಯವರನ್ನು ಪರಿಶಿಷ್ಟ ಜಾತಿಗಳ ಗುಂಪಿಗೆ ಸೇರ್ಪಡಿಸುತ್ತಾ ಹೋಯಿತು. ಇದರಿಂದಾಗಿ ಆಂತರಿಕ ಕಲಹಗಳು, ಅಸೂಯೆಗಳು, ಭಿನ್ನಾಭಿಪ್ರಾಯಗಳು ಸೃಷ್ಟಿಯಾಗಿ ಎಡ-ಬಲ ಎಂಬ ಗುಂಪುಗಳಾಗಿ ವಿಂಗಡನೆಯಾದವು. ಇದನ್ನೆಲ್ಲ ಇಂಡಿಯಾ ಪುಷ್ಟೀಕರಿಸುತ್ತಲೇ ನಡೆದಿದೆ.

ಈ ಆಂತರಿಕ ಭಿನ್ನಾಭಿಪ್ರಾಯ ಮತ್ತು ಅಸೂಯೆಗಳನ್ನು ಸವರ್ಣೀಯರು ಬಂಡವಾಳ ಮಾಡಿಕೊಂಡರು. ಸಂಘಟನೆಗಳು ಇಬ್ಭಾಗವಾದವು. ಪ್ರಜ್ಞಾವಂತರಲ್ಲಿಯೂ ಅಸೂಯೆ, ಭಿನ್ನಾಭಿಪ್ರಾಯಗಳು ತಲೆದೋರಿದವು. ಸರ್ಕಾರಿ ಮತ್ತು ಅನುದಾನಿತ ಸಂಸ್ಥೆಗಳಲ್ಲಿ ಹುದ್ದೆಗಳು ಭರ್ತಿಯಾಗದೆ (ಭಾಗಶಃ ಕೆಳದರ್ಜೆ ಹುದ್ದೆಗಳನ್ನು ಹೊರತುಪಡಿಸಿ) ಹಾಗೇ ಉಳಿದವು. ಆಳಿದ ಹಾಗೂ ಆಳುತ್ತಿರುವ ಸರ್ಕಾರಗಳು ಇದರೆಡೆಗೆ ತಲೆಕೆಡಿಸಿಕೊಳ್ಳುವ ಪ್ರಯತ್ನ ಮಾಡಲೇ ಇಲ್ಲ. ಈ ಎಲ್ಲ ತೆರನಾದ ಕಾರಣಗಳಿಂದಾಗಿ ಶೋಷಿತರಿಗೆ ಲಭಿಸಬೇಕಿದ್ದ ಸೌಲಭ್ಯಗಳು ಸವರ್ಣೀಯರ ಮತ್ತು ಬಂಡವಾಳಶಾಹಿಗಳ ಪಾಲಾಗುತ್ತಿವೆ. ಬಡತನ, ದಾರಿದ್ರ್ಯ ತಾಂಡವವಾಡುತ್ತಿದೆ. ಅವರು ಶಿಕ್ಷಣದಿಂದ ವಂಚಿತರಾಗುತ್ತಿದ್ದಾರೆ. ಬಾಲಕಾರ್ಮಿಕರ ಸಂಖ್ಯೆ ಗಣನೀಯವಾಗಿ ಹೆಚ್ಚುತ್ತಿದೆ. ಈಗಲಾದರೂ ಎಡ-ಬಲ ಎಂದು ತಲೆಕೆಡಿಸಿಕೊಳ್ಳುತ್ತಿರುವ ಸಂಘಟಿತರು ಹೇಗಾದರೂ ಎಚ್ಚರವಾಗಬೇಕಿದೆ.

**ಸಮಸ್ಯೆಗಳ ನಡುವೆ ನಾವು ಮತ್ತು ನೀವು**

ಈ ಎಲ್ಲ ತೆರನಾದ ಸಮಸ್ಯೆಗಳನ್ನು ಪುಷ್ಟೀಕರಿಸುತ್ತಿರುವ ವ್ಯವಸ್ಥೆಯಿಂದ ಇಂದು ಶೋಷಿತನು ಜಾಗೃತನಾಗಬೇಕಾಗಿದೆ. ಪ್ರಸ್ತುತ ಇಂಡಿಯಾವನ್ನು ಆಳುತ್ತಿರುವ ಬಲಪಂಥೀಯ ಸರ್ಕಾರವು ಡಾ. ಅಂಬೇಡ್ಕರರು ಕಟ್ಟಿಕೊಟ್ಟ ಕೋಟೆಯ (ರಕ್ಷಾಕವಚದ) ಒಳಗೆ ನುಸುಳಿ ನಮ್ಮನ್ನು ಅದರಿಂದ ಹೊರದಬ್ಬಿ ಪುನಃ ದಾಸ್ಯಪದ್ಧತಿಗೆ ನೂಕುವ ಹುನ್ನಾರ ನಡೆಸಿದೆ. ಆದರೆ ಆರಂಭಕಾಲದಲ್ಲಿ ಕೊಂಚ ಸಿಡಿದ ಸಂಘಟನೆಗಳು ಈಗ ಅದನ್ನು ತೆಪ್ಪಗೆ ಒಪ್ಪಿಕೊಳ್ಳುತ್ತಿವೆಯೇನೋ(?) ಎನಿಸುತ್ತಿದೆ. ಇಂದಿಗೂ ನಮ್ಮ ಪೂರ್ವಿಕರು (ಹಿರಿಯರು) ಇದರಿಂದ ಮಾನಸಿಕವಾಗಿ ಹೊರಬರದೇ ಇರುವುದನ್ನು ನೋಡಿದ್ದೇವೆ. ಮಕ್ಕಳು (ಶೋಷಿತರು) ಎಷ್ಟೇ ದೊಡ್ಡ ಉದ್ಯೋಗದಲ್ಲಿದ್ದರೂ, ಉನ್ನತ ಸ್ಥಾನದಲ್ಲಿದ್ದರೂ ತಂದೆ ತಾಯಿಯರು (ಶೋಷಿತರು) ಅವರಿವರ ಮನೆ ಮುಸುರೆ ತಿಕ್ಕಲು ಬಲವಂತದಿಂದಲಾದರೂ ಹೋಗುವುದನ್ನು ಕಾಣುತ್ತೇವೆ. ಇದು ಶೋಷಿತರಲ್ಲಿ ಇರುವ ಆತ್ಮಾಭಿಮಾನ ಮತ್ತು ಸ್ವಾಮಿನಿಷ್ಠೆಯನ್ನು ಎತ್ತಿ ತೋರಿಸುತ್ತದೆ. ಆದರೆ ಈಗಲಾದರೂ ಇದರಿಂದ ಹೊರಬರದೆ ಹೋದರೆ ಹೇಗೆ?

ಈ ನಿಟ್ಟಿನಲ್ಲಿ ೧೯೭೦ರ ದಶಕದಲ್ಲಿ ಆರಂಭಗೊಂಡ ಶೋಷಿತ ಜನ ಜಾಗೃತಿಯು ಪುನಃ ಸಂಘಟಿತವಾಗಬೇಕಿದೆ. ನಾವು ಶೋಷಣೆಯ ವಿರುದ್ಧ ಸಂಘರ್ಷಕ್ಕಿಳಿಯಬೇಕಾಗಿದೆ. ಆದರೆ ಇದರ ನೇತೃತ್ವ ವಹಿಸಲು ಸಮರ್ಥ ನಾಯಕತ್ವ ಇಲ್ಲದಿರುವುದು ನೋಡಿದರೆ ಇದು ಅಸಾಧ್ಯವಾದೀತೇನೋ(?) ಪುನಃ ಗುಲಾಮ (ದಾಸ್ಯ) ಗಿರಿಯನ್ನು (ಪ್ರಸ್ತುತ ಈಗಾಗಲೇ ಅಲ್ಲಲ್ಲಿ ಪುನರ್ಘಟಿಸಿರುವುದನ್ನು ಕಾಣಬಹುದು) ಒಪ್ಪಿಕೊಳ್ಳುತ್ತಿದ್ದೇವೇನೋ, ಎಂದೆನಿಸದೆ ಇರಲಾರದು.

''*ಗಾಂಧೀಜಿ, ನನಗೊಂದು ಮಾತೃಭೂಮಿ ಇಲ್ಲ*'' ಎಂದು ಡಾ. ಅಂಬೇಡ್ಕರರು ಗಾಂಧೀಜಿಗೆ ಹೇಳಿರುವ ಮಾತು ಇಂದಿಗೂ ಎಲ್ಲಾ ಪ್ರಜ್ಞಾವಂತರ ಕಿವಿಯಲ್ಲಿ ಗುಯ್‌ಗುಡುತ್ತಿದೆ. ಆದರೆ ಈಗ ತಲೆ ಎತ್ತಿರುವ ಆಂತರಿಕ ಕಲಹ, ಅಸೂಯೆ, ಭಿನ್ನಾಭಿಪ್ರಾಯಗಳನ್ನು ಕಂಡುಂಡವರಿಗೆ ಡಾ. ಅಂಬೇಡ್ಕರ್ ಅವರ ಇಡೀ ಜೀವಮಾನದ ಶ್ರಮವನ್ನು ಬಹಿಷ್ಕರಿಸುತ್ತಿದೆಯೇನೋ (?) ಎನಿಸದಿರಲಾರದು. ಡಾ. ಅಂಬೇಡ್ಕರರು ಮೇಲೆ ಹೇಳಿರುವ ಮಾತಿಗೂ ''*ನಿಮ್ಮ ಮೀಸಲಾತಿಯೂ ಬೇಡ. ನಿಮ್ಮ ಆಳ್ವಿಕೆಯೂ ಬೇಡ. ನಮಗೆ ಸ್ವಾತಂತ್ರ್ಯ ಕೊಟ್ಟುಬಿಡಿ ; ನಮ್ಮನ್ನು ನಾವು ಆಳಿಕೊಳ್ಳುತ್ತೇವೆ*'' ಎಂದು ಹೇಳಿರುವ ಮಾತುಗಳು ಇಂದಿಗೂ ಜೀವಂತ ಹಾಗೂ ಪ್ರಸ್ತುತವಾಗಿವೆ, ಅಲ್ಲವೆ?

**ಶಿವಕುಮಾರ್ ಜ.**
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬
ಹೊಸಪೇಟೆ (ತಾಲೂಕು), ಬಳ್ಳಾರಿ (ಜಿಲ್ಲೆ)

# ಈ ಪೋಟೋ ಪ್ರಸ್ತಾಪ ಯಾರನ್ನು ಹತ್ತಿಕ್ಕಲು?

**ಸನತ್‌ಕುಮಾರ ಬೆಳಗಲಿ**

**ಜಾ**ಗತೀಕರಣ ಮತ್ತು ಖಾಸಗೀಕರಣವೆಂಬ ಪಿಡುಗಿನಿಂದಾಗಿ ದೇಶೀ ಉದ್ದಿಮೆಗಳು ದಿವಾಳಿಯ ಅಂಚಿಗೆ ಬಂದು ನಿಂತಿವೆ. ಕೃಷಿ ಉತ್ಪನ್ನಗಳ ಬೆಲೆ ಕುಸಿದು ರೈತರು ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಾರೆ. ಲಕ್ಷಾಂತರ ಕಾರ್ಮಿಕರು ಬೀದಿ ಪಾಲಾಗುತ್ತಿದ್ದಾರೆ. ಜನತೆಯ ಸಹನೆಯ ಕಟ್ಟೆಯೊಡೆದು ಅದು ಆಳುವ ವರ್ಗದ ವಿರುದ್ಧ ಆಕ್ರೋಶವಾಗಿ ರೂಪಾಂತರಗೊಳ್ಳುತ್ತಿದೆ. ಈ ಜನಾಕ್ರೋಶವನ್ನು ನಿಗ್ರಹಿಸಲು ಪ್ರಭುತ್ವ ಹೆಣಗಾಡುತ್ತಿದೆ. ಬಿಕ್ಕಟ್ಟಿನ ಸುಳಿಗೆ ಸಿಲುಕಿರುವ ಬಂಡವಾಳಶಾಹಿ ಪ್ರಭುತ್ವ ಪ್ರತಿಭಟನೆಯ ಅಲೆಗಳನ್ನು ಹತ್ತಿಕ್ಕಲು ಹೊಸ ಅಸ್ತ್ರಗಳನ್ನು ಪ್ರಯೋಗಿಸುತ್ತಲೇ ಇದೆ.

ಇಂಥ ಅಸ್ತ್ರಗಳಲ್ಲಿ ಇದೀಗ ಸುಗ್ರೀವಾಜ್ಞೆ ಮೂಲಕ ತಂದಿರುವ ಪೋಟೋ ಕೂಡ ಒಂದು.

ರಾಷ್ಟ್ರದ ಏಕತೆ, ಸಮಗ್ರತೆಗೆ ಬೆದರಿಕೆ ತಂದೊಡ್ಡಿರುವ ವಿಚ್ಛಿದ್ರಕಾರಿ ಭಯೋತ್ಪಾದಕ ಶಕ್ತಿಗಳನ್ನು ಹತ್ತಿಕ್ಕುವ ಪ್ರಾಮಾಣಿಕ ಉದ್ದೇಶ ಈ ಸರ್ಕಾರಕ್ಕಿದ್ದರೆ ಕೇಂದ್ರ ತಂದಿರುವ ಪೋಟೋ ಕಾಯ್ದೆಯನ್ನು ಯಾರೂ ವಿರೋಧಿಸುತ್ತಿರಲಿಲ್ಲ. ಈ ಕ್ರೂರ ಕರಾಳ ಶಾಸನವನ್ನು ವಿರೋಧಿಸುತ್ತಿರುವವರೆಲ್ಲರೂ ಉಗ್ರಗಾಮಿಗಳ ಬೆಂಬಲಿಗರಲ್ಲ, ಬುಡಮೇಲು ಕೃತ್ಯಗಳ ಸಮರ್ಥಕರಲ್ಲ, ಹಾಗೂ ಈ ದೇಶ ಒಡೆದು ಹಾಳಾಗಿಹೋಗಬೇಕೆಂದು ಸಂಚು ನಡೆಸಿದವರಲ್ಲ. ಆದರೂ ಗೃಹಮಂತ್ರಿ ಆಡ್ವಾನಿ ದೃಷ್ಟಿಯಲ್ಲಿ ಇವರೆಲ್ಲ ಭಯೋತ್ಪಾದಕರ ಬೆಂಬಲಿಗರಾಗಿದ್ದಾರೆ.

ಈ ಕ್ರೂರ ಶಾಸನವನ್ನು ಕಾಂಗ್ರೆಸ್, ಎಡಪಕ್ಷಗಳು, ಸಮಾಜವಾದಿಗಳು ಮಾತ್ರವಲ್ಲ, ಎನ್. ಡಿ. ಎ. ಮಿತ್ರರು, ಮಾನವ ಹಕ್ಕುಪರ ಚಳುವಳಿಗಾರರು ಪ್ರಬಲವಾಗಿ ವಿರೋಧಿಸುತ್ತಿದ್ದಾರೆ. ಪಂಜಾಬಿನಲ್ಲಿ ಖಲಿಸ್ತಾನವಾದಿ ಭಯೋತ್ಪಾದಕರ ವಿರುದ್ಧ ಪ್ರಾಣ ಪಣಕ್ಕಿಟ್ಟು ಹೋರಾಡಿ ನೂರಾರು ಸಂಗಾತಿಗಳನ್ನು ಕಳೆದುಕೊಂಡ ಕಮ್ಯುನಿಸ್ಟ್ ಪಕ್ಷಗಳು ಪೋಟೋ ವಿರುದ್ಧ ಹೋರಾಟದ ಮುಂಚೂಣಿಯಲ್ಲಿವೆ. ಕಾಂಗ್ರೆಸ್ ಎಷ್ಟೇ ಭ್ರಷ್ಟ ಪಕ್ಷವಾಗಿದ್ದರೂ ಅದನ್ನು ದೇಶದ್ರೋಹಿ ಇಲ್ಲವೆ ಕೋಮುವಾದಿ ಎಂದು ಕರೆಯಲು ಸಾಧ್ಯವಿಲ್ಲ.

ಈ ಪೋಟೋ ಶಾಸನವನ್ನು ದೇಶದ ಮೇಲೆ ಹೇರುತ್ತಿರುವವರಾದರೂ ಯಾರು? ಈಗ ದೇಶದ ಅಧಿಕಾರ ಸೂತ್ರ ಹಿಡಿದವರಲ್ಲಿ ಅನೇಕರು ಸ್ವಾತಂತ್ರ್ಯ ಹೋರಾಟದ ಹಿನ್ನೆಲೆಯಿಂದ ಬಂದವರಲ್ಲ. ಅವರು ಪ್ರತಿಪಾದಿಸುವ ಸಿದ್ಧಾಂತದಲ್ಲಿ ಕಟ್ಟಾ ನಂಬಿಕೆಯುಳ್ಳವರು ಬ್ರಿಟಿಷ್ ಸಾಮ್ರಾಜ್ಯಶಾಹಿ ವಿರುದ್ಧ ನಡೆದ ವಿಮೋಚನಾ ಹೋರಾಟದಲ್ಲಿ ಯಾವುದೇ ಪಾತ್ರ ವಹಿಸಿರಲಿಲ್ಲ. ದೇಶದ ಜನತೆಯನ್ನು ಮತ ಧರ್ಮದ ಆಧಾರದ ಮೇಲೆ ವಿಭಜನೆ ಮಾಡುವ ಅಪಾಯಕಾರಿ ತಾತ್ವಿಕ ಹಿನ್ನೆಲೆ ಹೊಂದಿರುವವರು ತರುತ್ತಿರುವ ಕಾಯ್ದೆ ದೇಶದ ಹಿತಕ್ಕಾಗಿ ಎಂದು ಹೇಳಿದರೆ ನಂಬಲು ಹೇಗೆ ಸಾಧ್ಯ ?

ಪೋಟೋ ಕಾಯ್ದೆ ಜಾರಿಗೆ ತರುವ ಪ್ರಾಮಾಣಿಕ ಉದ್ದೇಶ ಇವರಿಗಿದ್ದರೆ, ಆಯೋಧ್ಯೆಯಲ್ಲಿ ಫೆಬ್ರವರಿ ೧೭ರಂದು ''ಐದು ಕೋಟಿ'' ಕರಸೇವಕರನ್ನು ಸೇರಿಸಿ ಇನ್ನೊಂದು ಅನಾಹುತ ಸೃಷ್ಟಿಸಲು ಹೊರಟವರ ಮೇಲೆ ಇದನ್ನು ಮೊದಲು ಪ್ರಯೋಗಿಸಲಿ. ನಕ್ಸಲೀಯರು ಭೂಮಾಲಿಕರ ಹಿಂಸಾಚಾರದ ವಿರುದ್ಧ ಬಂದೂಕು ಹಿಡಿದರೆ ಭಯೋತ್ಪಾದಕರು; ಭಜರಂಗದಳದವರು ಅಲ್ಪಸಂಖ್ಯಾತರ ಬೇಟೆಯಾಡಿದರೆ ಅವರು ರಾಮಭಕ್ತರು ಎಂದು ವ್ಯಾಖ್ಯಾನಿಸುವವರಿಂದ ತರಲಾಗುವ ಕಾನೂನು ಜನಪರವಾಗಿರಲು ಸಾಧ್ಯವೇ ಇಲ್ಲ.

ಕಾಶ್ಮೀರದಲ್ಲಿ ಗಡಿಯಾಚೆಗಿನಿಂದ ಬರುವ ಭಯೋತ್ಪಾದಕರನ್ನು ಹತ್ತಿಕ್ಕಲು ಯಾರ ಅಭ್ಯಂತರವೂ ಇಲ್ಲ. ಅಲ್ಲಿ ಅಮಾಯಕ ಜನರನ್ನು ಕೊಲ್ಲುತ್ತಿರುವ ಲಷ್ಕರ್-ಇ-ತೋಯಿಬಾಗಳನ್ನು ಸದೆ ಬಡಿಯಲೇಬೇಕು. ಆದರೆ ಗುಜರಾತ್‌ನಲ್ಲಿ ಕ್ರೈಸ್ತರ ಚರ್ಚಿಗೆ ಬೆಂಕಿ ಹಚ್ಚುವ, ಒಂದು ಮಸೀದಿ ನೆಲಸಮಗೊಳಿಸಿ ಇನ್ನೂ ನೆಲಸಮಗೊಳಿಸಲಿರುವ ಮೂರು ಸಾವಿರ ಮಸೀದಿಗಳ ಪಟ್ಟಿ ಮಾಡುವ ಕರಾಳಶಕ್ತಿಗಳನ್ನು ಸುಮ್ಮನೆ ಬಿಡಬೇಕೆ ?

ಮಸೀದಿ ನೆಲಸಮಗೊಳಿಸುವವರನ್ನು, ಕೋಮು ದಂಗೆ ಮಾಡುವವರನ್ನು, ಚರ್ಚ್‌ಗೆ ಕೊಳ್ಳಿ ಇಡುವವರನ್ನು ಹತ್ತಿಕ್ಕುವುದು ಈ ಸರ್ಕಾರಕ್ಕೆ ಬೇಕಾಗಿಲ್ಲ. ಜಾಗತೀಕರಣ, ಖಾಸಗೀಕರಣದ ವಿರುದ್ಧ ಹೋರಾಡುವವರನ್ನು, ಜಾತಿ ಪದ್ಧತಿಯ ಶೋಷಣೆ ವಿರುದ್ಧ ಧ್ವನಿ ಎತ್ತುವವರನ್ನು, ಜಮೀನ್ದಾರಿಕೆಯ ವಿರುದ್ಧ ಸಿಡಿದು ನಿಲ್ಲುವವರನ್ನು, ಕೇಸರೀಕರಣ ವಿರೋಧಿಸುವವರನ್ನು ನಿರ್ನಾಮ ಮಾಡುವುದು ಈ ಸರ್ಕಾರದ ಉದ್ದೇಶವಾಗಿದೆ. ಅಮೆರಿಕೆಯ ಯಜಮಾನ ಬುಷ್ ಸಾಹೇಬರಿಗೂ ಅದೇ ಬೇಕಾಗಿದೆ. ಅವರನ್ನು ಸುಪ್ರೀತಗೊಳಿಸಿ ತಮ್ಮ ಬೇಳೆ ಬೇಯಿಸಿಕೊಳ್ಳಲು ಈ ಪೋಟೋ ಬಂದಿದೆ.

ವಾಜಪೇಯಿ ನೇತೃತ್ವದ ಎನ್‌ಡಿಎ ಸರ್ಕಾರ ಇತ್ತೀಚೆಗೆ ಭಯೋತ್ಪಾದಕತೆ ತಡೆಗಾಗಿ ಪೋಟೋ (ಪ್ರಿವೆನ್‌ಷನ್ ಆಫ್ ಟೆರರಿಸಂ ಆರ್ಡಿನನ್ಸ್) ಎಂಬ ಹೊಸ ಶಾಸನವನ್ನು ತಂದಿದೆ. ಈ ಹಿಂದೆ ಇಂಥದೇ ಟಾಡಾ ಎಂಬ ಶಾಸನ ೧೯೮೫ ರಿಂದ ೧೯೯೫ರವರೆಗೆ ಹತ್ತು ವರ್ಷಕಾಲ ಈ ದೇಶದಲ್ಲಿ ಅಸ್ತಿತ್ವದಲ್ಲಿತ್ತು. ಈ ಟಾಡಾ ಏನೇನು ಅನಾಹುತ ಮಾಡಿತೆಂಬುದು ಎಲ್ಲರಿಗೂ ಗೊತ್ತಿದೆ. ಈ ಶಾಸನದಿಂದ ಭಯೋತ್ಪಾದನೆ ನಿರ್ಮೂಲನವಾಗಲಿಲ್ಲ. ಬದಲಾಗಿ ನಾಗರಿಕ ಹಕ್ಕುಗಳ ದಮನಕಾಂಡ ನಡೆಯಿತು. ಆಗ ಈ ಶಾಸನದಡಿ ಬಂಧಿತರಾದವರಲ್ಲಿ ಶೇ. ೯೫ರಷ್ಟು ಮಂದಿ ನಿರ್ದೋಷಿಗಳಾಗಿ ಬಿಡುಗಡೆಯಾದರು. ಬಿಡುಗಡೆಯಾಗುವತನಕ ಹತ್ತು ವರ್ಷ ಜೈಲಿನಲ್ಲೇ ಕೊಳೆತವರೂ ಇದ್ದಾರೆ. ಈಗ ಟಾಡಾ ಬದಲಾಗಿ ಪೋಟೋ ಬಂದಿದೆ.

ಮುಂದಿನ ೩-೪ ವಾರಗಳಲ್ಲಿ ಸಂಸತ್ ಅಧಿವೇಶನ ಸೇರುವುದು ಖಚಿತವಾಗಿದ್ದರೂ ಸಂಸತ್ತಿನ ಮುಂದೆ ಇದನ್ನು ತರದೇ ಸುಗ್ರೀವಾಜ್ಞೆ ಮೂಲಕ ದೇಶದ ಮೇಲೆ



ವೀರಪ್ಪನ್ ಬೇಟೆಯ ಹೆಸರಿನಲ್ಲಿ ಟಾಡಾ ಬಂಧನದಲ್ಲಿದ್ದ ಗ್ರಾಮಸ್ಥರು

ಹೇರಲಾಗಿದೆ. ಇಷ್ಟು ತುರ್ತಾಗಿ ಈ ಶಾಸನ ತರುವ ಅಗತ್ಯವಾದರೂ ಏನಿತ್ತು ? ಮಾನವ ಹಕ್ಕು ಆಯೋಗದ ಅಧ್ಯಕ್ಷ ನ್ಯಾಯಮೂರ್ತಿ ಜೆ. ಎಸ್. ವರ್ಮಾ ಅವರು ಅಭಿಪ್ರಾಯಪಟ್ಟಂತೆ ಈಗಿರುವ ಭಾರತೀಯ ಅಪರಾಧ ಸಂಹಿತೆಯಲ್ಲೇ ಭಯೋತ್ಪಾದಕತೆಯನ್ನು ಹತ್ತಿಕ್ಕಲು ಸಾಕಷ್ಟು ಅವಕಾಶವಿದೆ. ಆದರೂ ಅಟಲಜಿ ಸರ್ಕಾರ ಈ ಶಾಸನವನ್ನು ತರಾತುರಿಯಿಂದ ತಂದಿದೆ.

ಈ ಕರಾಳ ಶಾಸನವನ್ನು ತರುತ್ತಿರುವ ಸರ್ಕಾರವಾದರೂ ಎಂಥದು ? ಬಾಬರಿ ಮಸೀದಿ ನೆಲಸಮ ಪ್ರಕರಣದ ಆರೋಪಿಗಳಲ್ಲೊಬ್ಬರಾದ ಎಲ್. ಕೆ. ಅದ್ವಾನಿ ಈಗಿನ ಗೃಹಮಂತ್ರಿ. ಭಜರಂಗದಳವನ್ನು ಹೊಗಳಿ ಅಟ್ಟಕ್ಕೇರಿಸಿ ಸಿಮಿಯನ್ನು ನಿಷೇಧಿಸುವ ಇವರದೇ ಬಿಜೆಪಿ ಸರ್ಕಾರ ಗುಜರಾತಿನಲ್ಲಿ ಮಾಡಿದ್ದೇನು ? ಆ ರಾಜ್ಯದಲ್ಲಂತೂ ಯಾವುದೇ ಭಯೋತ್ಪಾದಕ ಚಟುವಟಿಕೆಗಳಿರಲಿಲ್ಲ. ಆದರೂ ಕೇಶುಭಾಯಿ ಪಟೇಲರ ಸರ್ಕಾರ ಈ ಹಿಂದಿನ ಟಾಡಾ ಕಾಯ್ದೆಯಡಿ ಅಲ್ಪಸಂಖ್ಯಾತರನ್ನು ಬಂಧಿಸಿ ತನ್ನ ನಿಜ ಸ್ವರೂಪವನ್ನು ತೋರಿಸಿತು.

ಆ ಟಾಡಾಕ್ಕಿಂತ ಈ ಪೋಟೋ ಅಪಾಯಕಾರಿಯಾಗಿದೆ. ಯಾರು ಭಯೋತ್ಪಾದಕರು ಎಂಬುದನ್ನು ಅಧಿಕಾರ ಶಾಹಿಯೇ ತೀರ್ಮಾನಿಸುವುದರಿಂದ ಈ ಶಾಸನದ ಪ್ರಕಾರ ಸರ್ಕಾರಿ ಕಟ್ಟಡದ ಹೊರಗೆ ನಿಂತು ಘೋಷಣೆ ಕೂಗುವವರೂ ಭಯೋತ್ಪಾದಕರಾಗುತ್ತಾರೆ. ಕೇಸರೀಕರಣದ ಹುನ್ನಾರವನ್ನು ವಿರೋಧಿಸುವವರೆಲ್ಲರೂ ಈ ಪೋಟೋ ಶಾಸನದನ್ವಯ ಸೆರೆಮನೆಗೆ ಹೋದರೆ ಅಚ್ಚರಿಪಡಬೇಕಾಗಿಲ್ಲ.

ರಾಷ್ಟ್ರಘಾತುಕ ಶಕ್ತಿಗಳನ್ನು ಬಗ್ಗುಬಡಿಯಲು ಈ ಶಾಸನ ತಂದಿದ್ದಾಗಿ ಸರ್ಕಾರ ಹೇಳಿಕೊಳ್ಳುತ್ತಿದ್ದರೂ ಅದರ ನಿಜವಾದ ಉದ್ದೇಶ ಬೇರೆಯಾಗಿದೆ. ಪೋಟೋ ಶಾಸನ ಜಾರಿಗೆ ಬಂದರೆ ಸರ್ಕಾರದ ಜನವಿರೋಧಿ ನೀತಿಗಳನ್ನು ವಿರೋಧಿಸುವ ಹೋರಾಟಗಾರರು, ಖಾಸಗೀಕರಣದ ವಿರುದ್ಧ ಚಳವಳಿ ನಡೆಸುವ ಕಾರ್ಮಿಕರು, ಜನಪರ ಚಳವಳಿಗಾರರು, ನಿಷೇಧಿತ ಸಂಘಸಂಸ್ಥೆಗಳ ಪರವಾಗಿ ವಾದಿಸುವ ವಕೀಲರು, ಮಾತ್ರವಲ್ಲ ನಿಷೇಧಿತ ನಾಯಕರ ಸಂದರ್ಶನ ನಡೆಸುವ ಪತ್ರಕರ್ತರು ಜೈಲುಕಂಬಿ ಎಣಿಸಬೇಕಾಗುತ್ತದೆ. ಇಂಥ ಸಂದರ್ಶನ ಪ್ರಕಟಿಸಿದ ಸಂಪಾದಕನ ಕೈಗೂ ಬೇಡಿ ಬೀಳುತ್ತದೆ.

ಈ ಶಾಸನದ ಪ್ರಕಾರ ಸರ್ಕಾರಿ ಪಡೆಗಳು ಜನರ ಮೇಲೆ ನಡೆಸುವ ಅತ್ಯಾಚಾರ, ದೌರ್ಜನ್ಯಗಳನ್ನು ಯಾವುದೇ ಟಿ. ವಿ. ಚಾನೆಲ್ ಪ್ರಸಾರ ಮಾಡುವಂತಿಲ್ಲ. ನಿಷೇಧಿತ ಸಂಸ್ಥೆಗಳ ನಾಯಕರನ್ನು ಸಂದರ್ಶಿಸುವ ಪತ್ರಕರ್ತ ಅದಕ್ಕಿಂತ ಮೊದಲು ತಾನು ಯಾರನ್ನು ಎಲ್ಲಿ ಸಂದರ್ಶಿಸುತ್ತಾನೆಂಬ ಬಗ್ಗೆ ಸರ್ಕಾರಕ್ಕೆ ಮುಂಚೆಯೇ ತಿಳಿಸಿ ಅನುಮತಿ ಪಡೆಯಬೇಕಾಗುತ್ತದೆ. ಈ ಶಾಸನದಡಿ ಬಂಧಿತನಾದ ವ್ಯಕ್ತಿ ಜಾಮೀನಿನ ಮೇಲೆ ಬಿಡುಗಡೆಯಾಗುವುದು ಸುಲಭ ಸಾಧ್ಯವಲ್ಲ.

ಪೋಟೋ ಎಂಬುದು ಟಾಡಾದ ಪರಿಷ್ಕೃತ ರೂಪ ಎಂದು ಹೇಳಲಾಗುತ್ತಿದ್ದರೂ ಇದು ಅದಕ್ಕಿಂತ ಹೆಚ್ಚು ಅಪಾಯಕಾರಿಯಾಗಿದೆ. ದೇಶದ ಏಕತೆ, ಸಮಗ್ರತೆಗೆ ಭಂಗ ತರುತ್ತಾರೆಂದು ಯಾರನ್ನು ಬೇಕಾದರೂ ಹೆಸರಿಸಿ ಸೆರೆಮನೆಗೆ ತಳ್ಳುವ ಅಧಿಕಾರವನ್ನು ಈ ಶಾಸನ ಸರ್ಕಾರಕ್ಕೆ



*ಟಾಡಾ ಬಂಧಿತರು ಮೈಸೂರು ನ್ಯಾಯಾಲಯದ ಮುಂದೆ*

ನೀಡುತ್ತದೆ. ಶಂಕಿತ ವ್ಯಕ್ತಿಗಳ ದೂರವಾಣಿ ಕರೆಗಳನ್ನು ಕದ್ದಾಲಿಸಲು ಇದರಿಂದ ಪೊಲೀಸರಿಗೆ ಅವಕಾಶ ದೊರಕುತ್ತದೆ. ಸರ್ಕಾರದ ನಿಲುವನ್ನು ಖಂಡಿಸಿ ಕರಪತ್ರ ಹಂಚುವವರೂ ಜೈಲಿಗೆ ಹೋಗಬೇಕಾಗುತ್ತದೆ.

ಇಂಥ ಕರಾಳ ಶಾಸನ ತಂದು ಭಯೋತ್ಪಾದಕತೆಯನ್ನು ನಿರ್ಮೂಲನ ಮಾಡಲು ಸಾಧ್ಯವಿಲ್ಲ. ಪಂಜಾಬಿನಲ್ಲಿ ದಶಕಗಳ ಕಾಲ ಜನಕೋಟಿಯನ್ನು ಹಿಂಡಿ ಹಿಪ್ಪೆ ಮಾಡಿದ ಖಲಿಸ್ತಾನಿ ಭಯೋತ್ಪಾದಕರನ್ನು ಕೂಡ ಬಂದೂಕಿನಿಂದ ಅಡಗಿಸಲು ಸಾಧ್ಯವಾಗಲಿಲ್ಲ. ಸುವರ್ಣಮಂದಿರಕ್ಕೆ ಸೇನೆಯನ್ನು ನುಗ್ಗಿಸಿ ಬಿಂದ್ರನ್‌ವಾಲಾನನ್ನು ಗುಂಡಿಟ್ಟು ಕೊಂದ ನಂತರವೂ ಅಲ್ಲಿ ಭಯೋತ್ಪಾದನೆ ತಾಂಡವ ನೃತ್ಯ ನಿಲ್ಲಲಿಲ್ಲ. ಕೆ.ಪಿ.ಎಸ್. ಗಿಲ್‌ರಂಥ ಪೊಲೀಸ್ ಅಧಿಕಾರಿಯೊಬ್ಬರಿಂದ ಮಾತ್ರ ಆ ರಾಜ್ಯ ಶಾಂತವಾಗಲಿಲ್ಲ.

ಚಂದ್ರಶೇಖರ್ ಪ್ರಧಾನಿಯಾಗಿದ್ದಾಗ ನಡೆದ ಪಂಜಾಬ್ ವಿಧಾನಸಭಾ ಚುನಾವಣೆ ಆ ರಾಜ್ಯದ ಇತಿಹಾಸವನ್ನೇ ಬದಲಿಸಿತು. ಬಂದೂಕಿನಿಂದ ಸಾಧಿಸಲಾಗದ್ದನ್ನು ರಾಜಕೀಯ ಸಂವಾದ, ಪ್ರಕ್ರಿಯೆಗಳ ಮೂಲಕ ಅಲ್ಲಿ ಸಾಧಿಸಲಾಯಿತು. ಚುನಾಯಿತ ಸರ್ಕಾರ ಅಲ್ಲಿ ಅಸ್ತಿತ್ವಕ್ಕೆ ಬಂದ ನಂತರ ಭಯೋತ್ಪಾದಕರ ಧ್ವನಿ ಕ್ಷೀಣಿಸುತ್ತ ಹೋಯಿತು.

ಆಂಧ್ರ ಪ್ರದೇಶವನ್ನು ವಿಶ್ವದ ಸಾಹುಕಾರರಿಗೆ ಹರಾಜಿಗಿಟ್ಟಿರುವ ಮುಖ್ಯಮಂತ್ರಿ ಚಂದ್ರಬಾಬು ನಾಯ್ಡು ಅವರಿಗೆ ತನ್ನ ನೀತಿಗೆ ವಿರೋಧವಾಗಿರುವ ಜನತಾ ಸಮರ ತಂಡದ ಕ್ರಾಂತಿಕಾರರನ್ನು ಕಂಡರಾಗುವುದಿಲ್ಲ. ನಕ್ಸಲೀಯರೇ ನಿಜವಾದ ದೇಶಭಕ್ತರು ಎಂದು ಹಿಂದೊಮ್ಮೆ ತಮ್ಮ ಮಾವ ಎನ್. ಟಿ. ರಾಮರಾವ್ ಹೇಳಿದ ಮಾತನ್ನು ಮರೆತಿರುವ ಅವರು ಇಂದು ಪೋಟೋ ಅಸ್ತ್ರವನ್ನು ಕ್ರಾಂತಿಕಾರರ ವಿರುದ್ಧವೂ ಬಳಸಲು ನಿಷೇಧಿತ ಸಂಘಟನೆಗಳ ಪಟ್ಟಿಯಲ್ಲಿ ಪಿಡಬ್ಲ್ಯೂಜಿಯನ್ನು ಸೇರಿಸಲು ಕೇಂದ್ರ ಸರಕಾರದ ಮೇಲೆ ಒತ್ತಡ ಹೇರುತ್ತಲೇ ಇದ್ದಾರೆ.

ಜನತೆಯ ಮತ ಪಡೆದು ಅಧಿಕಾರಕ್ಕೆ ಬಂದು ದೇಶದ ಅಮೂಲ್ಯ ಸ್ವತ್ತನ್ನು ವಿದೇಶಿ ಕಂಪನಿಗಳಿಗೆ ಹರಾಜು ಹಾಕಿ ಕಮಿಷನ್ ಹೊಡೆಯುತ್ತಿರುವವರಿಂದ, ಬಾಬರಿ ಮಸೀದಿ ಧ್ವಂಸಗೊಳಿಸಿ ದೇಶದಲ್ಲಿ ಕೋಮುದಳ್ಳುರಿ ಎಬ್ಬಿಸಿದವರಿಂದ ಕ್ರಾಂತಿಕಾರರು ದೇಶಭಕ್ತಿಯ ಪಾಠ ಕಲಿಯಬೇಕಾಗಿಲ್ಲ. ಈ ದೇಶ ಯಾರಪ್ಪನ ಖಾಸಗಿ ಆಸ್ತಿಯಲ್ಲ. ಈ ದೇಶದ ನೂರು ಕೋಟಿಗೂ ಮೀರಿದ ಜನರೇ ಇದರ ಯಜಮಾನರು. ತಮ್ಮ ದೇಶ ಹೇಗಿರಬೇಕೆಂದು ಅವರೇ ತೀರ್ಮಾನಿಸುತ್ತಾರೆ. ಟಾಡಾ, ಪೋಟೋ, ಕೊಕಾಗಳಂಥ ಕಾಯ್ದೆಗಳಿಂದ ಈ ಜನತೆಯ ಧ್ವನಿ ಅಡಗಿಸುವ ಯತ್ನ ಫ್ಯಾಸಿಸಂ ಅಲ್ಲದೆ ಬೇರೇನೂ ಅಲ್ಲ. ಸದ್ಯದಲ್ಲೇ ಉತ್ತರ ಪ್ರದೇಶದ ಶಾಸನಸಭೆಗೆ ಚುನಾವಣೆ ನಡೆಯಲಿದೆ. ಆ ಸಂದರ್ಭದಲ್ಲಿ ಪೋಟೋ ಕಾಯ್ದೆಯಡಿ ನೂರಾರು ರಾಜಕೀಯ ಮತ್ತು ಮತಧಾರ್ಮಿಕ ನಾಯಕರನ್ನು ಕಾರಾಗೃಹಕ್ಕೆ ತಳ್ಳಿ ಚುನಾವಣೆ ಗೆಲ್ಲುವ ಆಶಯವನ್ನು ಭಾಜಪ ಇರಿಸಿಕೊಂಡಿದೆ ಎನ್ನುವುದು ಗುಟ್ಟಾಗಿ ಉಳಿದಿಲ್ಲ.

ಜನತೆ ಇವರಿಗೆ ಮತ ಹಾಕಿದ್ದು ಸಾರ್ವಜನಿಕ ಉದ್ದಿಮೆಗಳನ್ನು ಖಾಸಗೀಕರಣ ಮಾಡುವುದಕ್ಕಲ್ಲ, ವಿಶ್ವ ಬ್ಯಾಂಕ್‌ನ ಷರತ್ತುಗಳಿಗೆ ತಲೆಬಾಗಲು ಅಲ್ಲ, ವಿದೇಶಿ ಕಂಪನಿಗಳಿಗೆ ಲೂಟಿ ಮಾಡಲು ದ್ವಾರ ಮುಕ್ತಗೊಳಿಸಲು ಅಲ್ಲ, ಇಲ್ಲವೇ ಮಂದಿರ, ಮಸೀದಿ ಹೆಸರಲ್ಲಿ ರಕ್ತಪಾತ ಮಾಡಲು ಅಲ್ಲ ಎಂಬುದನ್ನು ತಿಳಿದುಕೊಳ್ಳದಿದ್ದರೆ ಜನರೇ ತಿಳಿಸುತ್ತಾರೆ.

ಸನತ್‌ಕುಮಾರ ಬೆಳಗಲಿ
೧೭/೬, ಬಿ.ಡಿ.ಎ ಫ್ಲ್ಯಾಟ್,
ಮೈಕೋ ಲೇಔಟ್ ಪೊಲೀಸ್ ಸ್ಟೇಷನ್ ಎದುರು
ಬಿ.ಟಿ.ಎಂ ಲೇಔಟ್, ಬೆಂಗಳೂರು ೫೬೦ ೦೭೬

# ಬಹುಸಂಖ್ಯಾತರ ಹೆಸರಿನಲ್ಲಿ...

**ತನು ಮೆಹ್ತಾ ತಿವಾರಿ**

ಮುಂಬೈನಲ್ಲಿ ಇತ್ತೀಚೆಗೆ ಒಂದು ವಿಚಾರಗೋಷ್ಠಿಗೆ ಹೋಗಿದ್ದೆ: ವಿಷಯ – ಪ್ರಜಾಪ್ರಭುತ್ವವಾದಿ ಹಕ್ಕುಗಳು. ಕೆಲವು ದೊಡ್ಡ ಭಾಷಣಕಾರರು ವಿಷಯ ಮಂಡನೆ ಮಾಡಿದರು. ಎಲ್ಲಾ ಮಹಾನ್ ವಾಗ್ಮಿಗಳೇ. ಆಮೇಲೆ ಚರ್ಚೆ ಆರಂಭವಾಯಿತು. ಆಗೊಂದು ಕುತೂಹಲಕಾರಿ ಪರಿಕಲ್ಪನೆ ಎಲ್ಲರನ್ನೂ ಚಕಿತಗೊಳಿಸಿತು. ''ಬಹುಸಂಖ್ಯಾತ'' ಎಂದರೇನು ಎಂಬುದರ ಬಗೆಗಿನ ವ್ಯಾಖ್ಯಾನ ಅದು. ಅದನ್ನು ಕೇಳಿದ ಬಳಿಕ ನನ್ನಲ್ಲಿ ಮೂಡಿಬಂದ ಅನಿಸಿಕೆಗಳನ್ನು ದಾಖಲಿಸಬಯಸುತ್ತೇನೆ.

ಪ್ರಜಾಪ್ರಭುತ್ವವಾದಿ ಸಂರಚನೆಯಲ್ಲಿ ಹಲವಾರು ಗುಂಪುಗಳು, ಆಸಕ್ತಿಗಳು ಸೇರಿರುತ್ತವೆ. ಅನೇಕ ವೇಳೆ ಬಹುಸಂಖ್ಯಾತರ ಅಭಿಪ್ರಾಯವನ್ನು ಆಧರಿಸಿ ತೀರ್ಮಾನ ಕೈಗೊಳ್ಳುವುದು ಅನಿವಾರ್ಯ. ಈ ''ಬಹಸಂಖ್ಯಾತ'' ಎಂಬುದನ್ನು ನಿಖರವಾಗಿ ವ್ಯಾಖ್ಯಾನಿಸಲು ಬರುವುದಿಲ್ಲ. ಅದನ್ನು ಎಷ್ಟೋ ಬಾರಿ ತಪ್ಪಾಗಿ ಅರ್ಥೈಸಿರಲಾಗುತ್ತದೆ. ರಾಜಕೀಯ ಪಕ್ಷಗಳು ಈ ಪದವನ್ನು ಸ್ವಲ್ಪ ಅಗ್ಗವಾಗಿಯೇ ಬಳಸುತ್ತವೆ. ಮಾಧ್ಯಮಗಳು ಅದೇ ಪದವನ್ನು ವಿಜೃಂಭಿಸಿ ಬಳಸುವಾಗೆಲ್ಲಾ ಜವಾಬ್ದಾರಿಯುತವಾದ ದೃಷ್ಟಿಯೇ ಇರುತ್ತದೆಂದು ಹೇಳಲಾಗದು. ನಮ್ಮಂಥ ಸಾಮಾನ್ಯರಾದರೋ, ನಮಗೆ ಮಾನ್ಯವಾಗುವ ಪಕ್ಷ, ಪತ್ರಿಕೆ, ಟಿ.ವಿ., ಮುಂತಾದುವು ಏನು ಹೇಳುತ್ತವೋ ಅವನ್ನು ಒಪ್ಪಿಕೊಂಡು ಬಿಡುತ್ತೇವೆ.

ಭಾರತದ ಪ್ರಜಾಪ್ರಭುತ್ವದ ಸಂದರ್ಭದಲ್ಲಿ 'ಬಹುಸಂಖ್ಯಾತ' ಎಂದರೇನು ? ಮತ್ತು, ಅದು ರಾಜಕೀಯವಾಗಿ ಹೇಗೆ ಪ್ರಕಟಗೊಳ್ಳುತ್ತದೆ ?

ಭಾರತೀಯ ಜನತಾ ಪಕ್ಷ ಮತ್ತು ಅದರ ಮಿತ್ರ ಪರಿವಾರವನ್ನು ಬಲಪಂಥೀಯ ಎನ್ನುತ್ತಾರೆ. ಅವರ ಪ್ರಕಾರ ಭಾರತದಲ್ಲಿ ಹಿಂದುಗಳು ಬಹುಸಂಖ್ಯಾತರಾದ್ದರಿಂದ ಅವರು ತೋರ್ಪಡಿಸುವ ಭಾವನೆಗಳು ಗೌರವಕ್ಕೆ ಪಾತ್ರವಾಗಬೇಕು, ಅವರ ಆಕಾಂಕ್ಷೆಗಳು ಕಾರ್ಯಗತವಾಗಬೇಕು. ಉದಾಹರಣೆಗೆ, ಅಯೋಧ್ಯೆಯಲ್ಲಿ ಮಂದಿರದ ನಿರ್ಮಾಣ. ಅದನ್ನು ಯಾರೂ ವಿರೋಧಿಸಬಾರದು, ಏಕೆಂದರೆ ಅದು ಬಹುಸಂಖ್ಯಾತರ ಆಶಯ.

ಕಾಂಗ್ರೆಸ್ಸಿನಂತಹ ಮಧ್ಯವರ್ತಿ ಪಕ್ಷಗಳು ಈ ವಾದಕ್ಕೆ ಪ್ರತಿಯಾಗಿ ಖಚಿತವಾಗಿ ಏನನ್ನೂ ಹೇಳುವುದಿಲ್ಲ. ಆದ್ದರಿಂದಲೇ ಗಾಳಿ ಹೇಗೆ ಬೀಸಿದರೆ ಹಾಗೆ ಘಟನೆಗಳು ಬೆಳೆಯಲಿ ಎಂದು ಅವರು ತೆಪ್ಪಗೆ ಕೂರುತ್ತಾರೆ.

ಆದರೆ ''ಕಾನೂನು ಸಮ್ಮತವಾಗಿ'' ಎಲ್ಲವೂ ನಡೆಯಲಿ ಎಂಬ ಮಾತನ್ನು ಶ್ರೀಮದ್ಗಾಂಭೀರ್ಯದಿಂದ ಸೇರಿಸಲು ಅವರು ಮರೆಯುವುದಿಲ್ಲ. ಅಂದರೆ, ಇವೆಲ್ಲಾ ನ್ಯಾಯಾಂಗದ ತೀರ್ಮಾನಗಳಾಗಲು ಸಾಧ್ಯವೆ ? ವಸ್ತುತಃ ಅವು ರಾಜಕೀಯ ತೀರ್ಮಾನಗಳೇ ಆಗಬೇಕು.

ಎಡ ಪಕ್ಷಗಳು ಗುಡುಗುತ್ತವೆ: ''ಮಂದಿರದ ಪ್ರಶ್ನೆಯೇ ಇಲ್ಲ.'' ಹಾಗಿದ್ದರೆ ಸಾಮಾನ್ಯ ಜನರ ಬಳಿ ಹೋಗಿ ಅವರಿಗೆ ಒಪ್ಪಿಗೆಯಾಗುವಂತೆ ವಾದ ಮಂಡಿಸಲು ಇವರು ಸಮರ್ಥರಾಗಿದ್ದಾರೆಯೆ ? ವಾದಗಳು ಬಗೆಬಗೆಯಾಗಿವೆ: (ಅ) ನಮ್ಮದು ಧರ್ಮನಿರಪೇಕ್ಷ ರಾಷ್ಟ್ರ; ಅದೇ ಬಹುಸಂಖ್ಯಾತರ ಶ್ರದ್ಧೆ. (ಅದಕ್ಕೆ ಪ್ರತಿಯಾಗಿ ಏಳುವ ಪ್ರಶ್ನೆ: ಹಾಗಿದ್ದರೆ ಧರ್ಮನಿರಪೇಕ್ಷ ಜನ ದೇವಸ್ಥಾನ, ಮಸೀದಿ, ಚರ್ಚು, ಗುರುದ್ವಾರ, ಇತ್ಯಾದಿಗಳನ್ನು ಕಟ್ಟುತ್ತಿದ್ದಾರೆ ಏಕೆ ?) (ಆ) ಜಾತಿ-ಧರ್ಮಗಳ ಹೆಸರಿನಲ್ಲಿ ಶಾಂತಿಯನ್ನು ಕದಡಬಾರದು. (ಅದಕ್ಕೆ ಪ್ರತಿಪ್ರಶ್ನೆ: ನೀವೆತ್ತುವ ಅನೇಕ ಪ್ರಶ್ನೆಗಳು ಶಾಂತಿಯನ್ನು ಕದಡುವುದಿಲ್ಲವೆ ?) (ಇ) ಅಲ್ಪಸಂಖ್ಯಾತರ ಭಾವನೆಗಳಿಗೆ ಗೌರವ ನೀಡಬೇಕು. (ಅದಕ್ಕೆ ಪ್ರತಿಪ್ರಶ್ನೆ: ಅದೇನೋ ಸರಿ, ಆದರೆ ಹಿಂದುಗಳ ಭಾವನೆಗಳಿಗೆ ಗೌರವ ಬೇಡವೆ ?)



ಒಂದೇ ಮಾತಿನಲ್ಲಿ ಹೇಳುವುದಾದರೆ ಈಗ ಜಟಿಲವಾಗಿ ಬೆಳೆದಿರುವ ''ರಾಮಜನ್ಮ ಭೂಮಿ'' ಪ್ರಶ್ನೆಯ ಇತ್ಯರ್ಥವು ನಾವು ''ಬಹುಸಂಖ್ಯಾತ'' ಎಂಬುದನ್ನು ಹೇಗೆ ಅರ್ಥೈಸಿಕೊಳ್ಳುತ್ತೇವೆ ಎಂಬುದನ್ನು ಅವಲಂಬಿಸಿದೆ.

ಒಂದು ಮಾತಂತೂ ನಿಜ: ''ಬಹುಸಂಖ್ಯಾತ'' ಎಂಬುದು ನಮ್ಮ ಸಮಾಜದ ಯಾವ ಭಾಗವನ್ನೂ ಇಡಿಯಾಗಿ ಪ್ರತಿನಿಧಿಸುವುದಿಲ್ಲ. ನಮ್ಮದು ಸಂಕೀರ್ಣ ಸಮಾಜ. ಅದರಲ್ಲಿ ಬೇಕಾದಷ್ಟು ''ಬಹುಸಂಖ್ಯಾತ'' ಎನ್ನಬಹುದಾದ ಬಣಗಳಿವೆ. ಅವುಗಳಲ್ಲಿ ಕೆಲವನ್ನು ಪಟ್ಟಿ ಮಾಡಬಹುದು: (ಅ) ಮತಧರ್ಮದ ಗಣನೆಯಲ್ಲಿ ಹಿಂದುಗಳು ಬಹುಸಂಖ್ಯಾತರು; (ಆ) ಆರ್ಥಿಕತೆಯ ಗಣನೆಯಲ್ಲಿ ಬಡವರು ಬಹುಸಂಖ್ಯಾತರು; (ಇ) ವಿದ್ಯಾಭ್ಯಾಸದ ಗಣನೆಯಲ್ಲಿ ಅನಕ್ಷರಸ್ಥರು ಬಹುಸಂಖ್ಯಾತರು; ಸ್ವಲ್ಪ ಕಲಿತಿರುವವರೂ ಇದೇ ಬಣಕ್ಕೆ ಸೇರಿಬಿಡುತ್ತಾರೆ. (ಈ) ಉದ್ಯೋಗದ ಗಣನೆಯಲ್ಲಿ ಕೃಷಿಕರು ಮತ್ತು ಕೃಷಿ ಕಾರ್ಮಿಕರು ಬಹುಸಂಖ್ಯಾತರು; (ಉ) ಜಾತಿಯ ಗಣನೆಯಲ್ಲಿ ಬ್ರಾಹ್ಮಣೇತರರು ಬಹುಸಂಖ್ಯಾತರು.

ತನ್ನನ್ನು ತಾನು ಗಣರಾಜ್ಯವೆಂದು ಘೋಷಿಸಿಕೊಂಡಾಗ ಭಾರತವು ತನ್ನ ಪ್ರಜೆಗಳಿಗೆ ಆಶ್ವಾಸನೆ ಕೊಟ್ಟುಕೊಂಡದ್ದೇನು ? – ಕಾನೂನಿನೆದುರು ಎಲ್ಲರೂ ಸಮಾನರು ಮತ್ತು ಎಲ್ಲರಿಗೂ ಏಕಪ್ರಕಾರವಾದ ಕಾನೂನಿನ ರಕ್ಷಣೆ ಕೊಡಲಾಗುತ್ತದೆ, ಎಂದು. ಒಂದು ಸಂದರ್ಭವನ್ನು ಊಹಿಸಿಕೊಳ್ಳೋಣ: ಬ್ರಾಹ್ಮಣೇತರರಾದ ನಾವು ಬಹುಸಂಖ್ಯಾತ ಭಾರತೀಯರು. ಎಲ್ಲ ಬ್ರಾಹ್ಮಣರನ್ನು ನಾಶಮಾಡಬೇಕೆಂದು ನಮ್ಮ ಅಪೇಕ್ಷೆ. – ಅದನ್ನು ಆಗಗೊಡುತ್ತೇವೆಯೆ ? ಕೇಂದ್ರ ಹಾಗೂ ರಾಜ್ಯಗಳಲ್ಲಿ ಸರ್ಕಾರ ರಚಿಸಿರುವವರು ಬಹುಸಂಖ್ಯಾತ ಜಾತಿಗಳ ಬೆಂಬಲದಿಂದಲೇ ಆ ಸ್ಥಾನಗಳಿಗೆ ಬಂದಿದ್ದರೂ ಇಂತಹ ಅಪೇಕ್ಷೆಯನ್ನು ಈಡುಗೊಳಿಸಲಾಗುವುದಿಲ್ಲ; ನಮ್ಮ ಸಂವಿಧಾನವು ಅದನ್ನು ಮಾನ್ಯ ಮಾಡುವುದಿಲ್ಲ. ಏಕೆಂದರೆ, ಭಾರತದ ಪ್ರಜೆಯು ಯಾವ ಮತಧರ್ಮ ಮತ್ತು ಜಾತಿಗೆ ಸೇರಿರಲಿ ಅಥವಾ ಅವನ್ನು ಮೀರಿ ನಿಂತಿರಲಿ, ಅವನ ಪ್ರಾಣ, ಸ್ವಾತಂತ್ರ್ಯ ಮತ್ತು ಆಸ್ತಿಯ ರಕ್ಷಣೆ ಮಾಡಬೇಕಾದ್ದು ಪ್ರಭುತ್ವದ ಕರ್ತವ್ಯವಾಗಿದೆ. ಅದೇ ರೀತಿ, ನಾಳೆ ಬಹುಸಂಖ್ಯಾತರಾದ ನಮ್ಮ ಅನಕ್ಷರಸ್ಥರು ಸವಲತ್ತುಗಳನ್ನು ಸವಿಯುವ ವರ್ಗದ ''ಶ್ರೇಷ್ಠ'' ಶಾಲೆಗಳನ್ನು, ಇತರ ವಿದ್ಯಾಸಂಸ್ಥೆಗಳನ್ನು ನಾಶ ಮಾಡಬೇಕೆಂದು ತೀರ್ಮಾನಿಸಿದರೆ ಅದನ್ನು ಆಗಗೊಡುತ್ತೇವೆಯೆ ? ಅದು ನ್ಯಾಯೋಚಿತವಾಗಿರುತ್ತದೆಯ ? – ಇಲ್ಲ. ಮತ್ತೆ ಕಾರಣ ಈಗಾಗಲೇ ಹೇಳಿರುವುದೇ ಆಗಿರುತ್ತದೆ.

ಇದೇ ಮಾತನ್ನು ಮುಂದುವರಿಸಿ ನೋಡೋಣ: ನಮ್ಮ ಜನಸಂಖ್ಯೆಯ ಬಹುಪಾಲು ಜನ ಅಯೋಧ್ಯೆಯ ವಿವಾದಾತ್ಮಕ ಜಾಗದಲ್ಲಿ ಮಂದಿರ ಬೇಕೆಂದು ಬಯಸುತ್ತಾರೋ ಇಲ್ಲವೋ ತಿಳಿಯದು. ವಾದಕ್ಕೋಸ್ಕರ, ಬಹಪಾಲು ಜನ ಅದನ್ನು ಅಪೇಕ್ಷಿಸುತ್ತಾರೆ ಎಂದೇ ಇಟ್ಟುಕೊಳ್ಳೋಣ. ಆದರೆ ಅದನ್ನು ಮಾನ್ಯಮಾಡಬೇಕೆ ? ಸರ್ಕಾರದ ಪರವಾನಗಿ ಇರಲಿ, ಬಿಡಲಿ, ಅದನ್ನು ಮಾಡೇ ಮಾಡುತ್ತೇವೆಂದು ಯಾರಾದರೂ ಹೇಳಬಹುದೆ ? ಉತ್ತರ ''ಇಲ್ಲ'' ಎಂದೇ ಇರಬೇಕಾಗುತ್ತದೆ. ಅದು ಸಾಧ್ಯವಿಲ್ಲ; ಏಕೆಂದರೆ ಆ ಜಾಗದ ಮಾಲಿಕರು ತಮ್ಮ ಆಸ್ತಿಯ ರಕ್ಷಣೆಯ ಹಕ್ಕನ್ನು ಬೇರಾವುದೇ ವ್ಯಕ್ತಿಗಳಂತೆ ಹೊಂದಿದ್ದಾರೆ.

ಮಂದಿರವನ್ನು ಕಟ್ಟಬೇಕೆಂಬುದು ಒಂದು ಧಾರ್ಮಿಕ ನಂಬಿಕೆ. ಭಾರತದ ಪ್ರಜೆಗಳು ಯಾವುದೇ ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ, ವೈಜ್ಞಾನಿಕ ಅಥವಾ ಬೇರಾವುದೇ ಭಾವನೆಗಳಿಂದ ಪ್ರೇರಿತರಾಗಿ ಒಟ್ಟಾಗಿ ಸೇರಿಕೊಳ್ಳಲು ಅವಕಾಶವಿದೆ. ಹೀಗೆ ಒಟ್ಟಾಗುವ ಹಕ್ಕಿನಿಂದ ಯಾರೂ



ವಂಚಿತರಾಗುವಂತಿಲ್ಲ. ಅವರೆಲ್ಲಾ ಒಂದು ಗುಂಪಾಗಿ ಸಂಘಟನೆಗೊಂಡು ತಮ್ಮ ಭಾವನೆಗಳನ್ನು ಪ್ರಕಟಿಸಿಕೊಳ್ಳಲು ಅವರಿಗೆ ಹಕ್ಕಿದೆ. ಹಾಗೆ ಸಂಘಟನೆಗೊಂಡವರು ಸಂವಿಧಾನದತ್ತವಾದ ರೀತಿಗಳಲ್ಲಿ ಮಾತ್ರವೇ ಕಾರ್ಯಪ್ರವೃತ್ತರಾಗಬೇಕೆಂಬ ನಿರ್ಬಂಧ ವಿದೆ. ಮನಸ್ಸಿಗೆ ತೋಚಿದಂತೆ, ಏಕಪಕ್ಷೀಯವಾಗಿ, ತಮ್ಮ ಭಾವನೆಗಳನ್ನು ಪ್ರಕಟಿಸಿಕೊಳ್ಳಲು ಯಾರಿಗೂ ಅವಕಾಶವಿಲ್ಲ. ಏಕೆಂದರೆ, ನಮ್ಮ ಸಂವಿಧಾನವು ಎಲ್ಲರಿಗೂ ಸ್ವಾತಂತ್ರ್ಯವನ್ನು ಕಲ್ಪಿಸಿಕೊಡುವುದೇ ಈ ರೀತಿಯಲ್ಲಿ. ಧಾರ್ಮಿಕ ಭಾವನೆಗಳನ್ನು ರಾಜಕೀಯ ಭಾವನೆಯೊಡನೆ ಸಮೀಕರಣ ಗೊಳಿಸಬಾರದು; ಏಕೆಂದರೆ, ಅದು ಧರ್ಮನಿರಪೇಕ್ಷವಾಗಿರಬೇಕೆಂಬ ನಿರ್ಬಂಧವಿದೆ. ಆದ್ದರಿಂದ, ವಿಶ್ವ ಹಿಂದು ಪರಿಷತ್ತಾಗಲಿ, ಆರೆಸ್ಸೆಸ್ ಆಗಲಿ, ಬಜರಂಗ ದಳವಾಗಲಿ ಮಂದಿರದ ನಿರ್ಮಾಣವಾಗಬೇಕೆಂಬ ತೀವ್ರ ಭಾವನೆ ಹೊಂದಿದ್ದರೆ ಅವರಿಗಿರುವ ಒಂದೇ ಮಾರ್ಗ ಅಯೋಧ್ಯೆಯ ಆ ಜಾಗದ ಮಾಲಿಕರೊಡನೆ ಸಂವಾದ ಬೆಳೆಸುವುದು, ಅಲ್ಲಿದ್ದ ಮಸೀದಿಯು ಯಾರದ್ದೋ ಅವರೊಡನೆ ಸಂವಾದ ಬೆಳೆಸುವುದು, ಆ ಜಾಗವನ್ನು ಕೊಳ್ಳಲು, ಪರಭಾರೆ ಮಾಡಿಸಿಕೊಳ್ಳಲು, ಅಥವಾ ವರ್ಗಾಯಿಸಿಕೊಳ್ಳಲು ಅವರೊಡನೆ ಮಾತುಕತೆ ನಡೆಸುವುದು. ಹೀಗೆ ಸಂವಾದ – ಸಂಧಾನಗಳಲ್ಲಿ ತೊಡಗಲು ಅವರಿಗೆ ಸ್ವಾತಂತ್ರ್ಯವಿದೆ. ಯಾವುದೇ ಇಬ್ಬರು ಖಾಸಗಿ ವ್ಯಕ್ತಿಗಳು ಆಸ್ತಿಯ ಮಾರಾಟ-ಕೊಳ್ಳುವಿಕೆಯಲ್ಲಿ ತೊಡಗುವಾಗ ಅನುಸರಿಸಬಹುದಾದ ಎಲ್ಲ ವಿಧಾನಗಳೂ ಇವರಿಗೆ ಲಭ್ಯವಿದೆ. ಆ ಮೂಲಕ ಮಾತ್ರವೇ ಭಾವನೆಗಳನ್ನು ಪ್ರಕಟಿಸಬೇಕಾದ್ದು ಕಾನೂನಿನ ನಿಯಮ.

ಆ ಜಾಗದ ಮಾಲಿಕರು ಮಾರಾಟ, ಪರಭಾರೆ, ವರ್ಗಾವಣೆ, ಇದಾವುದಕ್ಕೂ ಸಿದ್ಧವಿಲ್ಲದಿದ್ದರೆ ಇವರ ದುರಾದೃಷ್ಟವೆಂದು ಸುಮ್ಮನಾಗಬೇಕು. ಆಸ್ತಿಯನ್ನು ಮಾರಲೇಬೇಕೆಂದು ಯಾರ ಮೇಲೂ ನಿರ್ಬಂಧ ಹೇರಲು ಖಾಸಗಿ ವ್ಯಕ್ತಿಗಳಿಗೆ ಸಾಧ್ಯವಿಲ್ಲ. ಸವಿ ಮಾತಿನಿಂದ ಒಲ್ಲೈಸಬಹುದು, ತರ್ಕದಿಂದ ಪ್ರೇರೇಪಿಸಬಹುದು, ಅಥವಾ ಬುದ್ಧಿವಂತಿಕೆಯ ತಂತ್ರ ಹೂಡಬಹುದು; ಆದರೆ ನಿರ್ಬಂಧ ಹೇರಲು ಆಗುವುದಿಲ್ಲ.

ಈಗಿನ ಪರಿಸ್ಥಿತಿ ಉದ್ಭವಿಸಿರುವುದು ಮಸೀದಿಯ ಮಾಲಿಕರ ಮೇಲೆ ಭಾಜಪ, ಬಜರಂಗ ದಳ, ಆರೆಸ್ಸೆಸ್ ಮತ್ತು ವಿಶ್ವ ಹಿಂದೂ ಪರಿಷತ್ತು ನಿರ್ಬಂಧ ಹೇರಲು ಹೊರಟಿರುವುದರಿಂದ. ಅದಕ್ಕೆ ಅವರು ಪ್ರಯೋಗಿಸುವ ವಾದ ''ಬಹುಸಂಖ್ಯಾತ'' ಎಂಬುದು. ಮಂದಿರದ ನಿರ್ಮಾಣವು ''ರಾಷ್ಟ್ರೀಯ ತೀರ್ಮಾನ'' ಎಂದು ಅವರು ಹೇಳುತ್ತಾರೆ; ಅದು ಖಾಸಗಿ ಆಶಯವಲ್ಲ ಎಂಬುದು ಅವರ ಮಾತು. ಆದರೆ ಮುಖ್ಯವಾಗಿ ಗಮನಿಸಬೇಕಾದ ಅಂಶ ಇದು: ರಾಜಕೀಯ ಬಹುಸಂಖ್ಯಾಕತ್ವವು ಧಾರ್ಮಿಕ ಬಹು ಸಂಖ್ಯಾಕತ್ವವಾಗಿ ಪರಿಣಾಮ ಹೊಂದಲೇಬೇಕೆಂಬ ನಿಯಮವಿಲ್ಲ. ರಾಜಕೀಯ ಬಹುಸಂಖ್ಯಾಕತ್ವವು ರಾಜಕೀಯ ಅಲ್ಪಸಂಖ್ಯಾಕತ್ವದ ಮೂಲಭೂತ ಹಕ್ಕುಗಳನ್ನು ದಮನ ಮಾಡಬಹುದೆಂಬ ನಿಯಮವೂ ಇಲ್ಲ. ನಮ್ಮ ದೇಶದಲ್ಲಿ ಬಹುಸಂಖ್ಯಾಕ ಧಾರ್ಮಿಕ ಭಾವನೆ ಎಂಬುದೊಂದು ಇದೆಯೆ ? ಇದ್ದರೆ ಅದನ್ನು ನಾವು ಸಂವಿಧಾನಾತ್ಮಕವಾಗಿ ಮಾನ್ಯಮಾಡಬೇಕೆ ? ವಾಸ್ತವಿಕವಾಗಿ ಧಾರ್ಮಿಕ ಐಕ್ಯತೆಗಾಗಿ ನಾವು ಬದ್ಧರಲ್ಲ; ಸಂವಿಧಾನದ ಪ್ರಕಾರ ನಾವು ಒಟ್ಟಾಗಿರುವುದು ಸಮಾನ ರಾಜಕೀಯ ಆಕಾಂಕ್ಷೆ ಮತ್ತು ಉದ್ದೇಶಗಳ ಈಡೇರಿಕೆಗಾಗಿ. ಭಾರತೀಯರಿಗೆಲ್ಲಾ ರಾಮ ಮಂದಿರವು ಒಂದು ಸಮಾನ ರಾಜಕೀಯ ಗುರಿಯಾಗಿಲ್ಲ. ಹಾಗೆ ನೋಡಿದರೆ, ಎಲ್ಲ ಹಿಂದುಗಳಿಗೆ ಕೂಡ ಅದು ಸಮಾನ ರಾಜಕೀಯ ಗುರಿಯಲ್ಲ.

ಭಾರತವು ಸ್ವಾತಂತ್ರ್ಯ ಪಡೆದು ಇಬ್ಭಾಗವಾದಾಗ ನಮ್ಮ ಜನ ಒಟ್ಟಾಗಿ ಒಂದು ವೇದಿಕೆಯಲ್ಲಿ ನೆಲೆಗೊಂಡಿದ್ದು ಯಾವ ಆಕಾಂಕ್ಷೆಗಳ ಪೂರೈಕೆಗೆ ? – ಸಾರ್ವಭೌಮತ್ವ, ಪ್ರಜಾಪ್ರಭುತ್ವ, ನ್ಯಾಯ, ಸ್ವಾತಂತ್ರ್ಯ, ಸಮಾನತೆ ಮತ್ತು ಭ್ರಾತೃತ್ವಗಳ ಪೂರೈಕೆಗೆ. ಈ ರಾಜಕೀಯ ಆಕಾಂಕ್ಷೆಗಳು ನಮ್ಮ ದೇಶದ ವಿಕಾಸಕ್ಕೆ ಅಡಿಗಲ್ಲುಗಳಾಗಬೇಕೆಂದು ತೀರ್ಮಾನಿಸಿದೆಯೇ ವಿನಾ ಯಾವುದೇ ಧಾರ್ಮಿಕ ಆಶಯಗಳು ನಮ್ಮನ್ನು ಒಗ್ಗೂಡಿಸಲಿಲ್ಲ. ಅಂದರೆ, ನಮ್ಮ ಧಾರ್ಮಿಕ ಆಕಾಂಕ್ಷೆಗಳನ್ನೂ ರಾಜಕೀಯ ಆಕಾಂಕ್ಷೆಗಳನ್ನೂ ಪ್ರತ್ಯೇಕಗೊಳಿಸಿ ಸಮಾನತೆ ಮತ್ತು ಆರ್ಥಿಕ ಏಳಿಗೆಗಳನ್ನು ನಮ್ಮದು ಮಾಡಿಕೊಳ್ಳಲು ನಾವು ಬದ್ಧರಾದೆವು. ಆದ್ದರಿಂದ ''ರಾಷ್ಟ್ರೀಯ ತೀರ್ಮಾನ'' ಎಂದು ಯಾವುದನ್ನಾದರೂ ಬಣ್ಣಿಸಬೇಕಾದರೆ ಅದಕ್ಕೆ ಅಗತ್ಯವಾಗಿ ಇರಬೇಕಾದ್ದು ರಾಜಕೀಯ ಬಹುಸಂಖ್ಯಾತ ಬೆಂಬಲವೇ ಹೊರತು ಬೇರೇನೂ ಅಲ್ಲ. ನಮ್ಮ ದೇಶದ ಆಡಳಿತ ಸೂತ್ರಗಳನ್ನು ನಿರೂಪಿಸುವಾಗ ನಮ್ಮ ವಿವಿಧ ಧರ್ಮಗಳ ನಿಯಮ-ನಡತೆ-ಭಾವನೆಗಳನ್ನು ನಾವು ಪ್ರಮುಖವಾಗಿ ಸ್ವೀಕರಿಸಲಿಲ್ಲ. ಅದನ್ನು ಯಾರೂ ಏಕಪಕ್ಷೀಯವಾಗಿ ಈಗ ಹೇರುವುದೂ ಸಾಧುವಲ್ಲ. ಹಾಗೆ ಹೇರಲು ತವಕಿಸಿದರೆ ಐಕ್ಯತೆಗೆ ಭಂಗ ಬರುವುದು ಆಕಸ್ಮಿಕವೇನೂ ಆಗುವುದಿಲ್ಲ. ನಮ್ಮ ರಾಷ್ಟ್ರವನ್ನು ಧರ್ಮನಿರಪೇಕ್ಷ ರಾಷ್ಟ್ರವಾಗಿ ರೂಪಿಸಲು ನಾವು ಹೊರಟೆವು; ಆದ್ದರಿಂದ ನಮ್ಮ ಸರ್ಕಾರಗಳಿಗೆ ಯಾವುದೇ ಮತಧರ್ಮದ ಒಡಲಿನಿಂದ ಸ್ಫೂರ್ತಿ ದೊರೆಯಬೇಕಾಗಿಲ್ಲ. ಅದಕ್ಕೆ ಸ್ಫೂರ್ತಿ ಸಂವಿಧಾನವೊಂದೇ. ಅಲ್ಲಿ ಯಾವ ಮತಧರ್ಮಕ್ಕೂ ವಿಶೇಷ ಮನ್ನಣೆ ನೀಡಬೇಕೆಂದು ಹೇಳಿಲ್ಲ ; ಆ ಮಟ್ಟಿಗೆ ಬಹುಸಂಖ್ಯಾತ ಮತ್ತು ಅಲ್ಪಸಂಖ್ಯಾತ ಎಂಬ ಗಣನೆ ಅಪ್ರಸ್ತುತ.

ನಮ್ಮ ಸಮಾನ ಕನಸುಗಳು ರಾಜಕೀಯ - ಸಾಮಾಜಿಕ - ಆರ್ಥಿಕ - ಸಾಂಸ್ಕೃತಿಕ ವರ್ಧನೆಗೆ ಸಂಬಂಧಿಸಿದವು. ಆ ಅರ್ಥದಲ್ಲಿ ರಾಮಮಂದಿರವು ನಮ್ಮ ಸಮಾನ ಕನಸುಗಳಲ್ಲಿ ಸೇರುವುದಿಲ್ಲ. ''ಹಿಂದು ಭಾವನೆ, ಹಿಂದು ಭಾವನೆ'' ಎಂದು ಕೆಲವು ಬೇಜವಾಬ್ದಾರಿ ನಾಯಕರು ಘೋಷಿಸುವಂತೆ ಬೇರೆ ಮತಧರ್ಮಗಳ ಹೆಸರಿನಲ್ಲೂ ಅಬ್ಬರ ಕೇಳಿಬರುತ್ತದೆ. ಆದರೆ ಇವಕ್ಕೆ ಸೊಪ್ಪು ಹಾಕಬೇಕೆಂದು ನಮ್ಮ ಸಮಾಜದ ಆಕಾಂಕ್ಷೆ ರೂಪುಗೊಂಡಿಲ್ಲ. ಯಾವುದೇ ಸಂಸ್ಕೃತಿ, ಮತಧರ್ಮ, ಸಾಮಾಜಿಕ ರಚನೆ, ಇತ್ಯಾದಿಗಳನ್ನು ಅನುಸರಿಸಲು ನಮ್ಮ ಸಮಾಜವು ಅನುಮತಿ ನೀಡುತ್ತದೆ, ನಿಜ; ಆದರೆ ಅದಾವುದೂ ಬೇರೊಂದಕ್ಕೆ ಧಕ್ಕೆಯುಂಟುಮಾಡುವಂತೆ ಇರಲಾಗದು. ''ಹಿಂದು ಭಾವನೆ'' ಎಂಬುದು ''ಮುಸಲ್ಮಾನ ಭಾವನೆ'' ಎಂಬುದರಷ್ಟೇ ಮರೀಚಿಕೆಯಾಗಬೇಕು; ಏಕೆಂದರೆ ನಮ್ಮದು ಹಿಂದು ರಾಷ್ಟ್ರವಲ್ಲ ಮತ್ತು ನಾವು ಗತಕಾಲದ ರಾಮರಾಜ್ಯಕ್ಕೆ ಹೋಗಲು ಹಿಂದೆ ಸರಿಯುವವರೂ ಅಲ್ಲ. ನಾವು ಮುಂದೆ ಹೋಗುವವರು. ಮುಂದೆ ಹೋಗಿ ಎಲ್ಲ ಜನರ ಚೈತನ್ಯವೂ ಸ್ಫುರಿಸುವುದಕ್ಕೆ ಆದ್ಯತೆ ನೀಡುವವರು, ಮಾನವೀಯ ಮೌಲ್ಯಗಳಿಗೆ ಪುಷ್ಟಿ ನೀಡುವವರು, ಎಲ್ಲರ ಪ್ರತಿಭೆಯನ್ನು ಪುರಸ್ಕರಿಸುವವರು. ಹಿಂದಿನ ಮತಧರ್ಮಗಳನ್ನು ಉಳಿಸಿಕೊಳ್ಳಲು ಅಡ್ಡಿಯಿಲ್ಲ , ಆದರೆ ಅವಕ್ಕೆ ಸೀಮಿತರಾಗಿ ಉಳಿಯಬೇಕೆಂಬ ಕಡ್ಡಾಯವೂ ಇಲ್ಲ. ಅವುಗಳೆಲ್ಲದರಿಂದಲೂ ಕಲಿತು, ಅದನ್ನು ಅಂತರ್ಗತ ಮಾಡಿಕೊಂಡು, ಭವಿಷ್ಯವನ್ನು ಸುಂದರವಾಗಿ, ಸರ್ವಾಂಗೀಣವಾಗಿ, ಸಮೃದ್ಧವಾಗಿ ಮಾರ್ಪಡಿಸಬೇಕೆಂಬುದು ನಮ್ಮ ಆಕಾಂಕ್ಷೆ. ಭೂತಕಾಲವು ಭವಿಷ್ಯತ್ತಿಗೆ ಬೇಡಿ ತೊಡಿಸಲು ನಾವು ಬಿಡೆವು. ನಮ್ಮ ಭೂತಕಾಲವೇ ಭವಿಷ್ಯತ್ತೂ ಆಗಬೇಕೆಂಬ ನಿರೀಕ್ಷೆ ನಮ್ಮದಲ್ಲ.

ಆದ್ದರಿಂದ ನಮ್ಮನ್ನು ಭೂತಕಾಲಕ್ಕೆ ಒಯ್ಯಲು ಹವಣಿಸುವವರ ಬಗ್ಗೆ ನಾವು ಎಚ್ಚರದಿಂದಿರ ಬೇಕಾಗಿದೆ. ಭೂತಕಾಲದ ಪರೀಕ್ಷೆ ಈಗಾಗಲೆ ನಡೆದುಹೋಗಿದೆ. ಅದರ ನ್ಯೂನತೆ, ಸೋಲು, ಇತ್ಯಾದಿಗಳು ತಿಳಿದ ವಿಷಯವೇ. ಅದರ ಅರ್ಥವತ್ತಾದ ಮೌಲ್ಯಗಳನ್ನು ಅಳವಡಿಸಿಕೊಂಡು ಇನ್ನೂ ಮುಂದೆ ಹೋಗಬೇಕೆಂಬುದು ನಮ್ಮ ಸಾರ್ವಭೌಮತ್ವ - ಪ್ರಜಾಪ್ರಭುತ್ವ - ಧರ್ಮನಿರಪೇಕ್ಷತೆಗಳ ಒಟ್ಟಾದ ಅರ್ಥ. ಹಿಂದಿನ ಅನ್ಯಾಯಗಳನ್ನು ಸರಿಪಡಿಸುತ್ತಾ ಮುಂದೆ ಸಾಗಬೇಕಾದರೆ ಮೊದಲು ಅಂತಹ ಅನರ್ಥಗಳು ಘಟಿಸದಂತೆ ಸಂಯೋಜಿಸಿಕೊಳ್ಳಬೇಕು. ಎಲ್ಲ ವ್ಯಕ್ತಿಗಳ ಬಗೆಗಿನ ಗೌರವ ಮತ್ತು ವೈಚಾರಿಕ ದೃಷ್ಟಿ ನಮ್ಮ ಮೂಲ ಅಗತ್ಯ.

ಈ ನಿಟ್ಟಿನಲ್ಲಿ ''ಬಹುಸಂಖ್ಯಾಕತ್ವ'' ನಿರ್ಮಾಣವಾಗಬೇಕು. ಪೊಳ್ಳು ಬಹುಸಂಖ್ಯಾಕತ್ವಗಳನ್ನು ಪ್ರಶ್ನಿಸಿ, ಹೊರದೂಡುವುದು ನಮ್ಮ ಕರ್ತವ್ಯ. ನಿಜವಾಗಿಯೂ ಭಾರತದ ಬಹುಸಂಖ್ಯಾಕರ ಅಪೇಕ್ಷೆ ಯಾವುದು ? ಮಂದಿರ - ಮಸೀದಿಗಳನ್ನು ಕಟ್ಟಲು ಮತ್ತು ಉರುಳಿಸಲು ಸಮಯ, ಹಣ, ರಕ್ತ ಹಾಗೂ ಶ್ರಮಗಳನ್ನು ವ್ಯರ್ಥವಾಗಿ ವ್ಯಯಿಸಬೇಕೆಂದೆ ? – ಅಥವಾ, ನಮ್ಮ ದ್ವೇಷಭಾವಗಳು, ಪೂರ್ವಾಗ್ರಹಗಳು, ಕುತ್ಸಿತ ಭಾವನೆಗಳು, ಮುಂತಾದುವನ್ನು ದೂರಮಾಡಿ ಸಮಾನತೆ, ಏಳಿಗೆ ಹಾಗೂ ಸ್ವಾತಂತ್ರ್ಯಗಳನ್ನು ಪಡೆದು ಪೋಷಿಸಬೇಕೆಂದೆ ?

-ತನು ಮೆಹ್ತಾ ತಿವಾರಿ
ವಕೀಲರು, ೩೭, ೪ನೇ ಮಹಡಿ, ಯೂಸುಫ್ ಕಟ್ಟಡ
ಫ್ಲೋರಾ ಫೌಂಟನ್, ಮುಂಬೈ - ೪೦೦ ೦೨೩.
(ಕನ್ನಡಕ್ಕೆ : ಡಾ|| ಜಿ. ರಾಮಕೃಷ್ಣ)

# ಶಾಂತಿಪ್ರಿಯ ವಿಜ್ಞಾನಿ ಪ್ರೊ. ಸತೀಶ್ ಧಾವನ್



ಭಾರತದ ಬಾಹ್ಯಾಕಾಶ ಕಾರ್ಯಕ್ರಮಗಳನ್ನು ಸಮರ್ಥವಾಗಿ ನಡೆಸಿ ಆ ಸಂಸ್ಥೆ ಪ್ರಪಂಚದ ಅಗ್ರಶ್ರೇಣಿಗೆ ಸೇರುವಂತೆ ಶ್ರಮಿಸಿದ ಪ್ರೊ. ಸತೀಶ್ ಧಾವನ್ ಇದೇ ಜನವರಿ ೩ರಂದು ನಿಧನರಾಗಿದ್ದು ಇಡೀ ರಾಷ್ಟ್ರಕ್ಕೇ ಅತೀವ ನಷ್ಟವಾಗಿದೆ. ೧೯೨೦ರಲ್ಲಿ ಶ್ರೀನಗರದಲ್ಲಿ ಜನಿಸಿ ಪಂಜಾಬ್ ವಿಶ್ವವಿದ್ಯಾಲಯದ ಪದವೀಧರರಾಗಿ, ಕ್ಯಾಲಿಫೋರ್ನಿಯ ತಾಂತ್ರಿಕ ಇನ್‌ಸ್ಟಿಟ್ಯೂಟಿನಿಂದ ಏರೊನಾಟಿಕಲ್ ಇಂಜಿನಿಯರಿಂಗ್ ಮತ್ತು ಗಣಿತ ಶಾಸ್ತ್ರಗಳಲ್ಲಿ ಪಿ. ಎಚ್. ಡಿ. ಪಡೆದರು.

೧೯೬೨ರಲ್ಲಿ ಭಾರತೀಯ ವಿಜ್ಞಾನ ಮಂದಿರದ ಡೈರೆಕ್ಟರ್ ಆಗಿ ನೇಮಕಗೊಂಡಾಗ ಅವರಿಗೆ ಕೇವಲ ೪೨ ವರ್ಷ ವಯಸ್ಸಾಗಿತ್ತು. ೧೦ ವರ್ಷಗಳಿಗೂ ಅಧಿಕ ಕಾಲ ಡೈರೆಕ್ಟರ್ ಹುದ್ದೆಯಲ್ಲಿದ್ದು ಭಾರತೀಯ ವಿಜ್ಞಾನ ಮಂದಿರದ ಅಭಿವೃದ್ಧಿಗೆ ತಮ್ಮನ್ನು ಮೀಸಲಾಗಿಟ್ಟುಕೊಂಡರು. ತಾವೇ ಸ್ವತಃ ಸಂಶೋಧನೆ ನಡೆಸಿದ್ದಲ್ಲದೆ, ಯುವ ವಿಜ್ಞಾನಿಗಳಿಗೆ ಪ್ರೋತ್ಸಾಹ ನೀಡಿ, ಭಾರತೀಯ ವಿಜ್ಞಾನ ಮಂದಿರದ ಕೀರ್ತಿಯನ್ನು ಇಡೀ ವಿಶ್ವದಲ್ಲೇ ಹರಡಿದರು. ಭಾರತೀಯ ವಿಜ್ಞಾನ ಮಂದಿರದ ಇಂಜಿನಿಯರಿಂಗ್ ವಿಭಾಗದಲ್ಲೂ ಅತ್ಯುನ್ನತ ಸಂಶೋಧನೆಗಳನ್ನು ಕಾರ್ಯಗತಗೊಳಿಸಲು ಪ್ರೇರೇಪಿಸಿದರು. ಹೊಸ ಹೊಸ ಉಪಯುಕ್ತ ವಿಭಾಗಗಳಾದ ಅಣುಜೀವ, ಭೌತವಿಜ್ಞಾನ, ಸ್ವಯಂಚಾಲಿತ ವಿಜ್ಞಾನ, ಇತ್ಯಾದಿಗಳನ್ನೂ ಆರಂಭಿಸಿದರು.

ನಾಲ್ಕು ದಶಕಗಳ ಹಿಂದೆ ವಿಕ್ರಮ ಸಾರಾಭಾಯಿಯವರು ನಿಧನರಾದ ಮೇಲೆ ಪ್ರೊ. ಧಾವನ್ ಅವರು ಬಾಹ್ಯಾಕಾಶ ಸಂಸ್ಥೆಯ ಚುಕ್ಕಾಣಿಯನ್ನು ಹಿಡಿದು ಆ ಸಂಸ್ಥೆಯ ಸರ್ವತೋಮುಖ ಅಭಿವೃದ್ಧಿಗೆ ಕಾರಣಕರ್ತರಾದರು. ಪ್ರತಿಭಾವಂತ ಯುವ ವಿಜ್ಞಾನಿಗಳನ್ನು ಗುರುತಿಸಿ ತಮ್ಮ ಸಂಸ್ಥೆಯಲ್ಲಿ ಸೇರಿಸಿಕೊಂಡು ಉತ್ತೇಜನ ಕೊಡುವುದು ಅವರ ಆಡಳಿತದ ವೈಶಿಷ್ಟ್ಯ. ಹೀಗೆ ಅವರು ಗುರುತಿಸಿದ ಇಂಜಿನಿಯರ್ ಪ್ರೊ. ರೊಡ್ಡಮ್ ನರಸಿಂಹ. ರೊಡ್ಡಮ್ ಅವರು ಕ್ರಮೇಣ ರಾಷ್ಟ್ರೀಯ ವೈಮಾನಿಕ ಪ್ರಯೋಗ ಶಾಲೆಯ ನಿರ್ದೇಶಕರಾಗಿ ವಿಶ್ರಾಂತರಾದರು. ರಾಯಲ್ ಸೊಸೈಟಿಯ ಫೆಲೊ ಆದ ಖ್ಯಾತಿ ಅವರದಾಗಿತ್ತು. ಯುವ ವಿಜ್ಞಾನಿಗಳನ್ನು ಮತ್ತು ವಿದ್ಯಾರ್ಥಿಗಳನ್ನು ಸಹೃದಯದಿಂದ ಪ್ರೋತ್ಸಾಹಿಸಿ ಅವರ ಶ್ರೇಯೋಭಿವೃದ್ಧಿಗೆ ನೆರವನ್ನು ನೀಡುವುದು ಅವರ ಮಾನವತಾ ದೃಷ್ಟಿಯ ಒಂದು ಮುಖವಾಗಿತ್ತು. ವಿದ್ಯಾರ್ಥಿಗಳನ್ನು ಸಂದರ್ಶಿಸುವಾಗ ನಡೆಯುವ ಹಲವು ಪ್ರಸಂಗಗಳನ್ನು ನನ್ನೊಡನೆ ಧಾವನ್ ಅವರು ಹಂಚಿಕೊಂಡಿದ್ದುಂಟು, ದುಃಖಪಟ್ಟಿದ್ದುಂಟು. ಒಮ್ಮೆ ಸಂದರ್ಶನಕ್ಕೆ ಬಂದ ವಿದ್ಯಾರ್ಥಿಗೆ ಪ್ರಾಧ್ಯಾಪಕರು, ''ಔಷ್ಣೀಯಚಲನೆ (ಥರ್ಮೊಡೈನಮಿಕ್ಸ್) ಬಗ್ಗೆ ನಿನಗೇನು ಅನಿಸುತ್ತೆ'' ಎಂಬ ಪ್ರಶ್ನೆಯನ್ನು ಕೇಳಿದಾಗ, ವಿದ್ಯಾರ್ಥಿ ಕೆರಳಿ ''ಖಚಿತವಾತ ಪ್ರಶ್ನೆ ಕೇಳಿ, ಕರಾರುವಾಕ್ಕಾದ ಉತ್ತರ ಲಭಿಸುತ್ತೆ. ನೀವೆಂಥ ಪ್ರಶ್ನೆ ಕೇಳಿದ್ದೀರಾ'' ಎಂದು ಸಿಡಿದು ಉತ್ತರಿಸಿದ್ದನ್ನು ಅವರು ಉದಾಹರಿಸಿದ್ದರು. ಸದಾ ಕೆಲಸ ಕಾರ್ಯಗಳಲ್ಲಿ ಮುಳುಗಿರುತ್ತಿದ್ದ ಅವರು ಅನವಶ್ಯಕವಾಗಿ ರಜೆಯನ್ನು ನೀಡುತ್ತಿರಲಿಲ್ಲ. ಪ್ರಧಾನಿ ಜವಾಹರಲಾಲ್ ನೆಹ್ರು ನಿಧನರಾದಾಗ ಸಂತಾಪ ಸೂಚಕ ಸಭೆಯೊಂದನ್ನು ಏರ್ಪಡಿಸಿದ್ದರು. ಸಭೆಯನಂತರ ಪ್ರಾಧ್ಯಾಪಕರು ಮತ್ತು ಸಿಬ್ಬಂದಿ ವರ್ಗದವರು ರಜೆಯ ನಿರೀಕ್ಷೆಯಲ್ಲಿದ್ದಾಗ ಧಾವನ್ ಅವರು, ''ನೆಹ್ರುರವರಿಗೆ ನಮ್ಮ ಅರ್ಪಣೆಯೆಂದರೆ, ನಾವೆಲ್ಲ ನಮ್ಮ ನಮ್ಮ ಕೆಲಸ ಕಾರ್ಯಗಳಿಗೆ ಹಿಂತಿರುಗುವುದೇ ಸರಿ'' ಎಂದು ಘೋಷಿಸಿದಾಗ, ರಜೆ ನಿರೀಕ್ಷಿಸಿದ್ದವರಿಗೆ ನಿರಾಶೆಯಾಯಿತು !

ಪ್ರೊ. ಧಾವನ್ ಅವರ ಪರಿಸರ ಕಾಳಜಿ ಅನುಕರಣೀಯವಾಗಿತ್ತು. ಭಾರತೀಯ ವಿಜ್ಞಾನ ಮಂದಿರದ ಮರಗಿಡಗಳನ್ನು ತಮ್ಮ ಸ್ವಂತ ಆಸ್ತಿಯಂತೆ ಕಾಪಾಡಿಕೊಂಡು ಬಂದಿದ್ದರು. ಯಾವುದೇ ಸಣ್ಣ ಪುಟ್ಟ ಗಿಡವನ್ನಾಗಲಿ ತಮ್ಮ ಅಪ್ಪಣೆಯಿಲ್ಲದೆ ಕಡಿಯಲು ಅನುಮತಿ ನೀಡುತ್ತಿರಲಿಲ್ಲ. ಅವರ ಸೇವಾ ಅವಧಿಯಲ್ಲಿ ಹೊಸ ಕಟ್ಟಡಗಳು ಎದ್ದಿದ್ದು ಬಹಳ ಕಡಿಮೆ. ಅವರ ಅವಧಿ ಮುಗಿದ ನಂತರ ಅನೇಕ ಕಟ್ಟಡಗಳು ಮೇಲೇರಿದವು ! ಕುದುರೆಮುಖ ಕಬ್ಬಿಣದ ಅದಿರಿನ ಪ್ರಾಜೆಕ್ಟ್ ಬಗ್ಗೆ ನಿರ್ಧಾರ ತೆಗೆದುಕೊಳ್ಳುವಾಗ ಕರ್ನಾಟಕ ಸರ್ಕಾರಕ್ಕೆ ತಮ್ಮ ವಿರೋಧವನ್ನು ವ್ಯಕ್ತಪಡಿಸಿದ್ದುಂಟು.

ವಿಜ್ಞಾನಿಗಳಲ್ಲಿ ಅಪರೂಪವಾದ ಸಾಮಾಜಿಕ ದೃಷ್ಟಿ ಮತ್ತು ರಾಜಕೀಯ ಪ್ರಜ್ಞೆ ಧಾವನ್ ಅವರಲ್ಲಿತ್ತು. ಸುಮಾರು ೫೨ ವರ್ಷಗಳಿಂದ ನನಗೆ ಧಾವನ್ ಅವರ ಈ ರೀತಿಯ ದೃಷ್ಟಿಕೋನ ಪರಿಚಯವಾಗಿತ್ತು. ಐದು ದಶಕಗಳಿಗೂ ಹಿಂದೆ ಧಾವನ್ ಸೇರಿದಂತೆ ನಾವು ಗೆಳೆಯರು ಸಾಮಾಜಿಕ, ಸಾಂಸ್ಕೃತಿಕ ಹಾಗೂ ರಾಜಕೀಯ ವಿಚಾರಗಳ ಬಗ್ಗೆ ಚರ್ಚಿಸಲು ಒಂದು ಅಧ್ಯಯನ ತಂಡವನ್ನು ಏರ್ಪಡಿಸಿಕೊಂಡಿದ್ದೆವು. ಅಮೂಲ್ಯರೆಡ್ಡಿ, ಲಕ್ಷ್ಮಣರಾವ್, ಶ್ರೀನಿವಾಸನ್, ವಾಸುದೇವಮೂರ್ತಿ ಮತ್ತಿತರರು ಈ ತಂಡದಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದರು. ನಾವು ಪ್ರಮುಖವಾಗಿ ಮಾರ್ಕ್ಸಿಸ್ಟ್ ತತ್ವವನ್ನು ಪ್ರತಿಪಾದಿಸುವ ಮೂಲ ಗ್ರಂಥಗಳನ್ನು ಅಧ್ಯಯನ ಮಾಡುತ್ತಿದ್ದರೂ, ಸಮಕಾಲೀನ ರಾಜಕೀಯ ವಿದ್ಯಮಾನಗಳನ್ನು ಕೂಲಂಕಷವಾಗಿ ಚರ್ಚೆ ಮಾಡುತ್ತಿದ್ದದುಂಟು. ಭಾರತೀಯ ವಿಜ್ಞಾನ ಮಂದಿರದಲ್ಲಿ ಆಗತಾನೆ ಸಂಶೋಧನೆಗೆ 'ಗಾಳಿ ಸುರಂಗ' (ವಿಂಡ್ ಟನಲ್)ವನ್ನು ಕಟ್ಟುತ್ತಿದ್ದು ಬಿಡುವಿಲ್ಲದಿದ್ದರೂ ಧಾವನ್ ಅವರು ಅಧ್ಯಯನದಲ್ಲಿ ಸಂಪೂರ್ಣವಾಗಿ ಭಾಗವಹಿಸಿ ತಮ್ಮ ಅಮೂಲ್ಯವಾದ ಸಲಹೆಗಳನ್ನು ನೀಡುತ್ತಿದ್ದರು. Communist Manifesto, State and Revolution, Origin of the Family, Private Property and the State, Anti-Duhring ಮುಂತಾದ ಮಾರ್ಕ್ಸಿಸ್ಟ್ ಗ್ರಂಥಗಳನ್ನು ನಾವು ಕ್ರಿಟಿಕಲ್ ದೃಷ್ಟಿಯಿಂದ ವ್ಯಾಸಂಗ ಮಾಡುತ್ತಿದ್ದೆವು. ಕಾರ್ಲ್ ಮಾರ್ಕ್ಸ್‌ನ 'ದಾಸ್ ಕ್ಯಾಪಿಟಲ್'ನ್ನೂ ಸಹ ನಮ್ಮ ವ್ಯಾಪ್ತಿಗೆ ಸೇರಿಸಿಕೊಂಡಿದ್ದೆವು. ಇದನ್ನು ಅರ್ಥೈಸಿ ಮನದಟ್ಟು ಮಾಡಿಕೊಳ್ಳುವುದು ಒಂದು ಸಾಹಸವೆಂದೆನಿಸಿತ್ತು. ನಮ್ಮ ಅಧ್ಯಯನ ಗೋಷ್ಠಿಯಲ್ಲಿ ಒಂದೆರಡು ಸಲ ಮುಂಬಯಿಯ ತಾತಾ ಮೂಲಭೂತ ಸಂಶೋಧನಾಲಯದಲ್ಲಿ ಗಣಿತ ವಿಜ್ಞಾನದ ಪ್ರಾಧ್ಯಾಪಕರಾಗಿದ್ದ ಡಾ॥ ಡಿ. ಡಿ. ಕೊಸಾಂಬಿಯವರು ಬಂದಿದ್ದು ಚರ್ಚೆಗಳಲ್ಲಿ ಪಾಲ್ಗೊಂಡಿದ್ದರು. ಮುಖ್ಯವಾಗಿ ಅವರು ಭಾರತ ಕಮ್ಯುನಿಸ್ಟ್ ಪಕ್ಷದ ಧುರೀಣರಾದ ಎಸ್. ಎ. ಡಾಂಗೆಯವರ "From Primitive Communism to Slavery" ಎಂಬ ಪುಸ್ತಕ ವ್ಯಾಖ್ಯಾನವನ್ನು ಕಟುವಾಗಿ ಟೀಕಿಸುತ್ತಿದ್ದರು. ಅಂದಿನ ದಿನಗಳಲ್ಲಿ ಜ್ವಲಂತವಾದ ಪ್ರಶ್ನೆಯೆಂದರೆ, ''ಭಾರತದಲ್ಲಿ ಗುಲಾಮಿ ವ್ಯವಸ್ಥೆ ಚಾಲ್ತಿಯಲ್ಲಿತ್ತೇ'' ಎಂಬುದು. ಗುಲಾಮಿ ವ್ಯವಸ್ಥೆ ಭಾರತದಲ್ಲಿತ್ತೆಂಬುದಕ್ಕೆ ಸಾಕಷ್ಟು ವೈಜ್ಞಾನಿಕ ಪುರಾವೆಗಳಿರಲಿಲ್ಲ. ಇತಿಹಾಸದ ಸತ್ಯಾಂಶಗಳನ್ನು ತಿಳಿಯಲು ಕರಾರುವಾಕ್ಕಾದ ವೈಜ್ಞಾನಿಕ ಆಧಾರಗಳಿರಬೇಕಷ್ಟೆ. ಕೊಸಾಂಬಿಯವರು ಈ ನಿಟ್ಟಿನಲ್ಲಿ ಸಾಕಷ್ಟು ಸಂಶೋಧನಾತ್ಮಕ ಲೇಖನಗಳನ್ನು ನೀಡಿದ್ದಾರೆ. ಭಾರತೀಯ ಇತಿಹಾಸವನ್ನು ಅಧ್ಯಯನ ಮಾಡುವ ರೀತಿ ರಿವಾಜನ್ನು ವೈಜ್ಞಾನಿಕ ದೃಷ್ಟಿಯಿಂದ ಗುರುತಿಸಿದ್ದಾರೆ. ಅನೇಕ ಪ್ರೌಢ ಲೇಖನಗಳನ್ನೂ ಪುಸ್ತಕಗಳನ್ನೂ ಪ್ರಕಟಿಸಿದ್ದಾರೆ. ಇತಿಹಾಸವನ್ನು ಯದ್ವಾತದ್ವಾ ತಿರುಚಲು ಹೊರಟಿರುವ ಮುರಳಿ ಮನೋಹರ ಜೋಶಿ ಮತ್ತು ಅವರ ಹಿಂಬಾಲಕರು ಕೊಸಾಂಬಿಯವರ ಬರಹಗಳನ್ನು ಓದುವುದು ಅಗತ್ಯವೆನಿಸುತ್ತದೆ. ಕೇವಲ ಮೌಖಿಕವಾಗಿ ಲಭಿಸಿದ ಶ್ಲೋಕಗಳ

**ಎಂ. ಎ. ಸೇತುರಾವ್**



*೧೯೮೬ರಲ್ಲಿ ಬೆಂಗಳೂರಿನಲ್ಲಿ ನಡೆದ ಶಾಂತಿ ಸೌಹಾರ್ದತೆ ಸಲುವಾದ ಅಂತರರಾಷ್ಟ್ರೀಯ ಸಮ್ಮೇಳನದಲ್ಲಿ ಪ್ರೊ॥ ಧಾವನ್ (ಬಲತುದಿ)*

ಆಧಾರದ ಮೇಲೆ ಇತಿಹಾಸದ ಸೂಕ್ಷ್ಮಗಳನ್ನು ನಿರ್ಧರಿಸುವುದು ಸಾಧ್ಯವಿಲ್ಲ.

೧೯೫೦ರ ಸಮಯದಲ್ಲಿ ಬೆಂಗಳೂರಿನಲ್ಲಿ ಸಂಘಟಿಸಲಾದ ಕಾರ್ಮಿಕ ಚಳುವಳಿಗಳ ಬಗ್ಗೆ ಧಾವನ್ ಅವರ ಸಹಾನುಭೂತಿ ಇತ್ತು. ಚುಣಾವಣೆಗಳಲ್ಲಿ ಪ್ರಗತಿಪರ ಪಕ್ಷ ಹಾಗೂ ಕಾರ್ಮಿಕ ಬಂಧುಗಳಿಗೆ ನೆರವನ್ನು ನೀಡುವ ವ್ಯವಸ್ಥೆಗಳಲ್ಲಿ ಸಕ್ರಿಯ ಪಾತ್ರವನ್ನು ಧಾವನ್ ವಹಿಸಿದ್ದುಂಟು. ಸೆಂಟ್ರಲ್ ಕಾಲೇಜಿನ ಅಧ್ಯಾಪಕರು ತಮ್ಮ ವೇತನ ಹೆಚ್ಚಾಗಬೇಕೆಂದು ವಿಶ್ವವಿದ್ಯಾಲಯದ ಆಡಳಿತ ವರ್ಗವನ್ನು ಒತ್ತಾಯಿಸಿದಾಗ, ವೇತನ ಪರಿಷ್ಕಾರದ ಅಗತ್ಯತೆಯನ್ನು ಕುರಿತು ಅಂಕಿ ಅಂಶಗಳನ್ನು ಸಂಗ್ರಹಿಸಲಾಯಿತು. ಈ ಅಂಕಿ ಅಂಶಗಳನ್ನು ಸಂಖ್ಯಾಕಲನದ ಬೆಂಬಲದಿಂದ ಅಧಿಕಾರಿಗಳ ಸಮ್ಮುಖದಲ್ಲಿ ಮಂಡಿಸಲು ಪ್ರೊ. ಧಾವನ್ ಅವರು ಸಹಾಯ ಮಾಡಿದ್ದು ನನಗೆ ಇಂದಿಗೂ ನೆನಪಿನಲ್ಲಿದೆ. ಆ ದಿನಗಳಲ್ಲಿ ಜರುಗಿದ ಅನೇಕ ರಾಜಕೀಯ ಸಭೆಗಳಲ್ಲಿ ನಮ್ಮೊಡನೆ ಭಾಷಣಗಳನ್ನು ಕೇಳಲು ಧಾವನ್ ಅವರು ಚಿಕ್ಕ ಲಾಲ್‌ಬಾಗ್ ಮತ್ತಿತರ ಸ್ಥಳಗಳಿಗೆ ಬರುತ್ತಿದ್ದರು. ಅಲ್ಲದೆ, ಅಖಿಲ ಭಾರತ ಕಮ್ಯುನಿಸ್ಟ್ ಪಕ್ಷದ ಧುರೀಣರನ್ನು ನಮ್ಮ ತಂಡ ಸಂದರ್ಶಿಸಿ ಅಂದಿನ ರಾಜಕೀಯ ವಿದ್ಯಮಾನಗಳನ್ನು ವಿಮರ್ಶೆಗೊಳಪಡಿಸುತ್ತಿದ್ದೆವು. ಹೀಗೆ, ತಮಿಳುನಾಡಿನ ಪಿ. ರಾಮಮೂರ್ತಿ, ಕೇರಳದ ಇ. ಎಂ. ಎಸ್. ನಂಬೂದ್ರಿಪಾದ್, ಕೇಂದ್ರ ಪಕ್ಷದ ಕಾರ್ಯದರ್ಶಿಯೂ ಆದ ಅಜಯ್ ಘೋಷ್ ಅವರನ್ನು ನಾವು ಭೇಟಿಯಾಗಿದ್ದೆವು.

೨೦ನೆಯ ಶತಮಾನ ಪರಮಾಣು ಶಕ್ತಿಯ ಆವಿಷ್ಕಾರದ ಶತಮಾನ. ಯುರೇನಿಯಮ್ ವಿದಳನದಿಂದ ಹಾಗೂ ಜಲಜನಕದಂಥ ಹಗುರ ಪರಮಾಣುಗಳ ಸಮ್ಮೇಳನದಿಂದ ಅಗಾಧ ಶಕ್ತಿಯನ್ನು ಬಿಡುಗಡೆ ಮಾಡಬಹುದು. ಪರಮಾಣು ಬಾಂಬುಗಳು, ಹೈಡ್ರೋಜನ್ ಬಾಂಬುಗಳು, ನ್ಯೂಟ್ರಾನ್ ಬಾಂಬುಗಳು ಈ ಪ್ರಕ್ರಿಯೆಯನ್ನು ಬಳಸಿಕೊಂಡು ವಿನಾಶವನ್ನೇ ಉಂಟುಮಾಡಬಹುದು. ಎರಡನೆಯ ಮಹಾಯುದ್ಧ ಅಂತಿಮ ಘಟ್ಟ ತಲುಪಿದ್ದರೂ ಅಮೆರಿಕ ಹಿರೋಷಿಮಾ ಮತ್ತು ನಾಗಸಾಕಿ ನಗರಗಳ ಮೇಲೆ ಪರಮಾಣು ಬಾಂಬುಗಳನ್ನು ಸ್ಫೋಟಿಸಿ ಅತ್ಯಂತ ಹೇಯಕೃತ್ಯವನ್ನು ಮಾಡಿದ್ದು ಇಂದು ಇತಿಹಾಸದ ದುರಂತವೆನಿಸಿದೆ. ಪರಮಾಣು ಬಾಂಬಿನ ತಯಾರಿಕೆಯಲ್ಲಿ ಪಾತ್ರವಹಿಸಿದ್ದ ಅನೇಕ ವಿಜ್ಞಾನಿಗಳು ಈ ಅಗಾಧ ಶಕ್ತಿಯ ಬಗ್ಗೆ ಮರು ಯೋಚನೆ ಮಾಡಲಾರಂಭಿಸಿದರು. ಮುಂದೆ ಮಹಾಯುದ್ಧವೇನಾದರೂ ಸಂಭವಿಸಿದರೆ ಪರಮಾಣು ಬಾಂಬುಗಳಿಂದ ಮಾನವ ಕುಲದ ಉಳಿವಿಗೆ ಧಕ್ಕೆಯಾಗಬಹುದೆಂಬ ಭೀತಿ ಅವರಲ್ಲಿ ಆವರಿಸಿತು. ಈ ಹಿನ್ನೆಲೆಯಲ್ಲಿ ೧೯೪೮ರ ಆಗಸ್ಟ್‌ನಲ್ಲಿ ಪೋಲೆಂಡಿನ ವ್ರಾಕ್ಲಾವ್ ನಗರದಲ್ಲಿ ಶಾಂತಿ ಸಂರಕ್ಷಣೆಯ ಆದರ್ಶವನ್ನು ಮುಂದಿಟ್ಟುಕೊಂಡ ಬುದ್ಧಿಜೀವಿಗಳ ಸಮ್ಮೇಳನವೊಂದು ನಡೆಯಿತು. ವಿಶ್ವಶಾಂತಿ ರಕ್ಷಣೆಗೆ ವಿಸ್ತಾರವಾದ ಮತ್ತು ಬೃಹತ್ ಚಳುವಳಿಯ ಅವಶ್ಯಕತೆಯನ್ನು ಈ ಸಮ್ಮೇಳನ ಮನಗೊಂಡು ಬುದ್ಧಿಜೀವಿಗಳಿಗೆ ಕರೆಯನ್ನು ಕೊಟ್ಟಿತು. ೧೯೪೯ರಲ್ಲಿ ಪ್ಯಾರಿಸ್ ಮತ್ತು ಪ್ರಾಗ್‌ನಲ್ಲಿ ಶಾಂತಿ ಸಮ್ಮೇಳನಗಳು ಯಶಸ್ವಿಯಾಗಿ ನಡೆದವು. ಈ ನಿಟ್ಟಿನಲ್ಲಿ ೧೯೫೦ರ ನವೆಂಬರ್‌ನಲ್ಲಿ ಪೋಲೆಂಡಿನ ರಾಜಧಾನಿಯಾದ ವಾರ್ಸಾದಲ್ಲಿ ಏರ್ಪಡಿಸಿದ್ದ ಶಾಂತಿ ಸಮ್ಮೇಳನ ಚರಿತ್ರಾರ್ಹ. ಈ ಸಮ್ಮೇಳನದಲ್ಲಿ ವಿಶ್ವಶಾಂತಿ ಸಮಿತಿ ಸ್ಥಾಪನೆಯಾಗಿ ಖ್ಯಾತ ಫ್ರೆಂಚ್ ಪರಮಾಣು ವಿಜ್ಞಾನಿ ಪ್ರೊ. ಜೋಲಿಯೊ ಕ್ಯೂರಿ (ರೇಡಿಯಮ್ ಸಂಶೋಧಿಸಿದ ಮೇಡಮ್ ಕ್ಯೂರಿಯವರ ಅಳಿಯ) ಮೊಟ್ಟಮೊದಲನೆಯ ಅಧ್ಯಕ್ಷರಾಗಿ ಚುನಾಯಿತರಾದರು. ಇದರಿಂದ ಶಾಂತಿ ಚಳುವಳಿಯಲ್ಲಿ ವಿಜ್ಞಾನಿಗಳ ಸಕ್ರಿಯ ಪಾತ್ರಕ್ಕೆ ಹೊಸ ಉತ್ಸಾಹ ಬಂದಂತಾಯಿತು. ಹೀಗಾಗಿ, ೧೯೫೦ನೆಯ ವರ್ಷ ಶಾಂತಿ ಚಳುವಳಿಯ ಗಮನಾರ್ಹ ವರ್ಷ. ಶಾಂತಿ ಪ್ರಿಯರ ವಿಶ್ವಸಮ್ಮೇಳನ ಸ್ವೀಡನ್ನಿನ ರಾಜಧಾನಿಯಾದ ಸ್ಟಾಕ್‌ಹೋಮಿನಲ್ಲಿ ಸಭೆ ಸೇರಿ, ಜನತೆ ತಮ್ಮ ಸಹಿಗಳ ಮೂಲಕ ಪರಮಾಣು ಯುದ್ಧದ ವಿರುದ್ಧ ವಿಶ್ವಾದ್ಯಂತ ಸಂಘಟಿತರಾಗಲು ಘೋಷಿಸಿತು. ಸುಮಾರು ೫೦ ಕೋಟಿ ಜನರು ಈ ಮನವಿಗೆ ಸಹಿಹಾಕಿದರು. ಬೆಂಗಳೂರಿನಲ್ಲೂ ಸಹ ಹುರುಪಿನಿಂದ ವಿದ್ಯಾರ್ಥಿಗಳ, ಕಾರ್ಮಿಕರ, ಅಧ್ಯಾಪಕರ ಮತ್ತಿತರ ಸಾರ್ವಜನಿಕರ ಸಹಿಯನ್ನು ಸಂಗ್ರಹಿಸಲಾಯಿತು. ಪ್ರೊ. ಧಾವನ್ ಈ ಚಳುವಳಿಯಲ್ಲಿ ಭಾಗವಹಿಸಿದರು. ಜೋಲಿಯೊ ಕ್ಯೂರಿ ಅವರು 'ವಿಶ್ವ ವೈಜ್ಞಾನಿಕ ಕಾರ್ಮಿಕರ ಒಕ್ಕೂಟ'ದ ಅಧ್ಯಕ್ಷರೂ ಆಗಿದ್ದರು. ಈ ಒಕ್ಕೂಟ ಹಾಗೂ ಭಾರತದ 'ವೈಜ್ಞಾನಿಕ ಕಾರ್ಮಿಕರ ಸಂಘ' (Association of Scientific Workers of India) ಶಾಂತಿ ಚಳುವಳಿಯಲ್ಲಿ ಭಾಗವಹಿಸಿತು. ಪ್ರೊ. ಧಾವನ್ ಅವರು ಭಾರತದ ವಿಜ್ಞಾನ ಕಾರ್ಮಿಕರ ಸಂಘದ ಸ್ಥಾಪನೆಗೆ ಹಾಗೂ ಅದರ ಚಟುವಟಿಕೆಗಳಿಗೆ ನೆರವನ್ನು ನೀಡಿದರು.

ಪರಮಾಣು ಶಸ್ತ್ರಾಸ್ತ್ರಗಳ ವಿರುದ್ಧ ಒಂದು ಮನವಿ ೧೯೫೫ರ ಜುಲೈ ೯ರಂದು ಬಿಡುಗಡೆಯಾಗಿ 'ಐನ್‌ಸ್ಟೈನ್-ರಸೆಲ್ ಘೋಷಣೆ' ಎಂಬ ಹೆಸರಿನಲ್ಲಿ ಪ್ರಸಿದ್ಧವಾಯಿತು. ಈ ಘೋಷಣೆಗೂ ಜೋಲಿಯೊ ಕ್ಯೂರಿ ಕಾರಣರಾಗಿದ್ದರು. ೧೯೫೭ರಲ್ಲಿ ಇದೇ ಧ್ಯೇಯೋದ್ದೇಶಗಳಿಂದ ವಿವಿಧ ದೇಶಗಳ ವಿಜ್ಞಾನಿಗಳು ಕೆನಡಾದ 'ಪಗ್‌ವಾಷ್' ನಗರದಲ್ಲಿ ಸಭೆ ಸೇರಿ 'ಐನ್‌ಸ್ಟೈನ್-ರಸೆಲ್' ಮನವಿಗೆ ಬೆಂಬಲ ನೀಡಿದರು. ಪ್ರೊ. ಧಾವನ್ ಅವರೂ ಸಹ ಪಗ್‌ವಾಷ್ ತಂಡಕ್ಕೆ ಸೇರಿದ ವಿಜ್ಞಾನಿಯಾಗಿದ್ದರು. ಖಂಡಾಂತರ ಕ್ಷಿಪಣಿಗಳನ್ನು ಅಂತರಿಕ್ಷದಲ್ಲೇ ತುಂಡರಿಸುವ ಒಂದು ಕೆಟ್ಟ ಯೋಜನೆಯನ್ನು ಅಮೆರಿಕಾದ ಅಧ್ಯಕ್ಷರಾಗಿದ್ದ ರೇಗನ್ ಹಿಂದೆ 'ತಾರಾಸಮರ'ವೆಂಬ ಹೆಸರಿನಲ್ಲಿ ವ್ಯವಸ್ಥೆಗೊಳಿಸಲು ಸನ್ನದ್ಧರಾಗಿದ್ದರು. ವಿಶ್ವದ ಖ್ಯಾತ ವಿಜ್ಞಾನಿಗಳು 'ತಾರಾಸಮರ'ದ ವಿರುದ್ಧ ಸಿಡಿದೆದ್ದರು. ತಾರಾಸಮರಕ್ಕೆ ವಿರೋಧ ವ್ಯಕ್ತಪಡಿಸಿದ ಪ್ರಸಿದ್ಧ ವಿಜ್ಞಾನಿಗಳ ಪೈಕಿ ಪ್ರೊ. ಧಾವನ್ ಅವರೂ ಒಬ್ಬರಾಗಿದ್ದರು. ಭಾರತೀಯ ಶಾಂತಿ ಮತ್ತು ಸೌಹಾರ್ದತಾ ಸಂಘಟನೆ ೧೯೮೬ರಲ್ಲಿ ಅಂತಾರಾಷ್ಟ್ರೀಯ ಶಾಂತಿ ಸಮ್ಮೇಳನವನ್ನು ಬೆಂಗಳೂರಿನ ಚೌಡಯ್ಯ ಭವನದಲ್ಲಿ ಏರ್ಪಡಿಸಿತ್ತು. ಸಮ್ಮೇಳನದ ಅಂಗವಾಗಿ ಪ್ರೊ. ಧಾವನ್ ಅವರು 'ತಾರಾಸಮರ'ವನ್ನು ಕುರಿತು ಸ್ಲೈಡುಗಳ ಸಹಿತ ವಿಚಾರಪೂರಿತ ಉಜ್ವಲ ಉಪನ್ಯಾಸವನ್ನು ಮಾಡಿದ್ದು ನಮ್ಮೆಲ್ಲರ ನೆನಪಿನಲ್ಲಿ ಹಸಿರಾಗಿಯೇ ಇದೆ.

ಪ್ರೊ. ಧಾವನ್ ಅವರು ಭಾರತೀಯ ವಿಜ್ಞಾನ ಮಂದಿರದ ನಿರ್ದೇಶಕರಾಗಿದ್ದ ಅವಧಿಯಲ್ಲಿ ಎರಡು ಉಪಯುಕ್ತ ಸ್ವಯಂ ಆಡಳಿತವುಳ್ಳ ಸಂಸ್ಥೆಗಳ ಹುಟ್ಟಿಗೆ ಕಾರಣರಾದರು. ಗ್ರಾಮೀಣ ಅಭಿವೃದ್ಧಿಗೆ ಮೀಸಲಾದ ಎರಡು ಸಂಸ್ಥೆಗಳು ಅಸ್ತ್ರ (Cell for the Application of S&T to Rural Areas) ಮತ್ತು ಕರ್ನಾಟಕ ರಾಜ್ಯ ವಿಜ್ಞಾನ ಮತ್ತು ತಂತ್ರ ವಿದ್ಯಾ ಮಂಡಲಿ (KSCST). ಈ ಎರಡೂ ಸಂಸ್ಥೆಗಳು ಗ್ರಾಮೀಣ ಅಭಿವೃದ್ಧಿಗೆ ವಿಜ್ಞಾನಿಗಳನ್ನು ತೊಡಗಿಸುವುದರಲ್ಲಿ ಸಕ್ರಿಯ ಪಾತ್ರ ವಹಿಸಿದವು. ಇಡೀ ಭಾರತಕ್ಕೇ ''ಮಾದರಿ ಸಂಸ್ಥೆ''ಗಳೆಂದು ಇವು ಪ್ರಸಿದ್ಧವಾಗಿವೆ. ಸಮರ್ಥ ಆಡಳಿತಗಾರ, ಶಾಂತಿಪ್ರಿಯ ವಿಜ್ಞಾನಿ ಹಾಗೂ ಸಾಮಾಜಿಕ ಕಳಕಳಿಯನ್ನು ಹೊಂದಿದ್ದ, ಪ್ರಗತಿಪರ ಧೋರಣೆಯನ್ನಿಟ್ಟುಕೊಂಡಿದ್ದ ಪ್ರೊ. ಸತೀಶ್ ಧಾವನ್ ಅವರ ಜೀವನಕ್ರಮ ಇತರ ವಿಜ್ಞಾನಿಗಳಿಗೆ ಆದರ್ಶವಾಗಲಿ ಎಂದು ಆಶಿಸೋಣ.

**ಎಂ. ಎ. ಸೇತುರಾವ್**
ನಂ. ೪೨೯, ಸುಬ್ರಹ್ಮಣ್ಯನಗರ
ಮುನೇಶ್ವರ ದೇವಸ್ಥಾನದ ರಸ್ತೆ, ಬೆಂಗಳೂರು - ೫೬೦ ೦೨೧

# ಜಾಗತೀಕರಣ

# ಅಪರಾಧ ಮತ್ತು ಶಿಕ್ಷೆ

**ಭ**ಗವದ್ಗೀತೆಯ ಹಿನ್ನೆಲೆ ಯಾರಿಗೆ ತಿಳಿದಿಲ್ಲ? ಬಂಧು ಬಾಂಧವರು, ಗುರುಹಿರಿಯರು ಅಲ್ಲದೆ ಅಕ್ಷೋಹಿಣಿಗಟ್ಟಲೆ ಸೈನಿಕರು ಇವರನ್ನೆಲ್ಲ ರಣಾಂಗಣದಲ್ಲಿ ಎದುರಿಸಿ ಕೊಲ್ಲುವ ಸಂದರ್ಭ ಅನಿವಾರ್ಯವಾದಾಗ ವಿಕ್ರಮಾರ್ಜುನನೆನಿಸಿ ಕೊಂಡ ಅರ್ಜುನನು ವಿಷಾದಕ್ಕೊಳಗಾಗಿ ಯುದ್ಧಕ್ಕೆ ಮೊದಲೇ ವಿಮುಖನಾಗಿ ನಿಲ್ಲುತ್ತಾನೆ. ಶ್ರೀಕೃಷ್ಣ ಅವನ ಮನಸ್ಸಿಗೆ ಕವಿದ ಮೋಹವನ್ನು ಹೋಗಲಾಡಿಸಲು ಕೈಗೊಂಡ ದಾರ್ಶನಿಕ ಸಂವಾದವೇ ಗೀತೆಯ ವಿಷಯ ವಾಗಿದೆ. ರಣರಂಗದ ನಡುವೆ ಇಂಥ ಸುದೀರ್ಘ ಗೀತೋಪದೇಶವನ್ನು ಆಲಿಸಿದ ಮೇಲೆ ಅರ್ಜುನನ ಮನಸ್ಸು ಹಗುರವಾಗಿ 'ನಿನ್ನ ವಚನದಂತೆಯೇ ನಡೆದು ಕೊಳ್ಳುತ್ತೇನೆ' ಎಂದು ಯುದ್ಧಕ್ಕೆ ತೊಡಗುತ್ತಾನೆ.

ಈ ಸಂದರ್ಭವನ್ನು ಕುರಿತು ದಾರ್ಶನಿಕರಲ್ಲಿ ಮತ ಭೇದವಿದೆ. 'ಗೀತೋಪದೇಶದಲ್ಲಿ ಹಿಂಸೆಯ ಸಮರ್ಥನೆ ಇದೆ' ಎಂದು ಕೆಲವರು, 'ಇಲ್ಲ' ಎಂದು ಕೆಲವರು, ಜಿಜ್ಞಾಸೆ ಮಾಡಿದ್ದಾರೆ. ಗೀತೋಪದೇಶವನ್ನು ಮಹಾಭಾರತದಿಂದ ಪ್ರತ್ಯೇಕಿಸಿ ನೋಡಿ ಹೇಳುವುದಾದರೆ ಅದು ಹಿಂಸೆಗೆ ಒತ್ತು ಕೊಟ್ಟಂತೆ ಭಾಸವಾಗುವುದು ನಿಜ. ಆದರೆ ಮಹಾಭಾರತದ ನಾಡಿಮಿಡಿತವನ್ನು ಕಿವಿಗೊಟ್ಟು ಆಲಿಸಿದರೆ ಅದು ಅಹಿಂಸಾ ಪರವಾಗಿಯೇ ಇದೆ ಎಂಬುದು ತಿಳಿದುಬರುತ್ತದೆ.

ಕೌರವಾದಿಗಳು ಮಾಡಿದ ಕೇಡಿನ ಫಲವನ್ನು ಕುರುಕ್ಷೇತ್ರ ಭೂಮಿಯಲ್ಲಿ ಊಟ ಮಾಡಿದರೆ, ಯುದ್ಧದ ತರುವಾಯ ಪಾಂಡವರು ಆ ಪಾಪಪ್ರಜ್ಞೆಯಿಂದ ತಾವು ಮಾಡಿದ ಹತ್ಯಾಕಾಂಡದ ಫಲವನ್ನು ಅನುಭವಿಸುವರು. ಗೀತೋಪದೇಶ ಮಾತ್ರದಿಂದ ಅರ್ಜುನ ತಳೆದ ದೃಷ್ಟಿ ತಾತ್ಕಾಲಿಕವಾಗಿ ನಿಸ್ಸಂದಿಗ್ಧವಾಗಿರಬಹುದು. ಆದರೆ ಆ ಸ್ಥಿತಿಯೇ ಅವನ ಯುದ್ಧದ ತರುವಾಯದ ಮನಃಸ್ಥಿತಿಯೂ ಆಗಿತ್ತೆಂದು ಹೇಳುವುದು ಅಷ್ಟು ಪ್ರಾಮಾಣಿಕ ವಿವೇಚನೆ ಯಲ್ಲ. ಮಹಾಭಾರತದ ಯುದ್ಧದ ನಡುವೆ ಹಾಗೂ ಮುಗಿದ ನಂತರವೂ ಪಾಂಡವರು ಅದರಿಂದ ಸುಖ ಸಂತೋಷ ಪಟ್ಟರೆಂದು ವ್ಯಾಸರು ಎಲ್ಲಿಯೂ ಹೇಳಿಲ್ಲ. ಯುದ್ಧವೆಂಬ ಸಾಮೂಹಿಕ ಹತ್ಯೆಯನ್ನು ಕೃಷ್ಣ ತನ್ನ ವಿಶ್ವ ರೂಪದರ್ಶನದಲ್ಲಿ ಜಾದೂಗಾರನಂತೆ ತೋರಿಸಿ ಕೊಟ್ಟಾಗಲೂ ಸಹ ಅರ್ಜುನ ಎಳೆಯ ಬಾಲಕನಂತೆ ಹೌಹಾರಿ ನಿಲ್ಲುತ್ತಾನೆಯೇ ಹೊರತು ಸುಖಿಸುವುದಿಲ್ಲ. ಯುದ್ಧದಲ್ಲಿ ನಡೆದ ಸಾಮೂಹಿಕ ಹತ್ಯೆಯನ್ನು ಅರ್ಜುನ ಅಥವಾ ಪಾಂಡವರಲ್ಲಿ ಯಾರೊಬ್ಬರೂ ಸಮರ್ಥಿಸಿ ಕೊಳ್ಳುವುದಿಲ್ಲ. ಹಾಗಿದ್ದರೆ, ದಾಯಾದಿಗಳು ಸರ್ವನಾಶ ವಾಗಿ ತಮಗೆ ರಾಜ್ಯಾಧಿಕಾರ ದಕ್ಕಿದ ಮೇಲೆ ಪಾಂಡವರು ಅದರ ಸಾರಸಂತೋಷವನ್ನು ತೃಪ್ತಿಯಿಂದ ಅನುಭವಿಸ ಬೇಕಿತ್ತು. ಆದರೆ ಅವರಾರೂ ಗೆದ್ದ ಗೆಲುವಿನಿಂದ ಎದೆ ಉಬ್ಬಿಸಲಿಲ್ಲ; ಬದಲಾಗಿ ಶೋಕ ತಪ್ತರಾಗಿ ದುಃಖಿಸಿದರು. ಏಕೆಂದರೆ, ಕುರುಕ್ಷೇತ್ರ ಯುದ್ಧ ನಡೆದ ತರುವಾಯ ಧರ್ಮನಂದನ ಮೂವತ್ತಾರು ವರ್ಷಗಳ ಕಾಲ ರಾಜ್ಯಭಾರ ಮಾಡಿದನೆಂದು ವ್ಯಾಸರು ಹೇಳುತ್ತಾರೆ. ಆದರೆ ನೆಮ್ಮದಿಯಿಂದ ಆಳಿದನೆಂದು ಅವರು ಎಲ್ಲಿಯೂ ಹೇಳಿಲ್ಲ. ಎಂದರೆ ಪಾಂಡವರ ಈ ಮೌನಕ್ಕೆ ಕಾರಣ ಅವರ ಸಹಜ ಅಪರಾಧೀ ಮನೋಭಾವವೇ ಹೊರತು ಬೇರೆ ಅಲ್ಲ. ಕಡೆಗೆ ಧರ್ಮರಾಜ ಹೊರತಾಗಿ ಉಳಿದ ಪಾಂಡವರು ಮತ್ತು ಅವರ ಪತ್ನಿ ಹಿಮಾಲಯದ ತಪ್ಪಲಲ್ಲಿ ಬಿದ್ದು ಅನಾಥ ಹೆಣಗಳಾಗಿ ಹೋಗುತ್ತಾರೆ. ಅಸಹಾಯ ಶೂರರಿಗೆ ಇದೆಂಥ ದುರ್ಗತಿ! ಅದಿರಲಿ, ಇನ್ನು ಪಾಂಡವರ ಪ್ರಾಣ ಪ್ರಿಯನಾದ ಶ್ರೀಕೃಷ್ಣನೂ ಸಹ ಅನಾಮಿಕ ವ್ಯಕ್ತಿಯೊಬ್ಬ ಅಂಗಾಲಿಗೆ ಬಿಟ್ಟ ಬಾಣನಿಮಿತ್ತ ಅರಣ್ಯವೊಂದರಲ್ಲಿ ತನ್ನ ಕತೆ ಮುಗಿಸಿದ. ಹೀಗೆ ಮಹಾಭಾರತದಲ್ಲಿ ಕುರು-ಪಾಂಡವರು, ಯಾದವರಾದಿಯಾಗಿ ಅವರು ಗೈದ ಅಪರಾಧಕ್ಕೆ ತಕ್ಕ ಶಿಕ್ಷೆಯನ್ನು ಅನುಭವಿಸಿಯೇ ತೀರುತ್ತಾರೆ. ಮಾಡಿದ್ದುಣ್ಣೋ ಮಹಾರಾಯ ಎಂಬುದೇ ಇಲ್ಲಿಯ ಕಾವ್ಯ ಧ್ವನಿ.

ಜಾಗತಿಕ ಸಾಹಿತ್ಯದಲ್ಲಿ ಭಗವದ್ಗೀತೆಯನ್ನು ನೆನಪಿಸುವ ಮತ್ತೊಂದು ಕೃತಿ ರಷ್ಯಾದ ಕಾದಂಬರಿಕಾರ ದಾಸ್ತೋಯೆವ್‌ಸ್ಕಿ ವಿರಚಿತ "ಅಪರಾಧ ಮತ್ತು ಶಿಕ್ಷೆ." ಇದರ

**ಪ್ರೊ|| ಶಿವರಾಮಯ್ಯ**

ನಾಯಕ ರಾಸ್ಕೋಲ್ನಿಕೋವನು ಕೇಡನ್ನು ನಿವಾರಿಸುವ ಸಲುವಾಗಿಯೇ ಗಿರವಿ ಅಂಗಡಿಯ ಲೇವಾದೇವಿ ಮುದುಕಿ ಅಲ್ಯೋನ ಇವನೋವ್ನಳನ್ನು ಕೊಲೆಗೈಯುತ್ತಾನೆ. ಅಲ್ಲದೇ ಅದೇ ಸಮಯಕ್ಕೆ ಸರಿಯಾಗಿ ಅಲ್ಲಿಗೆ ಕಾಣದೆ ಬಂದ ಅವಳ ತಂಗಿ ಲಿಜವೀಟಳನ್ನೂ ತನ್ನ ಕೊಡಲಿಯಿಂದ ಸೀಳುತ್ತಾನೆ. ಆದರೆ ಆ ಹೆಂಗಸು ಸ್ವತಃ ಅಕ್ಕನ ಚಾಕರಿ ಮಾಡುತ್ತ ಶೋಷಣೆಗೆ ಗುರಿಯಾಗಿದ್ದವಳು. ಸಾಕ್ಷಿ ಇರಬಾರದೆಂದು ಈ ಕೊಲೆ ನಡೆದುಹೋಗುತ್ತದೆ. ಸಾಮಾಜಿಕ, ಆರ್ಥಿಕ ಮತ್ತು ಐತಿಹಾಸಿಕವಾಗಿ ಯುಕ್ತವೆಂದು ತಾನು ಪರಿಗಣಿಸಿದ್ದ ಚಕ್ರ ಬಡ್ಡಿಯ ಮುದುಕಿಯ ಕೊಲೆಯಾದ ಮೇಲೆ ರಾಸ್ಕೋಲ್ನಿಕೋವ ಅಸ್ವಸ್ಥನಾಗುತ್ತಾನೆ. ಬಲವಾದ ಸೈದ್ಧಾಂತಿಕ ತಳಹದಿಯ ಮೇಲೆ (ಎಂದರೆ, ಶೋಷಕ ವರ್ಗವನ್ನು ಇಲ್ಲಿಂದ ತೊಡೆದುಹಾಕುವ) ಕ್ರಿಯೆ ಜರುಗಿದರೂ ಕ್ರಿಯೆಯ ನಂತರದ ಆತನ ಮನೋಭಾವ ಆ ಸಿದ್ಧಾಂತದ ಅವಾಸ್ತವಿಕತೆಯನ್ನು ಗುರ್ತಿಸಿ ಆತ ಮಾಡಿದ್ದು ಧಿಕ್ಕಾರ ಯೋಗ್ಯ ಎಂಬುದನ್ನು ದಾಸ್ತೋಯೆವ್‌ಸ್ಕಿ ಕೃತಿ ಮನ ಮುಟ್ಟಿಸುತ್ತದೆ. ಇತ್ತ ಕಾದಂಬರಿಯ ಇನ್ನೊಂದು ಪಾತ್ರ ಸೋನಿಯಾ ಎಂಬ ಹುಡುಗಿ ತನ್ನ ಬಡ ಕುಟುಂಬವನ್ನು ನಿರ್ವಹಿಸುವ ಸಲುವಾಗಿ ಸೂಳೆಗಾರಿಕೆಗೆ ಇಳಿದು ತನ್ನ ಸ್ವಂತ ಬಾಳನ್ನೇ ಬರಡು ಮಾಡಿಕೊಂಡಿದ್ದಾಳೆ. ಆದರೆ ಅವಳು ರಾಸ್ಕೋಲ್ನಿಕೋವನಿಗೆ ಹೇಳುವ ಮಾತೆಂದರೆ, "ಭೂಮಿ ತಾಯಿಗೆ ಮೈಲಿಗೆ ಸೋಂಕಿಸಿರುವ ನೀನು ಮಣ್ಣನ್ನು ಮುತ್ತಿಟ್ಟು ಕ್ಷಮೆ ಕೇಳಿಕೋ. ಠಾಣೆಯಲ್ಲಿ ಅಪರಾಧ ಒಪ್ಪಿಕೊಂಡು ಶಿಕ್ಷೆಯನ್ನು ಅನುಭವಿಸು. ಇದೊಂದೇ ದಾರಿ




ನಿನಗಿರುವುದು." ಕಡೆಗೆ ಆತ ಅವಳ ಮಾತಿನಂತೆಯೇ ನಡೆದುಕೊಂಡು ಸೈಬೀರಿಯಾದಲ್ಲಿ ಶಿಕ್ಷೆಗೆ ಗುರಿಯಾಗುತ್ತಾನೆ.

ಹೆಣ್ಣು ಹೊನ್ನು ಮಣ್ಣಿಗಾಗಿ ಕೋಟ್ಯಂತರ ಜನರ ನರ ಮೇಧ ಮಾಡಿ ಭೂಮಿತಾಯಿಯನ್ನು ರಕ್ತಸಿಕ್ತಗೊಳಿಸುತ್ತಿರುವ ಜಗತ್ತಿನ ಎಲ್ಲ ಲೂಟಿಕೋರರಿಗೂ, ಭಯೋತ್ಪಾದಕರಿಗೂ, ಕೊಲೆಪಾತಕರಿಗೂ ಇದು ಕಿವಿ ಮಾತಾಗಿದೆ. ಅಹಿಂಸಾ ಮಾರ್ಗ ದಿಂದ ಮಾತ್ರ ಈ ಭೂಮಿಯ ಮೇಲೆ ನೆಮ್ಮದಿ ನೆಲೆಸುತ್ತದೆ. ಗಾಂಧೀಜಿ ಕಂಡ ಜೀವನ ಸತ್ಯವೂ ಇದೇ. ಇದನ್ನೇ ಭಗವದ್ಗೀತೆ (ಮಹಾಭಾರತ) ಹಾಗೂ 'ಅಪರಾಧ ಮತ್ತು ಶಿಕ್ಷೆ' ಮುಂತಾದ ಕೃತಿಗಳು ಕಥಾ ಭಿತ್ತಿಯಲ್ಲಿ ಕೆತ್ತಿ ನಿಲ್ಲಿಸಿವೆ.

ಈ ಎರಡೂ ಕೃತಿಗಳಲ್ಲಿ ಕಂಡುಬರುವ ಒಂದು ಗಮನಾರ್ಹವಾದ ವ್ಯತ್ಯಾಸವೆಂದರೆ ಭಗವದ್ಗೀತೆಯಲ್ಲಿ ಅರ್ಜುನ ಕೊಲೆಯೆಂಬ ಹತ್ಯಾಕಾಂಡದಿಂದುಂಟಾಗುವ ಪಾಪ ಭೀತಿಯಿಂದ ಕ್ರಿಯೆಗೆ ಮೊದಲೇ ಅದರ ತೀವ್ರತೆಗೆ ಸಿಲುಕಿ ವಿಮುಖನಾದ. 'ಅಪರಾಧ ಮತ್ತು ಶಿಕ್ಷೆ'ಯಲ್ಲಿ ನಾಯಕ ರಾಸ್ಕೋಲ್ನಿಕೋವ ಮೊದಲು ಕೊಲೆಗೈದು ತದ ನಂತರ ಅದೇ ಪಾಪಪ್ರಜ್ಞೆಯಿಂದ ಅಸ್ವಸ್ಥನಾಗುತ್ತಾನೆ. ಈ ಒಂದು ವಿಚಾರದಲ್ಲಿ ವಿದ್ವಾಂಸರ ನಡುವೆ ತಾತ್ವಿಕ ಭಿನ್ನಾಭಿಪ್ರಾಯವಿದೆ. ಎಂದರೆ, ಅರ್ಜುನನಲ್ಲಿ ಕ್ರಿಯೆಗೆ ಮೊದಲೇ ಕ್ರಿಯೆಯ ತೀವ್ರತೆಯ ಪ್ರಜ್ಞೆ ಮೂಡುವುದು ಸಾಧ್ಯವಿಲ್ಲ. ಹೀಗೆ ಹೇಳುವ ಆರ್. ಡಿ. ಹೆಗಡೆ ಆಲ್ಮನೆ ಯವರು ಭಗವದ್ಗೀತೆಯನ್ನು ಮಹಾಭಾರತದಿಂದ ಪ್ರತ್ಯೇಕಿಸಿ ನೋಡಿದರೆ ಇದು ಅವಾಸ್ತವವಾಗಿ ತೋರಿ ಬರುತ್ತದೆ; ಆದರೆ, ಅವರೇ ಮುಂದುವರಿದು ಹೇಳುವಂತೆ, ಯುದ್ಧಾನಂತರ ಪಾಂಡವರು ಸ್ವಜನ ಹತ್ಯಾಕಾಂಡದ ಪಾಪ ಪ್ರಜ್ಞೆಯಿಂದ ತೊಳಲಿರುವುದನ್ನು ಗಮನಿಸಿದರೆ, ಗೀತೆಯ ತಾತ್ವಿಕತೆ ಸಮಂಜಸವೇ ಆಗಿದೆ. ಇನ್ನು 'ಅಪರಾಧ ಮತ್ತು ಶಿಕ್ಷೆ' ಕೃತಿಯ ನಾಯಕ ಕ್ರಿಯೆಯ ನಂತರ ತೀವ್ರವಾದ ಗಿಲ್ಟ್ ಕಾಂಪ್ಲೆಕ್ಸಿಗೆ ಒಳಗಾಗುವುದು ತೀರ ಸಹಜವಾಗಿಯೇ ಇದೆ. ಈ ಎಲ್ಲ ಸೈದ್ಧಾಂತಿಕ ಚರ್ಚೆ ಹಾಗಿರಲಿ. ಇನ್ನು ಇತಿಹಾಸದತ್ತ ಕಣ್ಣು ಹೊರಳಿಸಿದರೆ ಒಂದು ನಿದರ್ಶನ [illegible] ನೆಪೋಲಿಯನ್‌ನಂತಹ [illegible] ಲೂಟಿಕೋರನಾಗಿ ಅನೇಕ ದೇಶಗಳನ್ನು ಸುತ್ತಿ ಗೆದ್ದು

ಮಾಸ್ಕೋದವರೆಗೂ (೧೮೧೨) ದಂಡೆತ್ತಿ ಬರುತ್ತಾನೆ. ಆದರೆ ಕಡೆಗೆ ಅವನು ಹಿಂದಿರುಗುವಾಗ ಕೇವಲ ಹತ್ತಾರು ಸಾವಿರ ಸೈನಿಕರು ಮಾತ್ರ ಅವನ ಹಿಂದೆ ಉಳಿದಿರುತ್ತಾರೆ. ಇಷ್ಟೆಲ್ಲ ಮೆರೆದಾಡಿದ ಅವನು ತನ್ನ ಗತಕಾಲವನ್ನು ನೆನೆಯುತ್ತ ಅಟ್ಲಾಂಟಿಕ್ ಸಾಗರದ ನಡುವಿನ ಸೆಂಟ್ ಹೆಲೀನಾ ಎಂಬ ದ್ವೀಪ ಒಂದರಲ್ಲಿ ಏಕಾಂಗಿಯಾಗಿ ಪರಿತಪಿಸುತ್ತ ಸಾವಿಗೀಡಾಗಬೇಕಾಗುತ್ತದೆ. ಉಪ್ಪು ತಿಂದವನು ನೀರು ಕುಡಿಯಲೇಬೇಕು. ಆತ ಮಾಡಿದ ನರಮೇಧಕ್ಕೆ ಈ ಶಿಕ್ಷೆ ಕಡಿಮೆಯೇ. ಇತಿಹಾಸದ ಪುಟಗಳಲ್ಲಿ ಇಂಥ ನಿದರ್ಶನಗಳು ಇನ್ನೂ ಬೇಕಾದಹಾಗೆ ಇವೆ.

ಈ ಒಂದು ಸೈದ್ಧಾಂತಿಕ ಹಿನ್ನೆಲೆಯಿಂದ ಇವತ್ತಿನ ಜಾಗತಿಕ ವಿದ್ಯಮಾನಗಳನ್ನು ಅವಲೋಕಿಸಿದರೆ ನವ ಸಾಮ್ರಾಜ್ಯಶಾಹಿ ರಾಷ್ಟ್ರಗಳ ಅಪರಾಧ ಎಷ್ಟೆಂಬುದು ಗಣನೆಗೇ ನಿಲುಕುವುದಿಲ್ಲ. ಹಿಂದೆ ವ್ಯಾಪಾರ ನಿಮಿತ್ತವಾಗಿ ಬಂದವರು ವಸಾಹತುಗಳನ್ನು ಸ್ಥಾಪಿಸಿಕೊಳ್ಳುತ್ತ, ಜಗತ್ತಿನ ಸಂಪನ್ಮೂಲಗಳನ್ನು ಕೊಳ್ಳೆಹೊಡೆಯುತ್ತ, ಪ್ರತಿಭಟಿಸಿದ ಜನಾಂಗಗಳನ್ನು ನಿರ್ನಾಮ ಮಾಡುತ್ತ, ನಾಗರಿಕತೆಯ ನಟನೆಯಲ್ಲಿ ಮೆರೆದಾಡಿದರು. ಕೊಲಂಬಸ್ ಮತ್ತು ವಾಸ್ಕೋಡಿಗಾಮರೆಂಬ ಪ್ರವಾಸಿಗರು ನಡೆಸಿದ ಅನ್ವೇಷಣೆಯೆಂದರೆ ಆಫ್ರಿಕಾ, ಅಮೆರಿಕಾ ಮತ್ತು ಏಷ್ಯಾ ರಾಷ್ಟ್ರಗಳ ನೈಸರ್ಗಿಕ ಸಂಪನ್ಮೂಲಗಳೇ ಆಗಿದ್ದವು. ಸ್ಪ್ಯಾನಿಷರು, ಡಚ್ಚರು, ಮುಂತಾದ ಯೂರೋಪಿನ ಜನರು ಮೇಲಿಂದ ಮೇಲೆ ಧಾಳಿ ಮಾಡಿ ಅಮೆರಿಕದ ರೆಡ್ ಇಂಡಿಯನ್ನರನ್ನು ಬೇಟೆಯಾಡಿದರು; ಆಫ್ರಿಕಾದ ಮೂಲ ನಿವಾಸಿಗಳನ್ನು ಮೃಗಗಳೆಂಬಂತೆ ಹಿಡಿದು ಪಳಗಿಸಿ ಗುಲಾಮರನ್ನಾಗಿಸಿಕೊಂಡರು; ಒಟ್ಟಾರೆ ಜಗತ್ತಿನ ಬುಡಕಟ್ಟು ಹಾಗೂ ಆದಿವಾಸಿ ಜನರ ಬದುಕುವ ಹಕ್ಕನ್ನೇ ಕಸಿದುಕೊಳ್ಳುತ್ತ ತಾವು ಮಾತ್ರ ವಿಲಾಸಿ ಜೀವನ ಸಾಗಿಸಿದರು; ಹಾಗೂ ಕಗ್ಗತ್ತಲೆ ಖಂಡಗಳಿಗೆ ಬೆಳಕು ನೀಡಿದವರೆಂದು ಬೀಗಿದರು. ಇದೆಲ್ಲ ಪೂರ್ವೇತಿಹಾಸವಾದರೆ, ಜಾಗತಿಕ ಯುದ್ಧಗಳಲ್ಲಿ ಸಂಪತ್ತಿನ ದುರಾಸೆಗೆ ಬಿದ್ದ ಪಾಶ್ಚಾತ್ಯರು ತಮ್ಮ ತಮ್ಮಲ್ಲೇ ಕಚ್ಚಾಡುತ್ತ ಇದಕ್ಕಾಗಿ ವಸಾಹತು ರಾಷ್ಟ್ರಗಳಿಂದ ಸೈನಿಕರನ್ನು ನೇಮಿಸಿಕೊಂಡು, ಕದನಗಳಲ್ಲಿ ಅವರು ಪರಸ್ಪರ ಹೊಡೆದಾಡಿ ಸಾಯುವಂತೆ ಏರ್ಪಡಿಸಿದರು. ಕಂಡವರ ಮಕ್ಕಳನ್ನು ಬಾವಿಗೆ ತಳ್ಳಿ ಆಳ ನೋಡುವಂತೆ ದುಡಿಸಿಕೊಂಡರು. ಈ ಚಾಳಿ ಇವತ್ತಿಗೂ ತೊಲಗಿಹೋಗಿಲ್ಲ. ಎರಡನೇ ಮಹಾಯುದ್ಧದ ತರುವಾಯ ವಿಶ್ವ ರಾಷ್ಟ್ರಗಳು ಬಹುಮಟ್ಟಿಗೆ ರಾಜಕೀಯ ಸ್ವಾತಂತ್ರ್ಯವನ್ನೇನೋ ಪಡೆದುಕೊಂಡವು. ಆದರೆ ಪಾಶ್ಚಾತ್ಯರ ಆರ್ಥಿಕ ಗುಲಾಮಗಿರಿಗೆ ಸಿಕ್ಕಿ ಇನ್ನೂ ಕೊರಗುತ್ತಿವೆ. ಎರಡನೇ ಮಹಾಯುದ್ಧ ಮುಗಿಯುವಷ್ಟರಲ್ಲಿ ಆರ್ಥಿಕವಾಗಿ ದಿವಾಳಿಯೆದ್ದಿದ್ದ ಅಮೆರಿಕ ಮತ್ತು ಮಿತ್ರರಾಷ್ಟ್ರಗಳು ಹಾಕಿಕೊಂಡ ಒಂದಂಶದ ಕಾರ್ಯಕ್ರಮ ಎಂದರೆ ಯುದ್ಧಾಸ್ತ್ರಗಳ ಉತ್ಪಾದನೆ ಹಾಗೂ ವಿತರಣೆ. ಕೋತಿ ಕಜ್ಜಾಯ ಹಂಚಿದ ನ್ಯಾಯದಂತೆ ದೇಶ ದೇಶಗಳ ನಡುವೆ ತಾವೇ ಕಿತಾಪತಿಯನ್ನು ಉಂಟುಮಾಡುತ್ತ, ತನ್ನ ಕೈಗೊಂಬೆ ಬಣಗಳಿಗೆ ಯುದ್ಧಾಸ್ತ್ರಗಳನ್ನು ಒದಗಿಸುತ್ತ ಹಣ ಮಾಡಿಕೊಂಡವು. ತೊಟ್ಟಿಲು ತೂಗುತ್ತ ಮಗುವನ್ನೂ ಚಿವುಟುವ ದ್ವಂದ್ವ ನೀತಿಯಲ್ಲಿ ಅಮೆರಿಕ ಎತ್ತಿದ ಕೈಯೇ. ತನ್ನ ಮನೆಯಂಗಳದಲ್ಲಿ ವಿಶ್ವ ಸಂಸ್ಥೆಯ ಕಛೇರಿಯನ್ನು ತೆರೆಸಿ, ವಿಶ್ವಬ್ಯಾಂಕ್, ವಿಶ್ವನಿಧಿಗಳನ್ನು ಸ್ಥಾಪಿಸಿ ದಾನಶೂರ ಕರ್ಣನಂತೆ ಇವತ್ತಿಗೂ ಮೆರೆದಾಡುತ್ತಿದೆ. ತಿಮ್ಮಪ್ಪನ ಹುಂಡಿಗೆ ಭಕ್ತಾದಿಗಳ ಧನಕನಕವಜ್ರಗಳು ಬಿದ್ದರೆ, ಅವರ ಕೈಗೆ ಬೀಳುವುದು ಕೇವಲ ಕೆಲವು ಲಾಡುಗಳು ಮಾತ್ರ. ನೀನೇ ಗತಿ ತಿಮ್ಮಪ್ಪ ಎಂದರೆ ಅದೆಲ್ಲಿಂದಲೋ ತೀರ್ಥ ಎತ್ತಿ ಕೊಟ್ಟನಂತೆ; ಹಾಗಿದೆ ಅಮೆರಿಕದ ವರ್ತನೆ. ತನಗೆ ಪ್ರಬಲ ಪ್ರತಿರೋಧವನ್ನು ಒಡ್ಡುತ್ತಿದ್ದ ಸೋವಿಯತ್ ರಷ್ಯವನ್ನು ಚಾಣಾಕ್ಷತೆಯಿಂದ ಪ್ರಜಾಪ್ರಭುತ್ವದ ನಾಟಕ ಮಾಡಿ ಭಂಗಗೊಳಿಸಿದ ಮೇಲೆ ಸೂಪರ್ ಶಕ್ತಿಯಿಂದ ಅಮೆರಿಕ ಬೀಗುತ್ತಿದೆ. ಜಾಗತೀಕರಣ ಎಂದರೆ ಅಮೆರಿಕೀಕರಣ; ಜಗತ್ತಿನ ನೈಸರ್ಗಿಕ ಸಂಪನ್ಮೂಲಗಳ ಲೂಟೀಕರಣ. ವಿಶ್ವ ವ್ಯಾಪಾರ ಸಂಸ್ಥೆಯ ಒಪ್ಪಂದದ ಅನ್ವಯ ವಿಶ್ವವ್ಯಾಪಾರ ವಹಿವಾಟನ್ನೆಲ್ಲ ತನ್ನ ಹತೋಟಿಗೆ ತಂದುಕೊಳ್ಳಲು ಯತ್ನಿಸುತ್ತಿದೆ ಅದು. ಪ್ರಜಾಪ್ರಭುತ್ವದ ಹೆಸರಿನಲ್ಲಿ, ಭಯೋತ್ಪಾದನೆಯ ಆರೋಪದಲ್ಲಿ, ಮೂಲಭೂತವಾದದ ನಿಮಿತ್ತದಲ್ಲಿ ಜಗತ್ತಿನ ಮಿಲಿಯಾಂತರ ಜನರ ಮಾರಣ ಹೋಮಕ್ಕೆ ಅಮೆರಿಕ ಕುಮ್ಮಕ್ಕು ಕೊಟ್ಟಿದೆ. ಇಷ್ಟಾಗಿಯೂ ತನ್ನ ಪಾಪ ಕೃತ್ಯಕ್ಕೆ ಅದು ಎಂದೂ ಪಶ್ಚಾತ್ತಾಪ ಪಟ್ಟಿಲ್ಲ; ವಿಷಾದ ಹೇಳಿಲ್ಲ. ಆದರೆ ಅಮೆರಿಕದವರೇ ಆದ ಪ್ರೊ॥ ನೋಮ್ ಚೋಮ್‌ಸ್ಕಿ ಎಂಬುವವರು ಆ ದೇಶ ತನ್ನಲ್ಲಿ ಹುದುಗಿಸಿ ಕೊಂಡಿರುವ ಈ 'ಗಿಲ್ಟ್ ಕಾಂಪ್ಲೆಕ್ಸ್'ನ್ನು ನಿರಂತರವಾಗಿ ಹೊರದೇಶಗಳಿಗೆ ಅನಾವರಣ ಮಾಡುತ್ತ ಸಾಗಿಬಂದಿದ್ದಾರೆ. ಅವರ ಪ್ರಕಾರ ಶ್ರೀಮಂತ ದೇಶಗಳ ಶ್ರೀಮಂತರು ಎಲ್ಲಾ ದೇಶಗಳ ಬಡಜನರ ಹೆಣಗಳ ಮೇಲೆ ಕಟ್ಟುವ ಜೀವನಶೈಲಿಯೇ ಅಮೆರಿಕನ್ ಜೀವನ ಶೈಲಿ. ಬೆಂಕಿಗೆ ಹಾರುವ ಕೀಟಗಳಂತೆ ಉಳಿದ ಮೂರನೇ ಜಗತ್ತಿನ ಜನರ ಗತಿಯಾಗಿದೆ. ಇದಕ್ಕೆ ಅವರು ಕೊಡುವ ಸಾಕ್ಷ್ಯಾಧಾರಗಳು ಎದೆ ನಡುಗಿಸುವಂತಿವೆ. ರಷ್ಯಾ, ಕ್ಯೂಬಾ, ವಿಯೆಟ್ನಾಂ ಮೊದಲುಗೊಂಡು ಪಾಕಿಸ್ತಾನ, ಇರಾಕ್, ಆಫ್‌ಘಾನಿಸ್ತಾನ ಮುಂತಾದ ಜಗತ್ತಿನ ಹಲವಾರು ದೇಶಗಳಲ್ಲಿ ಅಮೆರಿಕ ಹೇಗೆ ತನ್ನ ನೀತಿಗಳನ್ನು ನಾಜೂಕಿನಿಂದ ಹೇರುತ್ತದೆ; ಅಲ್ಲಿ ಆಂತರಿಕ ಬಿಕ್ಕಟ್ಟು ಸೃಷ್ಟಿಸಿ ಅಲ್ಲಿನ ರಾಜಕೀಯ ಪಕ್ಷಗಳಿಗೆ ಶಸ್ತ್ರಾಸ್ತ್ರ ಹಾಗೂ ಧನ ಸಹಾಯ ನೀಡುತ್ತಲೇ ತನಗೆ ನಿಷ್ಠರಾದ ಮಿಲಿಟರಿ ಸರ್ವಾಧಿಕಾರಿಗಳಿಗೆ ಹೇಗೆ ತರಬೇತಿ ನೀಡುತ್ತದೆ; ಹೇಗೆ ಸಾಮ್ರಾಜ್ಯಶಾಹಿ ವಿರೋಧಿ ಹಾಗೂ ಪರಿಸರವಾದಿ ಚಳುವಳಿಗಳನ್ನು ಹತ್ತಿಕ್ಕುತ್ತದೆ ಎನ್ನುವುದನ್ನು ನೋಮ್ ಚೋಮ್‌ಸ್ಕಿ ಉದಾಹರಣೆಗಳ ಸಮೇತ ಸಮಚಿತ್ತರಾಗಿ ನೀಡುತ್ತ ಮುಂದೆ ಹೋಗುತ್ತಾರೆ.

ಅಮೆರಿಕದ ಇಂದಿನ ಏಕೈಕ ಗುರಿ ಜಗತ್ತಿನ ತೈಲ ವಹಿವಾಟಿನ ಸಂಪೂರ್ಣ ಸ್ವಾಮ್ಯತೆಯನ್ನು ಪಡೆದು ಕೊಳ್ಳುವುದು. ಇದಕ್ಕಾಗಿ ರಾಷ್ಟ್ರಗಳಳಿಯಲಿ, ರಾಷ್ಟ್ರಗಳು ಉದಿಸಲಿ, ಅದಕ್ಕೆ ಲೆಕ್ಕಕ್ಕಿಲ್ಲ. ಇವತ್ತಿನ ಆಫ್‌ಘಾನಿಸ್ತಾನದ ಬಿಕ್ಕಟ್ಟಿಗೂ ಇದೇ ಉದ್ದೇಶವಿದೆ. ಅದಕ್ಕೆ ಸೆಪ್ಟೆಂಬರ್ ಹನ್ನೊಂದರ ವಿಮಾನ ಡಿಕ್ಕಿ ಘಟನೆ ಒಂದು ನೆಪ. ಹಾಗೆಂದು ಒಸಾಮ ಬಿನ್ ಲಾಡೆನ್ ಮುಂತಾದ ಉಗ್ರರಿಗೆ ರಿಯಾಯಿತಿ ಕೊಡಬೇಕೆಂದಲ್ಲ. ರಕ್ತಬೀಜಾಸುರನ ಈ ವಂಶ ಭೂಮಂಡಲದಿಂದ ನಿರ್ವಂಶವಾಗಬೇಕು, ದಿಟ. ಆದರೆ ಈ ವಂಶದ ಸಸಿ ಅಭಿವೃದ್ಧಿಹೊಂದಿಸಲು ನೀರು ಗೊಬ್ಬರ ಹಾಕಿ ಬೆಳೆಸಿದ ಅಮೆರಿಕವನ್ನು ದಂಡಿಸುವವರು ಯಾರೂ ಇಲ್ಲವೆ ? ಅಮೆರಿಕದ ಸೋಗಿನ ಪ್ರಜಾಪ್ರಭುತ್ವದ ನೀತಿಯಿಂದ ಜಗತ್ತಿನಲ್ಲಿ ಭಯೋತ್ಪಾದನೆ ಎಂಬುದು ಬೆಳೆದು ಈಗ ಅಮೆರಿಕದ ನಿಯಂತ್ರಣಕ್ಕೂ ಒಳಗಾಗದೆ ಭಸ್ಮಾಸುರನಂತೆ ಬೆಳೆದು ನಿಂತಿದೆ. ಆ ಸ್ವಯಂಕೃತಾಪರಾಧದ ನೈತಿಕ ಹೊಣೆಗಾರಿಕೆಯನ್ನು ಅಮೆರಿಕ ಒಪ್ಪಿ ತಪ್ಪನ್ನು ತಿದ್ದಿಕೊಳ್ಳಬೇಕಾಗಿದೆ. ಆದರೆ ಕಪಾಳಮೋಕ್ಷವಾದರೂ ತನ್ನ ಠೇಂಕಾರವನ್ನು ಮಾತ್ರ ಅದು ಕಡಿಮೆ ಮಾಡಿಕೊಂಡಿಲ್ಲ. ಪ್ರಜಾಪ್ರಭುತ್ವದ ಹೆಸರಿನಲ್ಲಿ ಭಯೋತ್ಪಾದನೆ ಮಾಡುತ್ತ ಜಗತ್ತಿನ ಅನೇಕ ರಾಷ್ಟ್ರಗಳ ಮೇಲೆ ಬಾಂಬ್‌ಗಳನ್ನು ಸುರಿಸುತ್ತ ಅಮಾಯಕ ಜನರ ಕೊಲೆಗೆ ಕಾರಣವಾಗಿದೆ, ಜಗತ್ತಿನ ಭಯೋತ್ಪಾದನೆಯ ಜನ್ಮಭೂಮಿಯಾಗಿದೆ. ಈ ಸಂದರ್ಭದಲ್ಲಿ ನಿರಾಶ್ರಿತರಾಗಿರುವವರ ಸಂಖ್ಯೆಗೆ ಮಿತಿಯೇ ಇಲ್ಲ. ಹಿಂದೆ ವಿಯೆಟ್ನಾಂ, ಕೊರಿಯಾ, ಇರಾಕ್ ಮುಂತಾದ ದೇಶಗಳು, ಈಗ ಪ್ಯಾಲೆಸ್ಟೈನ್, ಆಫ್‌ಘಾನಿಸ್ತಾನ ಮುಂತಾದ ಈ ಕದನಕ್ಷೇತ್ರ ದೇಶಗಳೇ ಸಾಕ್ಷಿ ನುಡಿಯುತ್ತಿವೆ. ಹಿಂದೆ ಬೆಂದು ಬೂದಿಯಾಗಿಹೋದ ಹಿರೋಶಿಮಾ ಮತ್ತು ನಾಗಸಾಕಿ ನಗರಗಳು ಅಮೆರಿಕದ ಪಾಷಂಡಿ ಅಣುಬಾಂಬ್ ದಾಳಿಯ ಚಿರಂತನ ಸ್ಮಾರಕಗಳಾಗಿವೆ. ಪುರಾಣಕಾಲದ ಈಡಿಪಸ್ಸನ ಗೂಢ ಪಾಪಲೇಪಿತ ಪ್ರಭುತ್ವದ ಹಾಗೆ, ಇಂದಿನ ''ಅಮೆರಿಕದ ಪ್ರಭುತ್ವ ಮಾಡುತ್ತಿರುವ ಪಾಪಕೃತ್ಯಗಳ ಫಲವನ್ನು ಅದರ ಜನತೆ ಅನುಭವಿಸುವ ದಿನಗಳು ದೂರವಿಲ್ಲ'' ಎಂದು ಹೇಳಿದ ಚೋಮ್‌ಸ್ಕಿಯವರ ಭವಿಷ್ಯವಾಣಿ ೧೧-೯-೨೦೦೧ರಂದು ಸಾಬೀತಾಯಿತು. ಆದರೂ ಆ ದೇಶ ವಿಷಾದಿಸುತ್ತಿಲ್ಲ. ಆದರೆ ಭಯೋತ್ಪಾದಕರನ್ನು ಹಿಡಿಯವ ಕಾರ್ಯ ಭರದಲ್ಲಿ ಸಾವಿರಾರು ಜನರ ಹತ್ಯಾಕಾಂಡ ನಡೆಸಿದೆ. ಮಾಧ್ಯಮಗಳೆಲ್ಲ ಇಂಥ ಬಲಿಷ್ಠ ರಾಷ್ಟ್ರಗಳ ಹತೋಟಿಯಲ್ಲಿದ್ದು ಪ್ರಜಾಪ್ರಭುತ್ವದ ತುತ್ತೂರಿಯನ್ನು ಊದುತ್ತಿವೆ. ಸರ್ವಾಧಿಕಾರಿಯ ಆಳ್ವಿಕೆಯಲ್ಲಿರುವ ಪಾಕಿಸ್ತಾನ ಅಮೆರಿಕಕ್ಕೆ ಎಷ್ಟರಮಟ್ಟಿಗೆ ಆಪ್ತ ಮಿತ್ರರಾಷ್ಟ್ರವೋ ತಿಳಿಯದು ಅಥವಾ ಈ ಕಪಟಸ್ನೇಹ ಇನ್ನಾವ ರಾಷ್ಟ್ರಕ್ಕೆ ಮೃತ್ಯುವಾಗುವುದೋ ಕಾಲವೇ ಹೇಳಬೇಕು. ಒಟ್ಟಾರೆ ಅಮೆರಿಕದ ಸದ್ಯದ ಜಾಗತೀಕರಣ ನೀತಿಯಿಂದ ಹಬ್ಬುತ್ತಿರುವ ಸಂಸ್ಕೃತಿಯೆಂದರೆ ಮನೆಯ ಸೂರಿನ ಮೇಲೆ ಬಾಂಬ್‌ಗಳ ಸುರಿಮಳೆಗರೆದು, ಅಲ್ಲಿಂದ ಓಡುವ ನಿರಾಶ್ರಿತರ ಕಡೆಗೆ ಹೆಲಿಕಾಪ್ಟರ್‌ಗಳಿಂದ ಬಿಸ್ಕತ್ ಪ್ಯಾಕೆಟ್ಟುಗಳನ್ನು ತೂರಿ ಒಗೆಯುವುದೇ ಆಗಿದೆ. ಇದನ್ನು ಕಂಡು ಬೆಪ್ಪು ರಾಷ್ಟ್ರಗಳು 'ಎಷ್ಟೊಂದು ಮಾನವೀಯತೆ' ಎಂದು ಬಾಯಿಬಿಡುತ್ತಿವೆ. ಮಾರಿಯ ಮುಂದೆ ಕೋಣನ ತಲೆ ಕಡಿದು ಅದರ ಬಾಯಿಗೆ ತೀರ್ಥಜಲ ಬಿಡುವ ನಿರ್ದಯ ಸಂಸ್ಕೃತಿಯೇ ಇದು. ಆದ್ದರಿಂದಲೇ ಇಂಡಿಯಾದ ಯಜ್ಞಬಲಿ ಸಂಸ್ಕೃತಿಯವರೊಂದಿಗೆ ಅಮೆರಿಕದವರ ಬಿಟ್ಟೂ ಬಿಡದ ಗೆಳೆತನ. ಈಗ ವಿಶ್ವದ ಶೇ. ೫೦ ಜನ ಈ ದೊಡ್ಡಣ್ಣನ ಗೊಡ್ಡಾಟಗಳನ್ನು ಕಂಡು ಭ್ರಮ ನಿರಸನಗೊಂಡಿದ್ದಾರೆ. ಜಗತ್ತಿನ ನೊಂದ ಜೀವಿಗಳೆಲ್ಲ ಒಂದಾಗಿ ಈ ರಾಷ್ಟ್ರವನ್ನು ದಂಡಿಸುವ ದಿನಗಳು ದೂರವಿಲ್ಲ. ಆ ಸೂಚನೆಗಳು ಅಲ್ಲಲ್ಲಿ ಕಂಡುಬರುತ್ತಿವೆ. ಇದಕ್ಕಿಂತ ಮುಖ್ಯವಾಗಿ ಅಮೆರಿಕವೇ ತನ್ನ ಸ್ವಯಂಕೃತ ಅಪರಾಧವನ್ನು ಒಪ್ಪಿಕೊಂಡು ಪಶ್ಚಾತ್ತಾಪದಿಂದ ಬಹಿರಂಗವಾಗಿ ವಿಷಾದ ವ್ಯಕ್ತಪಡಿಸುವುದು ಆರೋಗ್ಯಕರ. ಅಂಥ ಒಂದು ಆದರ್ಶವನ್ನು ಭಗವದ್ಗೀತೆ, 'ಅಪರಾಧ ಮತ್ತು ಶಿಕ್ಷೆ' ಕೃತಿಗಳು ಸಾದರಪಡಿಸುತ್ತಿವೆ. ಇಂಥ ಜಾಗತೀಕರಣಕ್ಕೆ ಸ್ವಾಗತವಿರಲಿ.

**ಪ್ರೊ॥ ಶಿವರಾಮಯ್ಯ**
ನಂ.೧೭೨, ಐಸಾಕ್ ರೋಡ್, ಟೀಚರ್ಸ್ ಕಾಲೋನಿ
ನಾಗರಬಾವಿ, ಬೆಂಗಳೂರು - ೫೬೦ ೦೭೨


ಪಬ್ಲಿಕ್


ಮುಶಾರ್ರಫ್ ಉಗ್ರವಾದಿಗಳನ್ನು ನಿಯಂತ್ರಣದಲ್ಲಿ ಇಟ್ಟುಕೊಳ್ಳ- ಬೇಕು...


ನನ್ನ ಸ್ವಾತಂತ್ರ್ಯಕ್ಕಾಗಿ ಹೋರಾಡುವವರು ಯಾರೂ ಇಲ್ಲವೇ?!


ಆಸ್ಪತ್ರೆಯಲ್ಲಿ ಹೆಗಡೆಯನ್ನು ಭೇಟಿ ಮಾಡಿದ ಗೌಡ
-ಸುದ್ದಿ
ತುರ್ತು ಚಿಕಿತ್ಸಾ ವಿಭಾಗ
ದಳ


ದೂರವಾಣಿ ಇನ್ನುಮುಂದೆ ಅಗ್ಗ!

# ಭಯೋತ್ಪಾದನೆಯ ಭಯೋತ್ಪಾದನೆ ಕುರಿತು

ವಿ. ಚಂದ್ರಶೇಖರ ನಂಗಲಿ



'ಹಿಂಸೆಯ ಕ್ರಿಯೆ' ಮತ್ತು 'ಹಿಂಸಾತ್ಮಕ ವಾತಾವರಣ' – ಇವೆರಡರಲ್ಲಿ ಯಾವುದು ಹೆಚ್ಚು ಅಪಾಯಕಾರಿ ಎಂಬುದನ್ನು ವಿಮರ್ಶಿಸಿ ತಿಳಿಯಬೇಕು. ಇದಕ್ಕೆ ಉದಾಹರಣೆಯಾಗಿ ಪಾಶ್ಚಾತ್ಯ ದೇಶಗಳ ಜನಪ್ರಿಯ ಕ್ರೀಡೆ ಗೂಳಿಕಾಳಗ ಗಮನಿಸೋಣ. ಚೆನ್ನಾಗಿ ಕೊಬ್ಬಿದ ರೋಷೋನ್ಮತ್ತ ಗೂಳಿಯನ್ನು ಅಖಾಡದೊಳಕ್ಕೆ ಬಿಡುತ್ತಾರೆ. ಬಲಗೈಯಲ್ಲಿ ಹರಿತವಾದ ಭರ್ಜಿಯನ್ನು ಮತ್ತು ಎಡಗೈಯಲ್ಲಿ ತನ್ನ ಆಕೃತಿಗೆ ಅಡ್ಡವಾಗಿ ಕೆಂಪು ಬಟ್ಟೆಯನ್ನು ಹಿಡಿದು 'ವೀರಯೋಧ'ನೊಬ್ಬ ನಿಂತಿರುತ್ತಾನೆ. ಗೂಳಿಯ ಗಮನವೆಲ್ಲ ವ್ಯಕ್ತಿಯ ಕಡೆಗಿರುವುದಿಲ್ಲ ; ತನ್ನನ್ನು ಕೆರಳಿಸುತ್ತಿರುವ ಕೆಂಪು ಬಟ್ಟೆಯ ಕಡೆಗೆ ಅದು ರೋಷದಿಂದ ನುಗ್ಗುತ್ತದೆ. ಆ 'ವೀರಯೋಧ' ಕೆಂಪು ಬಟ್ಟೆಯನ್ನು ಪಕ್ಕಕ್ಕೆ ಸರಿಸಿದೊಡನೆ, ಗೂಳಿಯೂ ಪಕ್ಕಕ್ಕೆ ಧಾವಿಸುತ್ತದೆ. ಕೂಡಲೇ ಅವನು ತನ್ನ ಭರ್ಜಿಯನ್ನು ಗೂಳಿಯ ಹೆಗಲಿಗೆ ಬಲವಾಗಿ ಚುಚ್ಚುತ್ತಾನೆ. ಇಂಥ ಮರಸುಗಳು ಮತ್ತು ಭರ್ಜಿಯ ತಿವಿತಗಳು ಹೆಚ್ಚುತ್ತಾ ಹೋಗಿ ಕೊನೆಗೊಮ್ಮೆ ಗೂಳಿ ಕುಸಿದುಬೀಳುತ್ತದೆ. ಅದಕ್ಕಾಗಿಯೇ ನೇಮಿಸಲ್ಪಟ್ಟ ಸೇವಕರು ಅಖಾಡದೊಳಕ್ಕೆ ಬಂದು ಗೂಳಿಯನ್ನು ಹೊತ್ತೊಯ್ದು ಕಸಾಯಿ ಖಾನೆಗೊಪ್ಪಿಸುತ್ತಾರೆ. ನಂತರ ಅದನ್ನು ಕತ್ತರಿಸಿ ಮಾರಾಟ ಮಾಡಲಾಗುತ್ತದೆ. ಈ ಕ್ರೀಡೆಯನ್ನು ನೋಡಲು ಸಾವಿರಾರು ಜನ ಜಮಾಯಿಸಿರುತ್ತಾರೆ. ಈಗ ಹೇಳಿರಿ ! ಯಾವುದನ್ನು ನೀವು ಹಿಂಸೆಯೆಂದು ಕರೆಯುತ್ತೀರಿ ? ಗೂಳಿಯನ್ನು ಭರ್ಜಿಯಿಂದ ತಿವಿಯುವ ಎರಡು ಕಣ್ಣುಗಳು 'ಹಿಂಸೆಯ ಕ್ರಿಯೆ' ಎನಿಸಿಕೊಂಡರೆ, ಇದನ್ನು ನೋಡಿ ಆನಂದಿಸುತ್ತಿರುವ, ಮನಸ್ಸಿನಲ್ಲೇ ಚಪ್ಪರಿಸುತ್ತಿರುವ ಸಾವಿರಾರು ಜೊತೆ ಕಣ್ಣುಗಳೆಲ್ಲ 'ಹಿಂಸಾತ್ಮಕ ವಾತಾವರಣ'ವೆನಿಸಿಕೊಳ್ಳುತ್ತದೆ. ನಾವಿಂದು ಜಾಗತಿಕ ಭಯೋತ್ಪಾದನೆ ಮತ್ತು ಇದರಿಂದ ಹುಟ್ಟುತ್ತಿರುವ ಹಿಂಸೆಯನ್ನು 'ಗೂಳಿಕಾಳಗ'ದ ಹಿನ್ನೆಲೆಯಲ್ಲಿ ಗ್ರಹಿಸಬೇಕಾಗುತ್ತದೆ.

ಅಮೆರಿಕಾದ ಒಟ್ಟು ಉತ್ಪಾದನಾ ವ್ಯವಸ್ಥೆಯ ಕಣ್ಣುಗಳಲ್ಲೆ 'ಹಿಂಸಾತ್ಮಕ ವಾತಾವರಣ' ಸಮೃದ್ಧವಾಗಿದೆ. ಇಂದು ಜಗತ್ತಿನಾದ್ಯಂತ ಪೂರೈಕೆಯಾಗುತ್ತಿರುವ ನವ ನವೀನ ಶಸ್ತ್ರಾಸ್ತ್ರಗಳು, ಯುದ್ಧ ಟ್ಯಾಂಕರ್‌ಗಳು, ಯುದ್ಧ ವಿಮಾನಗಳು ಮತ್ತು ಯುದ್ಧ ನೌಕೆಗಳ ಮೂಲ ಮಾದರಿಯೇ ಅಮೆರಿಕಾ. ಶಸ್ತ್ರಾಸ್ತ್ರ ಉದ್ಯಮಗಳ ತವರು ಮನೆಯೆಂದು ಕರೆಯುವುದಾದರೆ ಅಮೆರಿಕಾವನ್ನೆ ಹಾಗೆ ಕರೆಯಬೇಕು. ಭಾರತದಂತಹ ರಾಷ್ಟ್ರಗಳು, ಬಡತನ ಮತ್ತು ಜನಸಂಖ್ಯಾ ಸ್ಫೋಟದಿಂದ ತೀವ್ರವಾಗಿ ನರಳುತ್ತಿದ್ದರೂ ತಮ್ಮ ದೇಶದ ಒಟ್ಟು ಸಂಪತ್ತಿನ ಸಿಂಹ ಪಾಲನ್ನು ಮಿಲಿಟರಿ ಉದ್ದೇಶಗಳಿಗಾಗಿಯೇ ಖರ್ಚು ಮಾಡುತ್ತಿವೆ. ಆಳವಾಗಿ ವಿಚಾರಮಾಡಿ ನೋಡಿದರೆ ಭಾರತವು ಪ್ರತಿವರ್ಷ ಮಂಡಿಸುತ್ತಿರುವ ಖೋತಾ ಬಜೆಟ್ ಆರ್ಥಿಕ ದಿವಾಳಿತನದ ಅಭಿವ್ಯಕ್ತಿಯಾಗಿದೆ ಎಂದು ಹೇಳಬಹುದು. ಅಮೆರಿಕಾದ ಉಳಿತಾಯ ಬಜೆಟ್‌ಗೆ ಹೋಲಿಸಿದರೆ ಸೆಪ್ಟೆಂಬರ್ 11 ರಂದು ಕುಸಿದು ಬಿದ್ದ ಅವಳಿ ಗೋಪುರಗಳು ಅಮೆರಿಕನ್ನರ ಪಾಲಿಗೆ ಮಕ್ಕಳು ಆಡಿಕೊಳ್ಳುವ ಆಟದ ವಸ್ತುಗಳಷ್ಟೆ! ಅದರ ಉಳಿತಾಯ ಬಜೆಟ್‌ನ ಶೇಕಡ ಐದರಷ್ಟು ಹಣವನ್ನು ವೆಚ್ಚ ಮಾಡಿದರೆ, ಕುಸಿದು ಬಿದ್ದ ಅವಳಿ ಗೋಪುರಗಳನ್ನು ಪುನರ್ ನಿರ್ಮಾಣ ಮಾಡಬಹುದು. ಆದರೆ, ನಮ್ಮ ದೇಶದ ಸಾಮರ್ಥ್ಯ ಹೇಗಿದೆಯೆಂದರೆ ಇನ್ನೂ ಹುಟ್ಟದೇ ಇರುವ ಮಕ್ಕಳು ಮತ್ತು ಮರಿಮಕ್ಕಳ ಮೇಲೆಲ್ಲ ನಾವು ಎದ್ದುನಿಲ್ಲಲಾಗದಂಥ ಸಾಲದ ಹೊರೆಯನ್ನು ಹೊರಿಸುತ್ತಿದ್ದೇವೆ. ಸಾವಿರ ಹೆಡೆಗಳ ನಾಗರಾಜನಂತೆ ಡಾಲರ್ ನಾಲಿಗೆಯನ್ನು ಚಾಚುತ್ತಿರುವ ಅಮೆರಿಕಾದ ಪಾದಮೂಲದಲ್ಲಿ ಹೊರಳಾಡಲು ಚೈತನ್ಯವಿಲ್ಲದ ಬಡಪಾಯಿ ಕೇರೆಹಾವಿನಂತಿರುವ ರೂಪಾಯಿ ಮೃತಾವಸ್ಥೆಯಲ್ಲಿದೆ. ಇಂದು ಜಗತ್ತಿನೆಲ್ಲೆಡೆ ಜನರು ಹಸಿವೆಯಿಂದ ಸಾಯುತ್ತಿರುವ ಘಟನೆಗಳು ಲೆಕ್ಕವಿಲ್ಲದಷ್ಟು, ಆದರೆ, ಅಮೆರಿಕಾ ತನ್ನ ಸುತ್ತ ಬಲವಾದ 'ಅದೃಶ್ಯ' ರೂಪದ ಸೈಬರ್ ಬೇಲಿಯನ್ನು ಕಟ್ಟಿಕೊಳ್ಳುತ್ತಿರುವುದಲ್ಲದೆ, ಶತ್ರುದೇಶಗಳಿಂದ ಬಂದೆರಗಬಹುದಾದ ಕ್ಷಿಪಣಿ, ವಿಮಾನಾದಿಗಳನ್ನು ಮಾರ್ಗ ಮಧ್ಯದಲ್ಲೆ ಧ್ವಂಸಗೊಳಿಸುವ ರಿಹರ್ಸಲ್‌ಗಳನ್ನು (ಇದಕ್ಕೆ 'ತಾರಾಸಮರ' ಎನ್ನುತ್ತಾರೆ) ನಡೆಸುತ್ತಿದೆ.

ಇದಕ್ಕಾಗಿ ಕೋಟ್ಯಂತರ ಡಾಲರ್‌ಗಳನ್ನು ಅಮೆರಿಕಾ ವೆಚ್ಚ ಮಾಡುತ್ತಿದೆ.

ಹಿಂಸೆಯ ವ್ಯವಸ್ಥಿತ ಪ್ರಚಾರ ಜನತೆಯನ್ನು ದಿಕ್ಕು ತಪ್ಪಿಸುತ್ತಿದೆ. ಗೂಳಿ ಕಾಳಗ, ಡಬ್ಲ್ಯು. ಡಬ್ಲ್ಯು. ಎಫ್, ವಿಡಿಯೋ ಗೇಮ್ಸ್, ಟಿವಿ ಮತ್ತು ಸಿನೆಮಾಗಳಲ್ಲಿರುವ ಹಿಂಸಾತ್ಮಕ ದೃಶ್ಯಗಳು – ಇವೆಲ್ಲ ಸಾಮೂಹಿಕವಾಗಿ ಎಳೆಯ ಮನಸ್ಸುಗಳ ಮೇಲೆ ದುಷ್ಪರಿಣಾಮ ಬೀರುತ್ತವೆ. ಹಿಂಸೆಯ ದೃಶ್ಯಗಳಿಗೆ ಒಗ್ಗಿಹೋಗಿರುವ ಮನಸ್ಸುಗಳೊಂದು ಕಠೋರ ಯಂತ್ರವಾಗಿರುತ್ತದೆ. ಇದಕ್ಕೆ ಉದಾಹರಣೆಯಾಗಿ ಕೆಲವು ತಿಂಗಳುಗಳ ಹಿಂದೆ ಬೆಂಗಳೂರಿನ ಮೇಖ್ರಿ ಸರ್ಕಲ್ ಬಳಿ ಒಬ್ಬಾಕೆ ಅಪಘಾತಕ್ಕೀಡಾಗಿ ಮೃತಳಾದ ನಂತರ, ವಾಹನ ಸಂಚಾರದಿಂದಾಗಿ ರಸ್ತೆಗೆ ಅಂಟಿಹೋದ ಶಾಲಾ ಬಾಲಕಿಯ ದೇಹವನ್ನು ನೆನಪು ಮಾಡಿಕೊಳ್ಳಬಹುದು. ಅದಕ್ಕೆ ಎರಡು ದಿನಗಳ ಹಿಂದೆ ಕೋಲಾರ ಜಿಲ್ಲೆ ಗೌರಿಬಿದನೂರಿನ ಬಳಿ ಮರಳು ಸಾಗಿಸುತ್ತಿದ್ದ ಎರಡು ಲಾರಿಗಳನ್ನು ಅಲ್ಲಿಯ ಸ್ಥಳೀಯ ರೈತರು ಸುಟ್ಟುಹಾಕಿದ್ದು ವರದಿಯಾಗಿದೆ. ಕೋಲಾರ ಜಿಲ್ಲೆ ಜೀವನದಿಗಳಿಲ್ಲದ ಮತ್ತು ಅಂತರ್ಜಲ ಬಸಿದು ಹೋಗಿರುವ ಪ್ರದೇಶ. ನಿರಂತರ ಮರಳು ದರೋಡೆಯಿಂದ ಭೂಮಿ ಮೇಲ್ಮೈಯಲ್ಲಿ ಮತ್ತು ಭೂಗರ್ಭದಲ್ಲಿ ನೀರು ಇಂಗಲು ಸಾಧ್ಯವಿಲ್ಲದಾಗುತ್ತದೆ. ಶಾಲಾ ಬಾಲಕಿಯ ಪ್ರಸಂಗ ಮತ್ತು ಮರಳು ಲಾರಿಯ ದಹನಗಳಲ್ಲಿ ನಾವು ಯಾವುದನ್ನು 'ಹಿಂಸೆ' ಎಂದು ಕರೆಯಬೇಕು ? ಜಾಗತಿಕ ಮತ್ತು ಸ್ಥಳೀಯ ನೆಲೆಗಳೆರಡರಲ್ಲೂ ವಿಸ್ತೃತವಾದ ಜಾಲವನ್ನು ಹೊಂದಿರುವ ಹಿಂಸೆಯು ಅತ್ಯಂತ ಸಂಕೀರ್ಣವಾಗಿರುವಂತೆಯೇ, ಸಾಪೇಕ್ಷವೆನ್ನಬಹುದಾದ ಸ್ವರೂಪವನ್ನು ಪಡೆದಿದೆ. ಹಿಂಸೆಯ ಸಾಪೇಕ್ಷ ನೆಲೆಯೆಂದರೆ, ನನಗೆ ಹಿಂಸೆಯೆನಿಸಿದ್ದು ಮತ್ತೊಬ್ಬನಿಗೆ ಅಹಿಂಸೆಯಾಗಿ ಕಾಣಬಹುದು. ನನಗೆ ಅಹಿಂಸೆಯೆನಿಸಿದ್ದು ಇನ್ನೊಬ್ಬನಿಗೆ ಹಿಂಸೆಯೆನಿಸಬಹುದು. ಆದ್ದರಿಂದ ಇದನ್ನು ಗೊಂದಲ ಮುಕ್ತವಾಗಿ ಗ್ರಹಿಸಬೇಕು.

ಧರ್ಮದ ನೆಲೆಯಿಂದ ಭಯೋತ್ಪಾದನೆಯನ್ನು ಗುರುತಿಸುವುದು ಮೇಲು ನೋಟದ ಗ್ರಹಿಕೆ ಮಾತ್ರ ! ಇಂದು ಸಮೂಹ ಸನ್ನಿಯೋ ಎಂಬಂತೆ ಧರ್ಮ - ಮೂಲಭೂತವಾದ - ಭಯೋತ್ಪಾದನೆಗಳನ್ನು ತ್ರಿವಳಿಗಳೆಂದು ಪರಿಗಣಿಸಲಾಗುತ್ತಿದೆ. ಜಾಗತಿಕವಾಗಿ ಹಬ್ಬಿರುವ ಮೂರ್ತ ಮತ್ತು ಅಮೂರ್ತ ನೆಲೆಗಳೆರಡರ ಭಯೋತ್ಪಾದನೆಯನ್ನು ಗಮನಿಸಿದರೆ, ಧರ್ಮಜನ್ಯ ಭಯೋತ್ಪಾದನೆಯೊಂದು ಸಣ್ಣ ಎಳೆ ಅಷ್ಟೆ! ನವ ವಸಾಹತುಶಾಹಿ ನೆಲೆಯಿಂದ ನೋಡಿದರೆ ''ಭಯೋತ್ಪಾದನೆಯ ಭಯೋತ್ಪಾದನೆ''ಯನ್ನು ಮನಗಾಣಬಹುದು.

ವಿಶ್ವದಾದ್ಯಂತ ಬದುಕಿನ ಎಲ್ಲ ನೆಲೆಗಳಲ್ಲಿ ರೂಪುಗೊಳ್ಳುತ್ತಿರುವ ಏಕಸ್ವಾಮ್ಯ ಮತ್ತು ಉಪಭೋಗವಾದ ಬಹುದೊಡ್ಡ ಭಯೋತ್ಪಾದನೆಯಾಗಿದೆ. ತನ್ನದೇ ಭಾಷೆಯೊಂದರಿಂದ ಭೂಗೋಳದ ಮನಸ್ಸುಗಳನ್ನು, ತನ್ನದೇ ಬೀಜಗಳಿಂದ ಭೂಗೋಳದ ದೇಹಗಳನ್ನು, ತನ್ನದೇ ಬುದ್ಧಿಬಲದಿಂದ ಎಲ್ಲ ದೇಶಗಳನ್ನು ಆಳಲು ಎಳಸುತ್ತಿರುವ, ಆಳುತ್ತಿರುವ ಹಿಂಸಾತ್ಮಕ ಯುಗದಲ್ಲಿ ನಾವಿದ್ದೇವೆ.

ನಿಸರ್ಗದ ನಿಯಮಗಳನ್ನು ಮುರಿಯುತ್ತಾ, ವಿಶ್ವವ್ಯಾಪಿಯಾಗುತ್ತಿರುವ ಬಂಡವಾಳಶಾಹಿ ವ್ಯವಸ್ಥೆಯ ಉತ್ಪಾದನಾ ವಿಧಾನಗಳು ಮತ್ತು ವಿತರಣೆಯ ಹೈಟೆಕ್ ಜಾಲವೇ ನಿಜವಾದ ಭಯೋತ್ಪಾದನೆಯಾಗಿದೆ. ಭೂಮಿಯನ್ನು ಒಂದು ಸಂಪನ್ಮೂಲದಂತೆ ಪರಿಗಣಿಸಿ, ಒಂದೇ ಸಮನೆ ದೋಚಿಕೊಳ್ಳುತ್ತಿರುವ ದುರಾಸೆ ಜನರನ್ನು ನೋಡಿಯೇ ಕವಿ ಬೇಂದ್ರೆಯವರು 'ಚಿಗರಿಗಂಗಳ ಚೆಲುವಿ' ಎಂಬ ಕವಿತೆ ರಚಿಸಿದ್ದಾರೆ. ''ಒಡವ್ಯಲ್ಲೊ ಮಗನೆ ! ಉಸಿರಿದ್ದ ಒಡಲೊ'' – ಎಂಬ ಕವಿವಾಣಿಯಲ್ಲಿ ಭೂಮಿಯನ್ನು ಜೀವಂತ ಶರೀರವೆಂದು ಕರೆಯುತ್ತಲೇ, ಭೂಮಿಯನ್ನು ಒಡವೆಯೆಂದು ತಿಳಿದವರ ಅಜ್ಞಾನಕ್ಕಾಗಿ ಮರುಕ ಮತ್ತು ಪರಿವರ್ತನೆಯ ಆಶಯಗಳಿವೆ.

ಭೂಮಿಯನ್ನು ಯಾರು ಬೇಟೆಯಾಡುತ್ತಿದ್ದಾರೋ, ಭೂತಾಯಿಯ ಸಂಪನ್ಮೂಲಗಳನ್ನು ವಿವೇಚನೆಯಿಲ್ಲದೆ ಯಾರು ದೋಚಿಕೊಳ್ಳುತ್ತಿದ್ದಾರೋ ಅವರೇ ಭಯೋತ್ಪಾದಕರು. ಒಸಾಮ ಬಿನ್ ಲಾಡೆನ್ ಯೋಜಿಸಿದ ಆತ್ಮಾಹುತಿ ದಳ ವಿಶ್ವ ವಾಣಿಜ್ಯ ಕೇಂದ್ರದ ಅವಳಿ ಗೋಪುರಗಳನ್ನುರುಳಿಸಿದೆ. ಆದರೆ, ಜಾಗತಿಕ ಬಂಡವಾಳಶಾಹಿ ಉತ್ಪಾದನಾ ವ್ಯವಸ್ಥೆಯು ವಿಶ್ವದೆಲ್ಲೆಡೆ, ಅದರಲ್ಲೂ ತೃತೀಯ ಜಗತ್ತಿನ ದೇಶಗಳಲ್ಲಿ, ನಿಸರ್ಗದ 'ಹಸಿರು ಗೋಪುರ'ಗಳನ್ನು ಇಂದಿಗೂ ಹೊಡೆದುರುಳಿಸುತ್ತಲೇ ಇದೆ. ಒಂದೇ ಒಂದು 'ಈಸ್ಟ್ ಇಂಡಿಯಾ ಕಂಪನಿ' ಭಾರತವನ್ನು ತನ್ನ ವಸಾಹತು ಮಾಡಿಕೊಂಡ ಇತಿಹಾಸವನ್ನು ಹೇಗೆ ಮರೆಯುವುದು ? ಇಂದು ಭಾರತದ ಪಶ್ಚಿಮ ಘಟ್ಟಗಳ ನಿತ್ಯ ಹರಿದ್ವರ್ಣದ ಮಳೆಕಾಡುಗಳ ಮಧ್ಯೆ ಸಾವಿರಾರು ಬಹುರಾಷ್ಟ್ರೀಯ ಕಂಪನಿಗಳು ಬೀಡುಬಿಟ್ಟಿರುವುದು ಯಾರ ಉದ್ಧಾರಕ್ಕಾಗಿ ? ಇದರಿಂದ ಭಾರತೀಯರ ಭಾಷೆಗಳು, ಬೀಜಗಳು ಮತ್ತು ನೆಲಗಳು ತನ್ನ ಸಹಜ ಸ್ಥಿತಿಯಲ್ಲಿ ಉಳಿಯಲು ಸಾಧ್ಯವೆ ? ಗಗನಚುಂಬಿಯಾದ ಕಾಂಕ್ರೀಟು ಕಟ್ಟಡಗಳು ಮತ್ತು ಜೀವಿಸಂಕುಲಗಳ ಅಭೇದದ ಕಟ್ಟಡಗಳು – ಇವೆರಡರ ನಡುವಣ ಸಂಘರ್ಷದಲ್ಲಿ ಲಾಭ-ನಷ್ಟಗಳ ಪ್ರಮಾಣವೇನು ? ಇಂಥ ಎಲ್ಲ ಪ್ರಶ್ನೆಗಳನ್ನು ಗಂಭೀರವಾಗಿ ಚಿಂತನ-ಮಂಥನ ನಡೆಸಬೇಕು.




ಸಾಮಾನ್ಯವಾಗಿ, ಪ್ರಪ್ರಾಚೀನ ನಾಗರಿಕತೆಗಳೆಲ್ಲ ನದಿದಂಡೆಗಳ ಮೇಲೆ ಅರಳಿವೆಯೆಂದು ನಾವು ಇತಿಹಾಸದ ಪುಟಗಳಲ್ಲಿ ಓದುತ್ತೇವೆ. ಇದು ನಿಜ. ಆದರೆ, ಎಲ್ಲ ಕಾಲ-ದೇಶಗಳ ನಾಗರಿಕತೆ ಮತ್ತು ಮಾನವ ಜನಾಂಗದ ಸಂಸ್ಕೃತಿ ಸೌಧದ ನಿರ್ಮಾಣಕ್ಕೆ ಸುಭದ್ರವಾದ 'ಜೀವಂತ ಅಡಿಪಾಯ' ಯಾವುದೆಂದರೆ ಮಣ್ಣು ಹುಳು. ಮನುಕುಲವು ಇಲ್ಲಿಯವರೆಗೆ ಆರೋಗ್ಯಕರವಾದ ಮತ್ತು ಪುಷ್ಟಿಕರವಾದ ಆಹಾರವನ್ನು ಪಡೆಯುವುದಕ್ಕೆ ನಿರಂತರವಾಗಿ ಶ್ರಮಿಸುತ್ತಿರುವ ಮಣ್ಣು ಹುಳು ನನ್ನ ಕಣ್ಣಿಗೆ ಒಬ್ಬ 'ಭೂಗತ ಮಹಾತ್ಮ'ನಾಗಿ ಕಾಣುತ್ತದೆ. ಆಧುನಿಕ ಕೃಷಿ ಪದ್ಧತಿಯಲ್ಲಿ ವಿಶ್ವವ್ಯಾಪಿಯಾಗಿ ಬಳಕೆಯಾಗುತ್ತಿರುವ ರಸಗೊಬ್ಬರಗಳು, ಕ್ರಿಮಿ-ಕೀಟ ನಾಶಕಗಳು ಪರಿಣಾಮದಲ್ಲಿ ಮಣ್ಣು ಹುಳುವನ್ನೇ ಇಲ್ಲವಾಗಿಸುತ್ತಿವೆ. ಟಾರು ಮತ್ತು ಕಾಂಕ್ರೀಟುಗಳಿಂದ ನೆಲವನ್ನೆಲ್ಲ ನಿರ್‌ಬೀಜಗೊಳಿಸುತ್ತಿರುವ 'ನಗರೀಕರಣ'ವೆಂಬ ವಿವೇಚನಾರಹಿತ ಪ್ರಕ್ರಿಯೆ, ಮಹಾನಗರಗಳ ಗಗನ ಚುಂಬಿ ಅಹಂಕಾರಗಳಿಂದಾಗಿ 'ಮಣ್ಣುಹುಳು' ತನ್ನ ಅಸ್ತಿತ್ವವನ್ನೇ ಕಳೆದುಕೊಳ್ಳುತ್ತಿದೆ. ಇದು ಹಿಂಸೆಯಲ್ಲವೆ ? ಹಿಂಸೆಯ ಸ್ವರೂಪ ಇಂದು ಹುಳುವಿನಿಂದ ಓಜೋನ್ ಪದರದವರೆಗೂ ವ್ಯಾಪಿಸಿಕೊಂಡಿದೆ. ಕಾಣೆಯಾಗುತ್ತಿರುವ ಮಣ್ಣುಹುಳು ಮತ್ತು ಛಿದ್ರವಾಗುತ್ತಿರುವ ಓಜೋನ್‌ಪದರ – ಇವೆರಡು ಮನುಕುಲದ ಭವಿಷ್ಯವನ್ನು ಹೇಳುವ ನಿರ್ಣಾಯಕ ಸಂಗತಿಗಳಾಗಿವೆ. ಆದರೆ, ಇದನ್ನು ಹಿಂಸೆಯೆಂದಾಗಲಿ ಅಥವಾ ಭಯೋತ್ಪಾದನೆಯೆಂದಾಗಲಿ ನಾವು ಪರಿಗಣಿಸುತ್ತಿಲ್ಲ.

ಆಧುನಿಕ ವಿಜ್ಞಾನ ಶಾಸ್ತ್ರಗಳಲ್ಲಿ ಮನುಷ್ಯನನ್ನು 'ಹೋಮೊ ಸೆಪಿಯನ್' ಎಂದು ಕರೆಯಲಾಗಿದೆ. ಆದಿಮಾನವನಿಂದ ಆಧುನಿಕ ಮಾನವನವರೆಗೆ ಸಂಸ್ಕೃತಿಯ ಮಹಾಪ್ರಸ್ಥಾನ ಸಾಗಿಬಂದಿದೆ.

ಸಹಜೀವಿಗಳನ್ನೆಲ್ಲ ಇಲ್ಲವಾಗಿಸುತ್ತಾ, ಜನಸಂಖ್ಯಾ ಸ್ಫೋಟದಿಂದ ಮತ್ತು ವಿನಾಶಕ ಬುದ್ಧಿಶಕ್ತಿಯಿಂದ ಬೀಗುತ್ತಿರುವ ಮನುಷ್ಯನ ಹೆಸರನ್ನು ಕೆಲವರು ಬದಲಾಯಿಸಿ ''ಎಕ್ಸ್‌ಟರ್ಮಿನೇಟರ್ ಸ್ಪೀಶಿಸ್'' ಎಂದು ಕರೆದಿರುವುದು ಸರಿಯಾಗಿದೆ. ''ಕೊಡಲಿಯ ಕಾವು ಕುಲಕ್ಕೆ ಕಂಟಕ'' – ಎಂಬ ಗಾದೆ ಮಾತಿಗೆ ಅನುಗುಣವಾಗಿ ಮನುಷ್ಯನಿಂದು ಮನುಕುಲಕ್ಕೆ ಮಾರಕವಾಗಿ ಪರಿಣಮಿಸುತ್ತಿದ್ದಾನೆ. ಇದನ್ನೆಲ್ಲ ಅರಿತು ಎಲ್ಲರೊಂದಾಗಿ ವಿಶ್ವಮೈತ್ರಿ ಮತ್ತು ವಿಶ್ವಶಾಂತಿಯನ್ನು ನಿರಂತರವಾಗಿ ಸಂಘಟಿಸಬೇಕು. ಇದಕ್ಕಾಗಿ ವೈಯಕ್ತಿಕ ಮತ್ತು ರಾಷ್ಟ್ರೀಯ ಚಹರೆಗಳನ್ನು ಅಳಿಸಿಕೊಂಡು ವಿಶ್ವಮಾನವ ಮತ್ತು ವಿಶ್ವಧರ್ಮದ ನೆಲೆಗೇರಬೇಕು.

ಎ. ಚಂದ್ರಶೇಖರ ನಂಗಲಿ
೩೮೮೪, ಪಿ. ಸಿ. ಬಡಾವಣೆ
ಕೋಲಾರ - ೫೬೩ ೧೦೧

# ದಿಙ್ನಾಗ

ಎಂ. ಆರ್. ರಂಗನಾಥ

**ನಾ**ನು ಮೈಸೂರಿಗೆ ಹೋದಾಗಲೆಲ್ಲ ನನ್ನ ನೆರೆಮನೆಯಲ್ಲಿದ್ದ ಶ್ರೀ ಕುಪ್ಪಾಚಾರಿಯವರ ಕಲಾಶಾಲೆಗೆ ಭೇಟಿಕೊಟ್ಟು ಬರುತ್ತಿದ್ದೆ. ಈ ಸಾರಿ ಅಲ್ಲಿಗೆ ಹೋದಾಗ ನನ್ನ ಗಮನ ಸೆಳೆದದ್ದು ಎದುರಿಗೆ ಪೀಠದ ಮೇಲಿದ್ದ ಅಮೃತಶಿಲಾ ಪ್ರತಿಮೆ.

ಧ್ಯಾನಮಗ್ನ ಬುದ್ಧ ದೇವನ ಪ್ರತಿಮೆ. ಆದರೆ ಅದನ್ನು ಕ್ರೂರ ರೀತಿಯಲ್ಲಿ ಒಡೆದಿದ್ದರು.

''ಈ ಪ್ರತಿಮೆಯನ್ನು ಎಲ್ಲಿಂದ ತಂದಿರಿ?'' ಎಂದೆ. ನನ್ನ ಪ್ರಶ್ನೆಗೆ ಕುಪ್ಪಾಚಾರಿಯವರು ''ಅದು ನಾಗಾರ್ಜುನ ಕೊಂಡದಲ್ಲಿ ಸಿಕ್ಕಿರುವ ಮೂಲಪ್ರತಿಮೆಯ ಪ್ಲಾಸ್ಟರ್ ಆಫ್ ಪ್ಯಾರಿಸ್‌ನ ಪ್ರತಿರೂಪ'' ಎಂದರು.

''ಹೌದೆ! ನಾನು ಅದು ಅಮೃತಶಿಲೆಯ ಪ್ರತಿಮೆ'' ಎಂದು ತಿಳಿದಿದ್ದೆ.

''ನಾನು ಪುರಾತತ್ವ ಇಲಾಖೆಯ ಆಹ್ವಾನದ ಮೇಲೆ ನಾಗಾರ್ಜುನ ಕೊಂಡದಲ್ಲಿರುವ ಮಹಾಸ್ತೂಪ, ಬೋಧಿಶ್ರೀ ಚೈತ್ಯ, ಸಿಂಹಲ ವಿಹಾರ, ಮಹೇಶಕ ವಿಹಾರ, ವೈಶಾಲಿಯ ರಾಣಿಯರ ಸ್ನಾನದ ಕೊಳ, ಮೊದಲಾದವನ್ನು ಚಿತ್ರಿಸಲು ಹೋಗಿದ್ದಾಗ ಅಲ್ಲಿ ನೋಡಿದ ಮೂಲಪ್ರತಿಮೆಯ ಪ್ರತಿರೂಪವನ್ನು ಚಿತ್ರಿಸಿಕೊಂಡು ಬಂದು ಅದೇ ರೀತಿಯಲ್ಲಿ ನಾಲ್ಕೈದು ಪ್ರತಿಮೆಗಳನ್ನು ಮಾಡಿದೆ, ಒಂದೂ ಸರಿ ಹೋಗಲಿಲ್ಲ. ಕೊನೆಗೆ ಪ್ಲಾಸ್ಟರ್ ಆಫ್ ಪ್ಯಾರಿಸ್‌ನಿಂದ ಈ ಪ್ರತಿಮೆಯನ್ನು ತಯಾರಿಸಿದೆ'' ಎಂದರು.

''ಕ್ರೂರ ರೀತಿಯಲ್ಲಿ ಅದನ್ನ ಒಡೆದಿದ್ದೀರ ಏಕೆ?''

''ಅಲ್ಲಿರುವ ಎಲ್ಲ ಬೌದ್ಧ ವಿಗ್ರಹಗಳು, ಸ್ತೂಪಗಳು ಮತ್ತು ಸ್ಮಾರಕಗಳನ್ನು ನಿರ್ನಾಮ ಮಾಡಿದ್ದಾರೆ. ಅಲ್ಲಿ ಇರುವ ರೀತಿಯಲ್ಲೇ ಇದನ್ನು ಮಾಡಿದ್ದೇನೆ'', ಎಂದು ತಿಳಿಸಿ ಅವರು ಅಲ್ಲಿ ಚಿತ್ರಿಸಿರುವ ಹಲವಾರು ''ಚಿತ್ರಸಮೂಹಗಳ'' ಒಂದು ಪುಸ್ತಕವನ್ನು ಕೊಟ್ಟು ಇದನ್ನು ನೋಡುತ್ತಿರು, ಮಾರ್ಕೆಟ್‌ಗೆ ಹೋಗಿಬರುತ್ತೇನೆಂದು ತಿಳಿಸಿ ಹೋದರು.

ಕಲಾಶಾಲೆಯಲ್ಲಿ ನಾನೊಬ್ಬನೇ ಉಳಿಯುವುದು ಅನಿವಾರ್ಯವಾಯಿತು. ಕಿಟಕಿಯಿಂದ ಸಂಜೆಯ ಸೂರ್ಯನ ಬಿಸಿಲಿನ ಕಿರಣಗಳು ಆ ಪ್ರತಿಮೆಯ ಮೇಲೆ ಬಿದ್ದು ಪ್ರತಿಫಲಿಸಿತು. ಶಿಲೆಯ ಗರ್ಭದಲ್ಲಿ ಕಿರಣಗಳು ಪ್ರತಿಫಲಿಸಿ, ಪ್ರತಿಮೆ ಜೀವ ತಳೆದು ಉಸಿರಾಡುತ್ತಿದೆಯೋ ಎನ್ನಿಸಿತು.

ಪ್ರತಿಕ್ಷಣದಲ್ಲಿ ನನ್ನ ಅವಿವೇಕಕ್ಕಾಗಿ ನಾನೇ ನಕ್ಕು ಪೀಠದ ಮೇಲಿದ್ದ ಮತ್ತೊಂದು ಚಿತ್ರಸಂಗ್ರಹಕ್ಕೆ ಕೈಚಾಚಿದಾಗ ಸನ್ಯಾಸಿ ಅಥವಾ ಬೌದ್ಧ ಭಿಕ್ಷು ಒಬ್ಬರು ನನ್ನ ಹತ್ತಿರಕ್ಕೆ ಬರುತ್ತಿದ್ದರು. ಅವರು ತೊಟ್ಟಿದ್ದ ಮರದ ಪಾದುಕೆಯ ಶಬ್ದ ಅಸ್ಫುಟವಾಗಿ ಕೇಳುತ್ತಿತ್ತು.... ತೇಜಃಶಾಲಿಯಾದ ವೃದ್ಧ ಬೌದ್ಧ ಭಿಕ್ಷು ಒಬ್ಬರು ನನ್ನ ಎದುರಿಗೆ ನಿಂತಿದ್ದರು!....

ತೇಜಸ್ಸಿನಿಂದ ಕೂಡಿದ ಅವರ ಕಣ್ಣುಗಳ ಆಕರ್ಷಣೆಯಿಂದ ತಪ್ಪಿಸಿಕೊಳ್ಳುವ ಪ್ರಯತ್ನದಲ್ಲಿ ಪ್ರತಿಮೆಯ ಕಡೆ ತಿರುಗಿದೆ, ಪೀಠ ಬರಿದಾಗಿತ್ತು. ಆಗಿನ ಪರಿಸ್ಥಿತಿಯಲ್ಲಿ ನನ್ನ ಅರಿವಿಗೆ ನಿಲುಕದ ಯಾವುದೋ ಇಂದ್ರಜಾಲದ ಬಲದಿಂದ ಶಿಲಾಪ್ರತಿಮೆ ಬೌದ್ಧ ಭಿಕ್ಷುವಾಗಿ ಅವತರಿಸಿದೆ ಎಂದು ತಿಳಿದೆ. ಜಾಗ್ರತಾವಸ್ಥೆಯ ವ್ಯವಹಾರ ಜಗತ್ತಿನಿಂದ ದೂರವಾಗಿ ಕನಸಿನ ರಾಜ್ಯದಲ್ಲಿ ಅಲೆಯುತ್ತಿತ್ತು ನನ್ನ ಮನಸ್ಸು.

''ತಾವು ಯಾರು?'' ಎಂದು ಕೇಳಿದೆ.

''ನನ್ನ ಪರಿಚಯಕ್ಕೆ ಮೊದಲು ಬೌದ್ಧ ಧರ್ಮದ ಬಗ್ಗೆ ತಿಳಿಸಿ ಆಮೇಲೆ ನನ್ನ ಬಗ್ಗೆ ತಿಳಿಸುತ್ತೇನೆ'' ಎಂದರು.

ಬೌದ್ಧ ಧರ್ಮದ ಬಗ್ಗೆ ಅಲ್ಪಸ್ವಲ್ಪ ತಿಳಿದಿದ್ದ ನಾನು ಅದರ ಬಗ್ಗೆ ತಿಳಿಯಲು ಕುತೂಹಲ ಉಳ್ಳವನಾಗಿ ''ತಿಳಿಸಿ'' ಎಂದೆ. ಅವರು ಹೇಳಿದರು:

ಭಾರತದಲ್ಲಿ ಬೌದ್ಧ ಧರ್ಮ ಹುಟ್ಟಿದ್ದು ಒಂದು ನಿರ್ಣಾಯಕ ಘಟ್ಟದಲ್ಲಿ. ಕ್ರಿ.ಪೂ. ೬ನೇ ಶತಮಾನ ಭಾರತದಲ್ಲಿ ವಿಶೇಷವಾದ ಮಹತ್ವದ ಕಾಲ. ಶ್ರಮಣ ಪರಂಪರೆಯ ಎರಡು ಧರ್ಮಗಳ ಉಗಮದ ಪರ್ವಕಾಲ. ಬೌದ್ಧಧರ್ಮವು ಗೌತಮ ಬುದ್ಧನಿಂದ, ಜೈನಧರ್ಮವು ಮಹಾವೀರನಿಂದ ರೂಪಗೊಂಡಿತು. ಬೌದ್ಧಧರ್ಮ ಸರ್ವರ ಧರ್ಮವಾಗಿತ್ತು. ರಾಜರಿಗೆ ಎಷ್ಟು ಪರಿಣಾಮಕಾರಿಯಾಗಿತ್ತೋ, ದೀನದಲಿತರಿಗೂ ಅಷ್ಟೇ ಪರಿಣಾಮಕಾರಿಯಾಗಿತ್ತು. ಪುರೋಹಿತಶಾಹಿಯ ಕೈಯಿಂದ ಸಾಮಾನ್ಯ ಜನರನ್ನು ಪಾರುಮಾಡುವುದು ಗೌತಮ ಬುದ್ಧನ ಪರಮೋದ್ದೇಶವಾಗಿತ್ತು. ಈ ಕೆಲಸವನ್ನು ಬುದ್ಧನು ''ಸಾಂಘಿಕ'' ಪ್ರಯತ್ನದಿಂದ ನೆರವೇರಿಸಿದನು.

ಅದು ಜನರ ಮೇಲೆ ಬಲವಂತವಾಗಿ ಹೇರಿದ ಧರ್ಮವಲ್ಲ ; ಜನರೇ ಸ್ವೇಚ್ಛೆಯಿಂದ, ಸಂತೋಷದಿಂದ ಒಪ್ಪಿಕೊಂಡ ಧರ್ಮ. ವಿಜ್ಞಾನ ಮತ್ತು ಕಲೆ, ಸಾಹಿತ್ಯ ಮತ್ತು ಧರ್ಮ, ವಾಣಿಜ್ಯ ಮತ್ತು ಕೈಗಾರಿಕೆ, ಆಂತರಿಕ ಅಭಿವೃದ್ಧಿ ಮತ್ತು ಅಂತರರಾಷ್ಟ್ರೀಯ ಖ್ಯಾತಿ - ಮುಂತಾದ ರಂಗಗಳಲ್ಲಿ ಒಂದು ಸಾವಿರ ವರ್ಷಗಳಿಗೂ ಹೆಚ್ಚುಕಾಲ ಅದು ದೇಶದ ಹಣೆಬರಹವನ್ನು ತಿದ್ದಿ, ರಾಷ್ಟ್ರದ ಅಪಾರ ಅಂತಃಶಕ್ತಿಯನ್ನು ಪೂರ್ಣಪ್ರಮಾಣದಲ್ಲಿ ಹೊರಗೆಡಹಿತು.

''ವೈದಿಕಧರ್ಮ ಈ ಧರ್ಮವನ್ನು ಅವಸಾನಸ್ಥಿತಿಗೆ ದೂಡಿತು ಎಂದು ಇತಿಹಾಸಕಾರರು ತಿಳಿಸುತ್ತಾರೆ, ನಿಜವೆ?'' ಎಂದು ನಾನು ಕೇಳಿದೆ.

''ನಿಜ, ಬೌದ್ಧಧರ್ಮ ಪ್ರಸಾರದಿಂದ ಸಮಾಜದಲ್ಲಿ ತಮ್ಮ ಸ್ಥಾನಮಾನಗಳಿಗೆ ಧಕ್ಕೆ ಉಂಟಾದಾಗ ವೈದಿಕ ಧರ್ಮದವರು ಸುಮ್ಮನಿದ್ದರೆಂದು ನಿರೀಕ್ಷಿಸುವುದು ತರವಲ್ಲ. ದೇಶಕ್ಕೆ ಚೇತನವನ್ನು ನೀಡಿದ್ದ ಬೌದ್ಧಧರ್ಮ ಅತ್ಯಂತ ಪ್ರಜಾಸತ್ತಾತ್ಮಕವಾದ್ದು. ಅದು ರಾಜರ ನೀತಿಯ ಮೇಲೆ ಪ್ರಭಾವ ಬೀರುವುದನ್ನು, ಜನರ ನಂಬಿಕೆಗಳನ್ನು ನಿಯಂತ್ರಿಸುವುದನ್ನು ಮುಂದುವರಿಸಿದಾಗ ದೇಶದ ಮೇಲಿನ ತಮ್ಮ ನಿರಂಕುಶಾಧಿಕಾರವನ್ನು ಉಳಿಸಿಕೊಳ್ಳುವುದು ವೈದಿಕರಿಗೆ ಸಾಧ್ಯವಾಗಲಿಲ್ಲ. ಬುದ್ಧನ ಕಾಲದಿಂದಲೂ ಸಂಘವನ್ನು ಸೇರಲು ವೈದಿಕರು ಆರಂಭಿಸಿದರು. ದೇಶದ ಎಲ್ಲೆಡೆ ಶ್ರದ್ಧಾವಂತ ಜನರ ವಿಹಾರಗಳನ್ನು ನಿರ್ಮಿಸಿ, ಭಿಕ್ಷುಗಳ ನಿರಂತರ ಜೀವನಕ್ಕೆ ಯಥೇಚ್ಛವಾಗಿ ಆಸ್ತಿಪಾಸ್ತಿ ಬಿಟ್ಟಾಗ, ಯಜ್ಞಾದಿಗಳಿಂದ ಬರುತ್ತಿದ್ದ ಆದಾಯವನ್ನು ಕಳೆದುಕೊಂಡಿದ್ದ ವೈದಿಕರು ಅಪಾರ ಸಂಖ್ಯೆಯಲ್ಲಿ ಸಂಘವನ್ನು ಸೇರಿದರು.



''ತಮ್ಮ ವಿದ್ವತ್ತು ಮತ್ತು ಪ್ರಭಾವಗಳಿಂದ ಅದನ್ನು ಬಲಗೊಳಿಸಿ ಅದರ ಮುಂದಾಳುಗಳಾದರು. ಅವರು ಬೌದ್ಧ ಭಿಕ್ಷುಗಳಾದರೂ, ಅವರ ಜಾತಿಬುದ್ಧಿ ಅವರನ್ನು ಬಿಟ್ಟು ತೊಲಗಲಿಲ್ಲ. ಬುದ್ಧನ ಬೋಧನೆಯ ಮೂಲಭೂತ ತತ್ವಕ್ಕೆ ತೀರ ವಿರುದ್ಧವಾಗಿದ್ದ ಜಾತಿಯ ವಿಷಯದಲ್ಲಿ ಈ ವೈದಿಕ ಭಿಕ್ಷುಗಳು ಸಂಪ್ರದಾಯ ಬದ್ಧತೆಯನ್ನು ಉಳಿಸಿಕೊಳ್ಳಲು ಶಕ್ತರಾದರು. ತಮ್ಮ ಪೌರೋಹಿತ್ಯದ ಪದ್ಧತಿಯನ್ನು ಕ್ರಮೇಣ ಸಂಘದ ಒಳಕ್ಕೆ ತರಲು ಅವರಿಗೆ ಕಷ್ಟವಾಗಲಿಲ್ಲ; ವಾಸ್ತವವಾಗಿ ನಡೆದದ್ದು ಅದೇ. ನಿಯಂತ್ರಿಸದ ಪುರೋಹಿತ ವರ್ಗದಂತೆ ಅಪರಿಮಿತ ಸಂಖ್ಯೆಯಲ್ಲಿ ಸಂಘಗಳು ಅವನತಿಯ ದಾರಿ ಹಿಡಿದವು.

''ಅಶೋಕನ ಕಾಲದಲ್ಲಿ ಇಡೀ ಭಾರತದ ಧರ್ಮವಾಗಿ ವಿಜೃಂಭಿಸಿದ ಬೌದ್ಧಧರ್ಮ ಕಾನಿಷ್ಕನ ಕಾಲದಲ್ಲಿ ಮುಂದುವರೆದು ಮುಂದೆ ಬೌದ್ಧರ ಪರವಾಗಿಲ್ಲದ ರಾಜರ ಆಡಳಿತದಲ್ಲಿ ಪುರೋಹಿತರ ಕುತಂತ್ರದಿಂದ ನಿರ್ನಾಮಗೊಂಡಿತು.

''ಸಾಮ್ರಾಟ್ ಅಶೋಕನು ಅಶ್ವಮೇಧ ಯಾಗವನ್ನು ಧರ್ಮಬಾಹಿರವೆಂದು ನಿಷೇಧಿಸಿದ್ದನು. ಅವನ ವಂಶದ ಮಹಾರಾಜ ಬೃಹದ್ರಥನನ್ನು ಅವನ ಬ್ರಾಹ್ಮಣ ಸೇನಾಪತಿ ಪುಷ್ಯಮಿತ್ರನು ಕೊಲೆ ಮಾಡಿ ಮೌರ್ಯ ಸಿಂಹಾಸನವನ್ನು ಲಪಟಾಯಿಸಿ ಅಶ್ವಮೇಧ ಯಾಗವನ್ನು ಮತ್ತೆ ಪ್ರಾರಂಭಿಸಿದನು. ಬೌದ್ಧಧರ್ಮಕ್ಕೆ ಬೆಂಬಲ ಕೊಡುತ್ತಿದ್ದಾನೆಂದು ಕಾನಿಷ್ಕನನ್ನು ಮಲಗಿದ್ದ ಹಾಸಿಗೆಯಲ್ಲಿ ಕುತ್ತಿಗೆ ಹಿಸುಕಿ ಸಾಯಿಸಿದರು. ವೇದ ಪ್ರಾಮಾಣ್ಯವನ್ನು ಒಪ್ಪಿಕೊಳ್ಳದ ವಿಚಾರವಾದಿಗಳನ್ನು, ಬೌದ್ಧರನ್ನು ನಿರ್ನಾಮ ಮಾಡುವ ಹಾದಿಯಲ್ಲಿ ಬ್ರಾಹ್ಮಣ-ಕ್ಷತ್ರಿಯ ಕೂಟ ಸಫಲವಾಯಿತು,'' ಎಂದು ನಿಟ್ಟುಸಿರುಬಿಟ್ಟರು.

ಅಲ್ಲಿಯವರೆಗೆ ಅವರನ್ನು ನಿಲ್ಲಿಸಿಕೊಂಡು ಮಾತನಾಡಿಸುತ್ತಿದ್ದ ನನ್ನ ಅವಿವೇಕಕ್ಕೆ ನಾನು ಪಶ್ಚಾತ್ತಾಪಪಟ್ಟು ಅವರನ್ನು ಅಲ್ಲಿದ್ದ ಸೋಫಾದ ಮೇಲೆ ಕುಳಿತುಕೊಳ್ಳುವಂತೆ ಕೇಳಿಕೊಂಡೆ.

ಅವರು ನಕ್ಕು ಆಸೀನರಾದರು.

''ತಮ್ಮ ಪರಿಚಯವಾಗಲಿಲ್ಲವಲ್ಲಾ'' ಎಂದು ಕೇಳಿದೆ.

''ನನ್ನ ನಿಜ ನಾಮಧೇಯ ಬುದ್ಧಗುಪ್ತನೆಂದು. ಉಜ್ಜಯಿನಿಯ ಶ್ರೀಮಂತ ಮನೆತನದಲ್ಲಿ ಹುಟ್ಟಿ, ಚಿತ್ರಶಿಲ್ಪಿಯೆಂದು ಹೆಸರಾಗಿದ್ದ ನಾನು ಪ್ರೇಮಜೀವನದಲ್ಲಿ ಒಂದು ದುರ್ಘಟನೆಯ ಫಲವಾಗಿ ಬದುಕಿನಲ್ಲಿ ವಿರಕ್ತಿಯಿಂದ ಮನೆ-ಮಠ ತ್ಯಜಿಸಿ ದಕ್ಷಿಣ ಭಾರತದ ಕೃಷ್ಣವೇಣಿ ನದಿಯ ಎಡ ಮಗ್ಗುಲಿನಲ್ಲಿದ್ದ ಶ್ರೀಪರ್ವತದ ಪಕ್ಕದಲ್ಲಿ ವಿಶಾಲ ಪ್ರದೇಶದಲ್ಲಿದ್ದ ಈ ಸಂಘಾರಾಮಕ್ಕೆ ಬಂದೆ. ಈ ಸಂಘಾರಾಮದ ಅಧ್ಯಕ್ಷರಾಗಿದ್ದ ನಾಗಾರ್ಜುನರು ಶ್ರೀ ಪರ್ವತದ ಬಳಿ ಸಾವಿರದೈನೂರು ಕೋಣೆಗಳಿರುವ ಐದು ಅಂತಸ್ತುಗಳುಳ್ಳ ವಿಶಾಲವಾದ ಬೌದ್ಧವಿಹಾರವನ್ನು ನಿರ್ಮಿಸಿ, ಮಾದರಿ ವಿದ್ಯಾಪೀಠವನ್ನು ಸ್ಥಾಪಿಸಿದ್ದರು. ಈ ಪೀಠವು ಆಗ ದಕ್ಷಿಣ ಭಾರತವನ್ನಾಳುತ್ತಿದ್ದ ಶಾತವಾಹನ ಚಕ್ರವರ್ತಿ ಯಜ್ಞಶ್ರೀ ಶಾತಕರ್ಣಿಯ ರಾಜಧಾನಿಯಾದ ಧನ-ಕಟಕಕ್ಕೆ ಮೂರು ಯೋಜನೆಗಳ ದೂರದಲ್ಲಿತ್ತು. ಇಂತಹ ಬೃಹತ್ತಾದ ವಿದ್ಯಾಪೀಠವು ಭಾರತದಲ್ಲೇ ಇನ್ನೆಲ್ಲೂ ಇಲ್ಲವೆನ್ನುವಷ್ಟು ಮಹತ್ವ ಪಡೆದಿತ್ತು. ದೇಶ-ವಿದೇಶಗಳಿಂದ ಬಂದ ವಿದ್ಯಾರ್ಥಿಗಳಿಗೆ ಇಲ್ಲಿ ಆಯುರ್ವೇದ, ಜ್ಯೋತಿಷ್ಯ, ವೈದ್ಯ, ಶಸ್ತ್ರ ಚಿಕಿತ್ಸಾ ವಿಧಾನ, ಶಿಲ್ಪ, ರಸಾಯನ, ಅಧ್ಯಾತ್ಮ ವಿದ್ಯೆ, ಲಲಿತಕಲೆ - ಹೀಗೆ ಹಲವಾರು ವಿಷಯಗಳನ್ನು ಹೇಳಿಕೊಡಲಾಗುತ್ತಿತ್ತು.

''ಮಹಾಯಾನ ಬೌದ್ಧಧರ್ಮದಲ್ಲಿ ನನ್ನ ಆಸಕ್ತಿ, ಸನ್ಯಾಸ ಸ್ವೀಕರಿಸಿ, ಬೌದ್ಧ ಭಿಕ್ಷುವಾಗುವ ಅಭಿಲಾಷೆ. ವಿಹಾರದ ಅಧಿಪತಿ ಮಹಾಯಾನ ಶಾಖೆಯ ಸಂಸ್ಥಾಪಕರಾದ ನಾಗಾರ್ಜುನ ಭಟ್ಟಾರರ ಒಪ್ಪಿಗೆಯಿಂದ ''ದಿಙ್ನಾಗ''ನೆಂಬ ಹೆಸರಿನಿಂದ ಭಿಕ್ಷುವಾದೆ.

''ಈ ವಿಹಾರದಲ್ಲಿ ನನ್ನ ಚಿತ್ರಕಲೆಯ ಅಭಿವೃದ್ಧಿಗೆ ಭಿತ್ತಿಚಿತ್ರಗಳನ್ನು ವಿಹಾರದ ಗೋಡೆಯ ಮೇಲೆ ಬರೆಯಲು ನಾಗಾರ್ಜುನರು ಪ್ರೇರೇಪಿಸಿದರು.

''ಧ್ಯಾನೀ ಬುದ್ಧ, ತಪೋನಿರತನಾದ ಬುದ್ಧ, ಗೃಹತ್ಯಾಗಿಯಾದ ಬುದ್ಧ, ಮಾಯೆಯೊಡನೆ ಸತತ ಹೋರಾಟ ನಡೆಸಿದ ಬುದ್ಧನ ಅವಧಾನ ಕಲ್ಪಲತೆಯ ಎಲ್ಲಾ ಸನ್ನಿವೇಶಗಳನ್ನು ಒಂದಲ್ಲ ಒಂದು ರೀತಿಯಲ್ಲಿ ಚಿತ್ರಿಸಿದ್ದೇನೆ.

''ವೃತ್ತಿಗೆಳೆಯರಾದ ಕಾನ್ಯಕುಬ್ಜದ ವೇಣುದಾಸ, ಭುವನೇಶ್ವರದ ಸೋಮದತ್ತ ಮುಂತಾದ ಶಿಲ್ಪಿಗಳು ಬುದ್ಧನ ಅವತಾರ ಕಲ್ಪನೆಗಳಾದ ''ಮಂಜುಶ್ರೀ'', ''ಅವಲೋಕಿತೇಶ್ವರ'' ಮುಂತಾದ ವಿಗ್ರಹಗಳನ್ನು ರೂಪಿಸಲು ಇಲ್ಲಿಗೆ ಬಂದಿದ್ದರು.

''ಬ್ರಾಹ್ಮಣ ಧರ್ಮದ ಪರವಾಗಿದ್ದ ಶಾತವಾಹನ ರಾಜ ಗೌತಮೀಪುತ್ರ ಸಾತಕರ್ಣಿ ನಾಗಾರ್ಜುನರನ್ನು ಕೊಲೆ ಮಾಡಿಸಿದನು.

''ಮಹಾಯಾನ ಶಾಖೆಯ ಸಂಸ್ಥಾಪಕ, ಸಿದ್ಧ ವಿದ್ಯಾಪಾರಂಗತ, ಬಹುಶ್ರುತ, ಶೂನ್ಯವಾದದ ಪ್ರತಿಪಾದಕರಾದ ನಾಗಾರ್ಜುನ ಭಟ್ಟಾರರು ನಡೆಸುತ್ತಿದ್ದ ಗುರುಕುಲ ಪದ್ಧತಿಯಿಂದ ಕೂಡಿದ ಈ ವಿಶ್ವವಿದ್ಯಾಲಯ, ಆಯುರ್ವೇದ ಚಿಕಿತ್ಸಾ ಕೇಂದ್ರ ಮುಂತಾದವುಗಳಿಗೆ ನಾನು ಕುಲಪತಿಯಾಗಿ ಮುಂದುವರೆದೆ.

''ಈ ಆಖ್ಯಾಯಿಕೆಯ ಕಾಲಕ್ಕೆ ನಾಗಾರ್ಜುನ ಭಟ್ಟಾರರ ಶೂನ್ಯವಾದವನ್ನು ಸ್ವೀಕರಿಸಿದ್ದ ಶೈವಮತ ದಕ್ಷಿಣ ಭಾರತದಲ್ಲಿ ಪ್ರಬಲವಾಗತೊಡಗಿತ್ತು. ಅದ್ವೈತಿ ಶಂಕರಾಚಾರ್ಯರು ಜಗತ್ತನ್ನು ಮಾಯೆ, ಮಿಥ್ಯೆ ಎಂಬ ಸತ್ವಹೀನ ಸಿದ್ಧಾಂತವನ್ನು ಹರಡಲು ದೇಶದ ನಾಲ್ಕು ಮೂಲೆಗಳಲ್ಲಿ ಮಠಗಳನ್ನು ಸ್ಥಾಪಿಸಿದರು. ಈ ಮಠ ಸ್ಥಾಪನೆಯ ಸಂಗತಿ ಶಂಕರರು ವಾಸ್ತವವಾಗಿ ಬೌದ್ಧರಿಂದ ತೆಗೆದುಕೊಂಡರು'', ಎಂದರು.

''ಬುದ್ಧ ಸ್ಥಾಪಿಸಿದ ಸಂಘ ವ್ಯವಸ್ಥೆಗೂ ಬುದ್ಧನ ನಂತರ ಹುಟ್ಟಿಕೊಂಡ ಮಠಗಳಿಗೂ ಮೂಲಭೂತವಾದ ವ್ಯತ್ಯಾಸವಿದೆ. ಬುದ್ಧನದು ಜಾತಿಮತಗಳ ಸಂಕುಚಿತತೆ ಯನ್ನು ಹೋಗಲಾಡಿಸಿ ಸರ್ವ ಸಮಾನತೆಯ ಮತ್ತು ಸೌಹಾರ್ದಯುತ ಸಹಬಾಳ್ವೆಯನ್ನು ಮೂಡಿಸುವ ಪ್ರಯತ್ನವಾಗಿತ್ತು. ಆದರೆ ಈಗ ಭಾರತದಲ್ಲಿ ಎಲ್ಲಾ ಮಠಗಳ ಉದ್ದೇಶ ತಮ್ಮ ತಮ್ಮ ಜಾತಿ ಕೋಮುಗಳನ್ನು ಬೆಳೆಸಿ ರಕ್ಷಿಸುವುದೇ ಆಗಿದೆ,'' ಎಂಬ ನನ್ನ ಅಂತರಾಳದ ತುಮುಲವನ್ನು ಹೊರಗೆಡಹಲು ಶಕ್ತನಾಗಲಿಲ್ಲ.

''ಅದ್ವೈತಿಯಾದ ಶಂಕರಾಚಾರ್ಯರು ತಮ್ಮ ವಾದದಿಂದ ಬೌದ್ಧಮತವನ್ನು ಸೋಲಿಸಿ ಕ್ಷೀಣಿಸುತ್ತಿದ್ದ ಹಿಂದೂ ಧರ್ಮವನ್ನು ಉಳಿಸಿದರೆಂದು ಹೇಳುತ್ತಾರಲ್ಲ'' ಎಂದೆ.

''ಈ ಆಖ್ಯಾಯಿಕೆಯ ಕಾಲಕ್ಕೆ ಸಮಾನತೆಯನ್ನು ಬಿತ್ತಿ ಜಾತಿ ವ್ಯವಸ್ಥೆಯನ್ನು ಸಡಿಲಗೊಳಿಸಿದ್ದ ಬೌದ್ಧರ ಪ್ರಾಬಲ್ಯ ಕಡಿಮೆಯಾಗಿ ಗುಪ್ತರ ಯುಗ ಪ್ರಾರಂಭವಾಗಿ ಪುರೋಹಿತಶಾಹಿ ತಲೆಯೆತ್ತಿತ್ತು. ಈ ಕಾಲದಲ್ಲೇ ಪುರೋಹಿತವರ್ಗ ತಮಗೆ ತೋಚಿದ ರೀತಿಯಲ್ಲಿ ಪುರಾಣಗಳನ್ನು ರೂಪಿಸಿದರು. ಉತ್ತರದಲ್ಲಿ ಗುಪ್ತರು, ದಕ್ಷಿಣದಲ್ಲಿ ಪಲ್ಲವರು, ಪಶ್ಚಿಮದಲ್ಲಿ ಚಾಲುಕ್ಯರು ಈ ಪುರೋಹಿತಶಾಹಿಗೆ ಬೆಂಬಲಿಗರಾಗಿದ್ದರು. ಈ ರಾಜರುಗಳ ಬೆಂಬಲದಿಂದ ಅದ್ವೈತಿ ಶಂಕರಾಚಾರ್ಯರು ಶೂದ್ರರಿಗೆ ಜ್ಞಾನವನ್ನು ನಿರಾಕರಿಸಿದರಷ್ಟೇ ಅಲ್ಲ, ಅವರು ಮಾಡಿದ ಮಹಾಪರಾಧ, ಬಲವಾಗಿ ಬೇರೂರಿದ್ದ ಬೌದ್ಧಧರ್ಮವನ್ನು ನಾಶಮಾಡಲು ಅವರು ತುಂಬ ಹೇಯ ವಿಧಾನಗಳನ್ನು ಅನುಸರಿಸಿದರು. ಅವರು ತಮ್ಮ ವಿದ್ವತ್ತು ಮತ್ತು ವಾದದ ಮೂಲಕ ಬೌದ್ಧರನ್ನು ಸೋಲಿಸಿದರೆಂಬುದು ಕೇವಲ ಬೂಟಾಟಿಕೆ. ವಾದದಲ್ಲಿ ಸೋಲುವುದೆಂದರೆ ಏನರ್ಥ? ವಾದಗಳು ಭಿನ್ನಾಭಿಪ್ರಾಯ ಮತ್ತು ಭಿನ್ನ ದೃಷ್ಟಿಕೋನಗಳಲ್ಲವೆ? ಹಾಗಿರುವಾಗ ಗೆಲ್ಲುವುದಾಗಲಿ, ಸೋಲುವುದಾಗಲಿ ಎಲ್ಲಿಂದ ಬಂತು? ಇದು ಮೋಸದ ಕಥೆ'', ಎಂದು ಆವೇಶಭರಿತರಾಗಿ ನುಡಿದು, ಸ್ವಲ್ಪ ಹೊತ್ತಿನ ನಂತರ ಮುಂದುವರಿದು ಹೇಳಿದರು : '' ಆ ದಿನವನ್ನು ಧರ್ಮ ದುರಂತದ ದಿನವೆನ್ನಬೇಕು. ಶಂಕರರು ತಮ್ಮ ಮೇಲ್ವಿಚಾರಣೆಯಲ್ಲಿ ಪಲ್ಲವರ ಸೇನೆಯನ್ನು ಈ ಸಂಘಾರಾಮದ ಮೇಲೆ ಧಾಳಿ ಮಾಡಿಸಿ, ಬೌದ್ಧ ಭಿಕ್ಷುಗಳು, ವಿಗ್ರಹಗಳು, ಸ್ತೂಪಗಳು ಮತ್ತು ಅಮೂಲ್ಯವಾದ ಗ್ರಂಥ ಭಂಡಾರವನ್ನು ನಿರ್ನಾಮ ಮಾಡಿಸಿದರು.'' ಆಮೇಲೆ ಮೌನ.

''ಈ ರೀತಿಯಾಗಲು ಕಾರಣವೇನು?'' ಎಂದೆ.

ಮೌನವನ್ನು ಮುರಿದು ಅವರು ''ನಮ್ಮಲ್ಲಿ ನಡೆಯುತ್ತಿದ್ದ ತಾಂತ್ರಿಕ ರಹಸ್ಯ ಆಚರಣಾ ವಿಧಿಗಳು, ವಜ್ರಯಾನ ಪರಂಪರೆಯಲ್ಲಿ ಬೆಳೆದುಬಂದಿದ್ದ ವಿಷಯ ಲಂಪಟತೆ ಹಾಗೂ ಸ್ವೈರಾಚಾರ ಅಂದಿನ ವೈದಿಕ ಸಮಾಜವನ್ನು ಕೆರಳಿಸಿತು.

''ಆ ದಿನ ಧಾಳಿಯಾದಾಗ ಅಮೂಲ್ಯವಾದ ಬೌದ್ಧ ಧರ್ಮ ಗ್ರಂಥಗಳನ್ನು ಬೇರೆಡೆಗೆ ಸಾಗಿಸಲು ನಾನು ಮತ್ತು ನನ್ನ ಸಹೋದ್ಯೋಗಿಗಳು ಪ್ರಯತ್ನಪಟ್ಟೆವು, ಆಗ ನಿಶ್ಶಸ್ತ್ರರಾದ ನಮ್ಮನ್ನು ಪಲ್ಲವ ಸೈನ್ಯ ನಿಷ್ಕರುಣೆಯಿಂದ ಈ ಕಣಿವೆಯಲ್ಲಿ ಬೇಟೆಯಾಡಿತು'' ಎಂದರು.

ಆಗ ನನ್ನ ಮನಸ್ಸಿನ ಅನಿಸಿಕೆಯನ್ನು ಅವರಲ್ಲಿ ತೋಡಿಕೊಳ್ಳಲು ಶುರುಮಾಡಿದೆ :

''ಹಿಂಸೆ, ಗೂಂಡಾಗಿರಿ, ಪರಮತ ದ್ವೇಷ, ಸ್ವಾರ್ಥಪರತೆ, ಇವೆಲ್ಲಾ ಭಾರತೀಯ ಸಂಸ್ಕೃತಿಯ ಕೆಲವು ಒಳಗುಟ್ಟು ಗಳೆಂದು ಹೇಳದೆ ವಿಧಿಯಿಲ್ಲ. ಸಂಸ್ಕೃತ ಸಾಹಿತ್ಯದಲ್ಲಿ ಮೊಟ್ಟಮೊದಲ ಐತಿಹಾಸಿಕ ಗ್ರಂಥವೆಂದು ಖ್ಯಾತವಾಗಿರುವ ಕಲ್ಹಣನ (೧೨ನೇ ಶತಮಾನ) ''ರಾಜತರಂಗಿಣಿ''ಯಲ್ಲಿ ಹನ್ನೊಂದನೆಯ ಶತಮಾನದಲ್ಲಿ ಕಾಶ್ಮೀರವನ್ನು ಆಳಿದ ರಾಜಮಹಾರಾಜರ ವಿವರಣೆಯಿದೆ. ಅವರಲ್ಲಿ ಹರ್ಷದೇವ ಇಲ್ಲಿ ಪ್ರಸ್ತುತ; ಆತ ತನ್ನ ಬೊಕ್ಕಸ ಖಾಲಿಯಾದಾಗ ಸಂಪದ್ಭರಿತ ದೇವಸ್ಥಾನಗಳನ್ನು ಕೊಳ್ಳೆ ಹೊಡೆಯುತ್ತಿದ್ದನು. ಅದಕ್ಕಾಗಿಯೇ ಒಬ್ಬ ಅಧಿಕಾರಿಯನ್ನು

ನೇಮಿಸಿದ್ದನು. ಅವನ ಹೆಸರು 'ದೇವೋತ್ಪಾಟನ ನಾಯಕ', ಎಂದರೆ ದೇವಸ್ಥಾನಗಳ ಧ್ವಂಸಕ. ಇಂಥ ಧಾಳಿಯಲ್ಲಿ ಎಂತೆಂಥ ಕಲಾನಿಧಿ, ಸೌಂದರ್ಯಮಯ ದೇವಸ್ಥಾನಗಳು ನಾಶವಾದವೋ ! ಆದಿ ಶಂಕರಾಚಾರ್ಯ ಪರಮತ ಸಹಿಷ್ಣುತೆ ಇಲ್ಲದೆ ಬೌದ್ಧ ವಿಗ್ರಹಗಳನ್ನು ಒಡೆದರೆ, ಹರ್ಷಮಹಾರಾಜನು ಐಶ್ವರ್ಯಕ್ಕಾಗಿ ದೇವಸ್ಥಾನಗಳನ್ನು ಹಾಳುಮಾಡಿದನು. ಇಬ್ಬರಿಗೂ ಏನೂ ವ್ಯತ್ಯಾಸವಿಲ್ಲ. ಒಬ್ಬರು ವೈದಿಕ ಧರ್ಮ ರಕ್ಷಣೆಯ ಹೆಸರಲ್ಲಿ ಧ್ವಂಸ ಮಾಡಿದರು, ಇನ್ನೊಬ್ಬರು ರಾಜ್ಯ ನಡೆಸುವುದಕ್ಕಾಗಿ ಕೊಳ್ಳೆ ಹೊಡೆದರು. ಒಟ್ಟಿನಲ್ಲಿ ಯಾವುದೇ ಕಾಲದ ಮಾನದಂಡ ಗಳಿಂದ ನೋಡಿದರೂ ಅವು ಅನಾಗರಿಕ ಕ್ರಮಗಳು.

''ಅವಿದ್ಯಾವಂತರೋ, ಅನಾಗರಿಕರೋ ಮಾಡಿದ್ದರೆ ಅದನ್ನು ಅವಿವೇಕವೆಂದು ತಳ್ಳಿಹಾಕಬಹುದಿತ್ತು; ಆದರೆ ಪರಮತ ದ್ವೇಷ ಆಚರಿಸಿದವರು ಅದ್ವೈತಿಯಾದ ಶಂಕರಾಚಾರ್ಯರು ಮತ್ತು ಜನರಿಗೆ ಮಾದರಿಯಾಗ ಬೇಕಾದ ರಾಜ ಹರ್ಷ! ಆದ್ದರಿಂದಲೇ ಈಗ ಹಿಂಸಾಚಾರ ಭಾರತದ ಕಾಲಧರ್ಮವಾಗಿಬಿಟ್ಟಿದೆ!'' ಎಂದು ಅವರು ಕುಳಿತ ಕಡೆ ನೋಡಿದಾಗ ಅವರು ಅಗೋಚರವಾಗಿದ್ದರು.

ಕನಸಿನ ರಾಜ್ಯದಲ್ಲಿ ಅಲೆಯುತ್ತಿದ್ದ ನನ್ನ ಮನಸ್ಸು ಜಾಗ್ರತಾವಸ್ಥೆಗೆ ಮರಳಿ, ಆ ಪ್ರತಿಮೆಯ ಕಡೆ ನೋಡಿದೆ.

''ಹಾಗಾದರೆ ಇಲ್ಲಿಯವರೆಗೆ ಯಾರನ್ನು ಮಾತನಾಡಿಸಿದೆ?'' ನನ್ನನ್ನು ನಾನೇ ಪ್ರಶ್ನಿಸಿಕೊಂಡೆ.

ನಗರದ ಗೊಂದಲ ಗಡಿಬಿಡಿಯಿಂದ ದೂರವಿದ್ದ ಆ ಕಲಾಶಾಲೆಯಲ್ಲಿ ಯಾರು ಉತ್ತರ ಕೊಡಬೇಕು ನನಗೆ!

ಸ್ತ್ರೀ-ಪುರುಷ, ಪ್ರಾಣಿ-ಪಕ್ಷಿ, ಪೂರ್ಣ-ಅಪೂರ್ಣ, ಸಾಮಾನ್ಯ-ಅಪೂರ್ವ, ಈ ಎಲ್ಲಾ ಬಗೆಯ ಕಂಚು, ತಾಮ್ರ, ಮೃತ್ತಿಕೆ, ಪ್ಲಾಸ್ಟರ್ ಆಫ್ ಪ್ಯಾರಿಸ್ ಪ್ರತಿಮೆಗಳು ತುಂಬಿದ್ದ ಕಲಾಶಾಲೆಯಲ್ಲಿ....

ಇವುಗಳ ಮಧ್ಯೆ ಕುಳಿತು, ಒಂದೇ ಹಾರಿಗೆ ಹದಿನೈದು ಶತಮಾನಗಳ ಹಿಂದೆ ಹೋಗಿ ಬೌದ್ಧಯುಗದ ಕನಸೊಂದನ್ನು ಕಂಡೆ....

ಅಷ್ಟುಹೊತ್ತಿಗೆ ಕಲಾಶಾಲೆಯ ಮುಂಬಾಗಿಲಿನಿಂದ ಶ್ರೀ ಕುಪ್ಪಾಚಾರಿಯವರು ಒಳಬರುತ್ತಿದ್ದರು.

[ಆಧಾರ : ಕರ್ನಾಟಕದಲ್ಲಿ ಬೌದ್ಧ ಸಂಸ್ಕೃತಿ (ಡಾ|| ಪಾಳ್ಯದ ವಸಂತಕುಮಾರ್), The Buddhist Antiquities of Nagarjuna Konda (A. H. Longhurst), ಕಲ್ಹಣನ ರಾಜ ತರಂಗಿಣಿ (ಅನು: ನೀರ್ಪಾಜೆ ಭೀಮಭಟ್ಟ), ಇತ್ಯಾದಿ]

ಎಂ. ಆರ್. ರಂಗನಾಥ
ನಂ ೩೬, 'ನಿಸರ್ಗ', ೧ನೇ ಮುಖ್ಯರಸ್ತೆ
ಹೊಸಕೆರೆಹಳ್ಳಿ, ಬನಶಂಕರಿ ೩ನೇ ಹಂತ
ಬೆಂಗಳೂರು- ೫೬೦ ೦೮೫

# ಬೇಟೆ

ಮುಂಜಾನೆ:
ಆಕಾಶ, ಸೂರ್ಯನಕುದುರೆಯ ಕೆಳಹೊಟ್ಟೆಯ ಮೃದುನೀಲಿ,
ಸುತ್ತಲೂ ಸೀಬೆಯ, ಸೀತಾಫಲದ ಮರಗಳು, ಗಿಳಿಗರಿ ಹಸಿರು
ಉಳಿದಿರುವ ಒಂಟಿ ತಾರೆ
ಯಾವುದೋ ಹಳ್ಳಿಯ ಮದುವೆಮಂಚದ ರತಿಚಕಿತ ಹುಡುಗಿಯ ಹಾಗೆ
ಅಥವಾ,
ಸಾವಿರ ಸಂವತ್ಸರದಾಚೆ ಆ ಈಜಿಪ್ಷಿಯನ್ ಹುಡುಗಿ
ನನ್ನ ನೈಲ್-ನೀಲಿ ದ್ರಾಕ್ಷಾರಸದ ಬಟ್ಟಲಿನಲ್ಲಿ
ಅದ್ದಿದ ಎದೆ ನಡುವಿನ ಹವಳದ ಹಾಗೆ
ಹಾಗೆ ಮಿರುಗಿದೆ ಈ ಗಗನದಲ್ಲಿ ಒಂಟಿ ನಕ್ಷತ್ರ.

ಬಯಲು ಸೀಮೆಯಿಂದ ಬಂದ ಕೂಲಿಕಾರರು
ಶೀತಲ ರಾತ್ರಿಯಲ್ಲಿ ಉರಿಸುತ್ತಿರುವ ಗುಲ್‌ಮೊಹರ್ ಬೆಂಕಿ
ಇನ್ನೂ ಉರಿಯುತ್ತಿದೆ,
ಒಣಗಿದ ಅರಳಿಯ ಎಲೆಗಳಿಗೆ ಹೊಸಹೊಸ ಆಕಾರ.

ಸೂರ್ಯನ ಬೆಳಕಿನಲ್ಲಿ ಈಗ ಅದು ಕುಂಕುಮಕೆಂಪಲ್ಲ,
ರೋಗಗ್ರಸ್ತ ಪಕ್ಷಿಯ ಹೃದಯದ
ಕರಗುವ ಬಯಕೆಯ ನಸುಹಸಿರು
ಹಗಲಿನ ಬೆಳಕಿನಲ್ಲಿ ಆಕಾಶ ಮತ್ತು ಮಂಜು ತುಂಬಿದ ಕಾಡುಗಳು
ಹೊಳೆಯುತ್ತಿವೆ,
ನವಿಲುರೆಕ್ಕೆಯ ಹಾಗೆ.

ಮುಂಜಾನೆ:
ರಾತ್ರಿಯೆಲ್ಲಾ ಒಂದು
ಚಪಲ ಚಂಚಲ ಕಂದು ಪುರುಷ ಹರಿಣ
ಓಡಿದೆ, ನೆಗೆದಿದೆ,
ಸುಂದರಿಯಿಂದ ಅರ್ಜುನ ಅರಣ್ಯದ
ಚಿಕ್ಕೆಯಿಲ್ಲದ ಕಡುಗಪ್ಪು ರಾತ್ರಿಯಲ್ಲಿ
ಸಿಕ್ಕಕೂಡದು ಚಿರತೆ ತೆಕ್ಕೆಯಲ್ಲಿ.

ಅವನ ನಿರೀಕ್ಷೆಯೂ ಈ ಹಗಲಿಗಾಗಿ
ಅದರ ಬೆಳಕಿನ ಒಡಲು ಅವನ ಹಾದಿ
ಇಗೊ ಬಂದ



ಹಸಿ ಹಸಿರು ಹುಲ್ಲ ಗರಿ ಹಲ್ಲುಗಳ ನಡುವೆ
ಹಸಿರು ದ್ರಾಕ್ಷಿಯ ಹಣ್ಣುಹಸಿರು ಹೀಗೆ
ಇಗೊ ಅವನು ಬಂದ
ನದಿನೀರಿನ ಸುಡು ಶೀತಲ ಅಲೆಗಳ ಕಡೆಗೆ
ಎವೆ ಮುಚ್ಚದೆ ಬಳಬಳಲಿದ ನಸು ಬೆಚ್ಚಿದ
ಇಡೀ ದೇಹವನ್ನು
ಹರಿಯುವ ಹೊಳೆಯಲಿ ಮುಳುಗಿಸಿ ಮೈಮರೆಯುವ ಕಡೆಗೆ
ರಾತ್ರಿಯ ರಸರಹಿತ ಶೀತಲ ಗರ್ಭದಿಂದ
ಹಗಲು ಜಗಿಯುವ ರೋಮಾಂಚನಕ್ಕೆ ವಶವಾಗುವ ಬಯಕೆ
ಈ ನೀಲಿಯ ಕೆಳಗೆ ಬಂಗಾರದ
ಸೂರ್ಯಶಲಾಕೆಯಂತೆ ಚಿಮ್ಮಿದರೆ
ಆ ಶಕ್ತಿಗೆ ಆ ಚೆಲುವಿಗೆ ಆ ಬಯಕೆಗೆ ಮೈಮರುಳು
ಹರಿಣಿ ಹರಿಣಿ ಹರಿಣಿ.

ಅಪರಿಚಿತ ಸದ್ದು.
ನದಿಯ ನೀರು ಹಾಲವಾಣದ ಹೂಕೆಂಪು
ಮತ್ತೊಮ್ಮೆ ಬೆಂಕಿಕಿಡಿ ಸಿಡಿತ
ಬಿಸಿಬಿಸಿ ಬಡಿಸಿದ ಜಿಂಕೆಯ ಮೈಮಾಂಸ

ನಕ್ಷತ್ರಗಳ ಕೆಳಗೆ, ಹುಲ್ಲುಹಾಸಿನ ಮೇಲೆ
ಹಳೆಯ ಬೇಟೆಗಳ ಮಂಜುಮರೆ ಕಥೆಗಳು,
ಸಿಗರೇಟಿನ ಹೊಗೆ,
ಅನೇಕ ಮನುಷ್ಯರು, ನೀಟಾಗಿ ತೆಗೆದ ಬೈತಲೆ.
ಅಲ್ಲಿ ಇಲ್ಲಿ ಬಂದೂಕುಗಳು.
ಶಾಂತ, ಶೀತಲ, ಅಳುಕಿಲ್ಲದ ನಿದ್ದೆ.

ಮೂಲ ಬಂಗಾಳಿ: ಜೀವನಾನಂದ ದಾಸ್ (೧೮೯೯-೧೯೫೪)
ಇಂಗ್ಲಿಷ್ ಅನುವಾದ: ಕ್ಲಿಂಟನ್ ಬಿ. ಸೀಲಿ
ಕನ್ನಡಕ್ಕೆ: ಎಚ್. ಎಸ್. ರಾಘವೇಂದ್ರ ರಾವ್
೭, 'ಶ್ರೀಮಾತ', ೧೫ನೇ ಅಡ್ಡರಸ್ತೆ
೫ನೇ ಫೇಸ್, ಜೆ. ಪಿ. ನಗರ
ಬೆಂಗಳೂರು - ೫೬೦ ೦೭೮

# ಮೂಕ ವೇದನೆ


ತಮಿಳು ಮೂಲ : ಅನುರಾಧ ರಮಣನ್

ಅನುವಾದ : ಕೆ. ಕರುಣಾಕರ


ಅಂದು ಗೌತಮ ಮುನಿಯ ಗುಡಿಸಲಿನಲ್ಲಿ ಬೆಳಕಾಗುವುದಕ್ಕಿಂತ ಮುಂಚೆ ಅಹಲ್ಯೆಗೆ ಉಂಟಾದ ವಿಪತ್ತು ಇಂದು ಭಾಗೀರಥಿಗೆ ಸಂಭವಿಸಿತು. ಸಮಯ, ಘಳಿಗೆ, ವ್ಯಕ್ತಿಗಳು ಮಾತ್ರ ಬೇರೆ ಬೇರೆ, ಸಂಭವ ಮಾತ್ರ ಒಂದೇ ಆಗಿತ್ತು. ಅಹಲ್ಯೆಯ ಹಾಗೆ ತನ್ನ ಗಂಡನಿಗೂ ಅನ್ಯಪುರುಷನಿಗೂ ವ್ಯತ್ಯಾಸ ತಿಳಿಯದ ಮುಗ್ಧ ಹೆಂಗಸಾಗಿದ್ದಳು ಭಾಗೀರಥಿ. 'ಕುಲಗೆಟ್ಟವನೆ ನೀನು ಹಾಳಾಗಲಿರುವೆ', ಅವಳು ಕೋಪದಿಂದ ಶಪಿಸಿದಳು. ಇನ್ನು ಮೇಲೆ ಶಪಿಸಿ ಪ್ರಯೋಜನವಿಲ್ಲ, ಶಾಪ ಕೊಟ್ಟುದುದರಿಂದ ಭಾಗೀರಥಿಯ ಮಾನ ಮರಳಿ ಬರುವುದೇ?

ಮನುಷ್ಯನನ್ನು ಹಿಡಿದು ನುಂಗಿ ತೇಗುತ್ತಿರುವ ರಾಕ್ಷಸನಂತೆ ಕೋಣೆಯಲ್ಲಿ ಮನೆಯ ಮೇಲ್ಛಾವಣಿ ತಗಲುವಂತೆ ನಿಂತುಕೊಂಡಿದ್ದ ಅಂತೋಣಿ.

ಆತನ ಆರು ತಿಂಗಳ ಆಶೆ ಇಂದು ನೆರವೇರಲಿತ್ತು.

ಆರು ತಿಂಗಳ ಹಿಂದೆ ಕಣ್ಣು ತುಂಬಾ ಕನಸುಗಳೂ ಹೃದಯ ತುಂಬಿದ ಆಶೆಗಳಿಂದಾಗಿ ರಘುಪತಿ ಭಟ್ಟನ ಪತ್ನಿಯಾಗಿ ಆ ಊರಿಗೆ ಬಂದಿದ್ದಳು ಭಾಗೀರಥಿ. ಆದರೆ ಕನಸಿನಲ್ಲಿಯೂ ಕಲ್ಪಿಸಲಾಗದ ಆ ಘೋರವಾದ ದುರ್ಘಟನೆ ಸಂಭವಿಸಿತು.

ಅಂತೋಣಿ ಸವಾಲು ಹಾಕಿದ ಯಾವ ಕಾರ್ಯವೂ ಈವರೆಗೆ ನೆರವೇರದೇ ಇರುತ್ತಿರಲಿಲ್ಲ. ಆ ಪುಟ್ಟ ಗ್ರಾಮದಲ್ಲಿ ಇರುವ ಮೂರು ಅಂತಸ್ತಿನ ಮಹಡಿ ಮನೆ ಎಂದರೆ ಅದು ಅಂತೋಣಿಯದಾಗಿತ್ತು. ಕತ್ತಿನಲ್ಲಿ ಬೆರಳಷ್ಟು ಗಾತ್ರದ ಚಿನ್ನದ ಸರವಿರುವ, ಸೊಂಟದಲ್ಲಿ ಹಸನಾದ ಚರ್ಮದ ಬೆಲ್ಟ್ ಧರಿಸಿದ ಅವನು ಬೆಳಗಿನ ಹೊತ್ತಿನಲ್ಲಿ ಹಳ್ಳಿ ಬಂದೂಕಿಗೆ ಮಸಲು ತೋಟ ತುಂಬುವಾಗ ಇತರ ಯಾವ ಗಂಡಸರಾದರೂ ಆ ದಾರಿಯಲ್ಲಿ ಅಡ್ಡಾಡಲು ಅಂಜುತ್ತಿದ್ದರು.

ಸಮೀಪದಲ್ಲಿ ಹರಿಯುತ್ತಿದ್ದ ಕಾವೇರಿ ನದಿಗೆ ಹೋಗಲಿರುವ ಆ ಬೀದಿಯ ಹೆಂಗಸರು ಸುತ್ತಿ ಬಳಸಿ ಮೂಗು ಹಿಡಿಯುವಂತೆ ನಾಲ್ಕೈದು ಹಾದಿಗಳನ್ನು ಸುತ್ತಿ ಹೋಗುತ್ತಿದ್ದರು, ಅವನೆಂದರೆ ಅಷ್ಟೊಂದು ಭೀತಿಯಾಗಿತ್ತು.



ಪೆದ್ದಿ ಭಾಗೀರಥಿ ಮಾತ್ರ ಆತ ಜಗುಲಿಯಲ್ಲಿ ಕುಳಿತಿದ್ದಾಗಲೂ ಬಿಂದಿಗೆ ಹಿಡಿದುಕೊಂಡು ಕಾವೇರಿ ನದಿಗೆ ನಾಲ್ಕು ಐದು ಬಾರಿ ನಡೆದಿದ್ದಾಳೆ.

''ಲೋ ಮುತ್ತು, ನಮ್ಮ ಬೀದಿಯಲ್ಲಿ ಹೊಸದಾಗಿ ಕಾಲಿನಲ್ಲಿ ಮೆಟ್ಟು ಹಾಕಿಕೊಂಡು ಕತ್ತಿನಲ್ಲಿ ಹೊಸ ಅರಸಿನ ಹಾರ ಹಾಕಿಕೊಂಡು ಹೋಗೋವ್ರು ಯಾರೂ ಅದು?''

ಅಂತೋಣಿ ಕೆಲಸದ ಆಳಿನ ಬಳಿ ಒಮ್ಮೆ ವಿಚಾರಿಸಿದ.

''ರಘುಪತಿ ಭಟ್ಟರ ಹೆಂಡತಿ.''

ಅದೇ ದಿನ ಆಕೆಯನ್ನು ಏಕಾಂತವಾಗಿ ಸಂಧಿಸಬೇಕೆಂದು ನಿರ್ಧರಿಸಿದ. ಮಧ್ಯಾಹ್ನದ ಪೂಜೆಗೆ ದೇವಾಲಯಕ್ಕೆ ಭಟ್ಟ ಹೋದ ವೇಳೆಯಲ್ಲಿ ಅಂತೋಣಿ ಆ ಮನೆಯೊಳಗೆ ಸರ್ವಸ್ವತಂತ್ರನಾಗಿ ನುಸುಳಿದ.

ಭಾಗೀರಥಿ ತಲೆದಿಂಬಿಗೆ ಬದಲಾಗಿ ಬಾಗಿಲಿನ ಚೌಕಟ್ಟಿನ ಮರದಲ್ಲಿ ತಲೆಯಿಟ್ಟು ತೊಯ್ದ ಕೂದಲನ್ನು ಬಿಡಿಸಿಕೊಂಡು ನಿರ್ಭೀತಳಾಗಿ ಮಲಗಿಕೊಂಡಿದ್ದ ಸಮಯ. ಎದೆಯ ಮೇಲಿನ ಸೆರಗು ಅಸ್ತವ್ಯಸ್ತ. ಅಂತೋಣಿ ಕ್ಷಣದಲ್ಲಿ ಬಾಗಿಲಿನ ಕದವನ್ನು ದೂಡಿ ತಳ್ಳಿದ. ಆತನ ಆನೆಯ ಬಲದಲ್ಲಿ ಹದಿನೆಂಟರ ಭಾಗೀರಥಿಯು ಕೇವಲ ಕೋಳಿಮರಿಯಾಗಿದ್ದಳು.

ಅವನು ಬೆಲ್ಟನ್ನು ಸರಿಪಡಿಸಿಕೊಂಡು ಕಾಲಿನಲ್ಲಿ ಚಪ್ಪಲಿಯನ್ನು ಸಿಕ್ಕಿಸುವಾಗ ''ಓಂ... ಪೂರ್ಣಮಿದಂ... ಪೂರ್ಣಾತ್..'' ಎನ್ನುತ್ತ ಒಂದು ಕೈಯಲ್ಲಿ ಬಾದಾಮಿ ಎಲೆಯಿಂದ ಮುಚ್ಚಿದ ಕಂಚಿನ ಪಾತ್ರೆಯನ್ನು ಮತ್ತೊಂದು ಕೈಯಲ್ಲಿ ದೇವಾಲಯದ ಬೀಗದ ಕೈ ಹಿಡಿದು ರಘುಪತಿ ಭಟ್ಟ ಪ್ರತ್ಯಕ್ಷಗೊಂಡ.

ಕ್ಷಣದಲ್ಲಿಯೇ ಸಕಲವೂ ಸ್ಪಷ್ಟವಾಯಿತು. ಭಟ್ಟನ ಒಡಲೆಲ್ಲಾ ಬೆವರಿ ಶರೀರದಲ್ಲಿ ರೋಷದ ನಡುಕ ಹುಟ್ಟಿತು. ಅಂತೋಣಿ ಆತನನ್ನು ಎಳ್ಳಷ್ಟು ಲಕ್ಷಿಸದೆ ನಿಧಾನವಾಗಿ ಅಲ್ಲಿಂದ ಹೆಜ್ಜೆಯಿಟ್ಟ.

ಕೈಯಲ್ಲಿದ್ದ ಕಂಚಿನ ಪಾತ್ರೆಯನ್ನು ಕೆಳಗೆ ಇಡಲು ಮರೆತ. ಅಸ್ತವ್ಯಸ್ತದ ಒಡಲನ್ನೊತ್ತು ಮಲಗಿದ್ದ ಭಾಗೀರಥಿ, ಬಾಗಿಲಿನ ಸಮೀಪದ ಕತ್ತಲು ಪ್ರದೇಶವನ್ನು ದಿಟ್ಟಿಸುತ್ತ ನಿಂತ.

ದೀರ್ಘವಾಗಿ ಅಳುತ್ತ ''ಅಯ್ಯೋ ಅಯ್ಯೋ'' ಎಂದು ರೋದಿಸತೊಡಗಿದಳು - ಭಾಗೀರಥಿ.

'ಇವಳನ್ನು ಏನು ಮಾಡುವುದು? ಈ ಸುಡುತ್ತಿರುವ ಬಿಸಿಲಿನಲ್ಲಿ ದರದರನೆ ಎಳೆದುಕೊಂಡು ಹರಿಯುತ್ತಿರುವ ಕಾವೇರಿ ನದಿಗೆ ಬೀಸಾಡಲೇ?' ರಘುಪತಿಯ ಅಂತರಂಗದಲ್ಲಿ ಒಂದು ಆಂದೋಲನವುಂಟಾಗಿ ಕ್ಷಣದಲ್ಲಿ ಅದು ಅನಿವಾರ್ಯವಾಗಿ ಶಮನವಾಯಿತು.

ಆ ಚಂಡಾಲ ಮಾಡಿದ ಅಪರಾಧಕ್ಕೆ ಇವಳನ್ನು ಕೊಂದು ಏನು ಪ್ರಯೋಜನ. ಇನ್ನು ತಾನು ಅವಳೊಡನೆ ಸಂಸಾರ ನಡೆಸಲು ಸಾಧ್ಯವೆ? ತನ್ನಿಂದ ಇದು ಸಾಧ್ಯವೆ? ಅವಳ ಜೊತೆಯಲ್ಲಿ ತಾನು ಹೇಗೆ ಸಮಾಧಾನದಿಂದ ಜೀವಿಸಿರಲು ಸಾಧ್ಯ; ಸಮಾಜ ತನ್ನನ್ನು ಲೇವಡಿ ಮಾಡಬಹುದಲ್ಲವೆ!

ದಿಗ್ಭ್ರಾಂತಿಗೊಂಡು ನಿಂತಿದ್ದ ರಘುಪತಿ.

''ಅಯ್ಯೊ ಒಂದು ಕ್ಷಣ ಹಿಂದೆ ನೀವು ಬಂದಿರಬಾರದಿತ್ತೆ...''

ಸಮಾಧಾನಪಡಿಸಲು ಅಸಾಧ್ಯವಾದ ಒಂದು ಸಣ್ಣ ಕೂಸಿನಂತೆ ಕೂಗುತ್ತಾ ಆತನನ್ನು ಆಲಂಗಿಸಿದಳು. ಒಡಲನ್ನು ಹೊಲಸಿನಲ್ಲಿ ಅದ್ದು ತೆಗೆದಂತೆ ಹೇಸಿಗೆಯಾಗತೊಡಗಿತು ಆತನಿಗೆ.

''ನೋಡು, ದೂರ ನಿಲ್ಲು'' ಅವನ ಶಬ್ದ ತನ್ನದಲ್ಲವೇ ಎಂದು ಸಂದೇಹ ಉಂಟಾಗದೇ ಇರಲಿಲ್ಲ. ಇಂದು ಬೆಳಗ್ಗಿನಿಂದಲೂ ಒಂದು ನೂಲು ಎಳೆಯಂತೆ ಸಹ ತನ್ನನ್ನು ಅಗಲಿರದ ಅವಳ ಪತಿ ಈಗ ಎಲ್ಲೋ ಎಟುಕದ ದಿಗಂತದಲ್ಲಿರುವಂತೆ ಭಾಸವಾಯಿತು ಭಾಗೀರಥಿಗೆ. ಆಕೆ ಮತ್ತೂ ಜೋರಾಗಿ ಅಳಲು ಶುರುಮಾಡಿದಳು.

ಆತನ ದೃಷ್ಟಿ ಕಠಿಣವಾಗತೊಡಗಿತು.

''ನನ್ನನ್ನು ಹಾಗೆ ನೋಡ್ಬೇಡಿ, ನಂಗೆ ಭಯವಾಗ್ತಿದೆ.'' ಮಗುವಿನಂತೆ ಬೇಡಿದಳು.

''ನಡೀ ಹೊರಗೆ.''

ಆತ ಬೊಬ್ಬೆ ಹಾಕಿದಾಗ ಅವಳು ಬೆಚ್ಚಿದಳು.

''ನಿಜ. ಇನ್ಮೇಲೆ ಇಬ್ಬರೂ ಕೂಡಿ ಒಂದು ಮನೆಯಲ್ಲಿ ಇರಲು ಸಾಧ್ಯವಿಲ್ಲ. ರಾತ್ರಿಯಲ್ಲೇ ಈ ಮನೆ ಬಿಟ್ಟು ಎಲ್ಲಿಗಾದರೂ ಹೊರಟುಹೋಗ್ತೇನೆ. ಎಲ್ಲಿಗೇಂತ ಹೇಳಲು ನನ್ನಿಂದ ಆಗೋದಿಲ್ಲ, ಇನ್ಮೇಲೆ ಈ ಊರಿನಲ್ಲಿ ಒಂದು ಕ್ಷಣ ಕೂಡ ನಾನು ಇರಲಾರೆ...''

''ಹಾಗೆಲ್ಲಾ ಹೇಳ್ಬೇಡಿ. ನನಗೆ ನಿಮ್ಮನ್ನು ಬಿಟ್ಟರೆ ಇನ್ನಾರಿದ್ದಾರೆ? ನೀವೆ ನನ್ನ ಹಿಸುಕಿ ಕೊಂದುಹಾಕಿಬಿಡಿ, ಕೊಂದುಹಾಕಿಬಿಡಿ.''

ಆಕೆಯ ಕಣ್ಣೀರು ಅವ್ಯಾಹತವಾಗಿ ಹರಿಯಿತು. ಆತನ ಕಾಲನ್ನೂ ಬಲವಾಗಿ

ಹಿಡಿದುಕೊಂಡು ಬಿಕ್ಕುತ್ತಿದ್ದಳು. ಎದೆ, ತಲೆಯ ಮೇಲೆ ಕೈಬಡಿದುಕೊಂಡು ಜೋರಾಗಿ ಅಳತೊಡಗಿದಳು.

'ಇವರಿಂದ ಇಷ್ಟೆಲ್ಲಾ ಮಾತನಾಡಲು ಹೇಗೆ ಸಾಧ್ಯವಾಯಿತು? ಇವರನ್ನು ಬಿಟ್ಟರೆ ಈ ಊರಿನಲ್ಲಿ ನನಗೆ ಇನ್ನು ಯಾರು ಗೊತ್ತಿದ್ದಾರೆ, ಅಯ್ಯೋ ದೇವರೆ, ಇದೇನು ಶೋಧನೆ!'

ಮನಸ್ಸು ಮಂತ್ರಿಸಿತು.

ಅಂದು ರಾತ್ರೋರಾತ್ರಿ ಮನೆಗೆ ಬೀಗ ಹಾಕಿ ಬೀದಿಗೆ ಇಳಿದು ನಡೆದನವನು. ರಘುಪತಿಭಟ್ಟನ ಕಾಲನ್ನು ಹಿಡಿದು ರೋದಿಸಿ ಬೇಡಿದ ಭಾಗೀರಥಿಯನ್ನು ಜಾಡಿಸಿ ಮುಂದೆ ನಡೆದ ಆತ. ಊರಿನ ಹಿರಿಯ ವ್ಯಕ್ತಿಗಳು ಯಾರೂ ಆ ವಿಷಯದಲ್ಲಿ ಬಾಯಿ ಬಿಚ್ಚಲು ತಯಾರಿರಲಿಲ್ಲ. ಊರಿನ ಹಿರಿಯ ವ್ಯಕ್ತಿ ಎಂದರೆ ಆತ ಅಂತೋಣಿಯೇ ಆಗಿದ್ದ.

ಅನಾಥೆಯಾದ ಭಾಗೀರಥಿ ಅದೆಷ್ಟು ದಿನ ತಾನೆ ಜಗುಲಿಯಲ್ಲಿ ಮಲಗಿರುವಳು? 'ಇಷ್ಟಾದ ಮೇಲೆ ಯಾಕಾಗಿ ಬಾಳಬೇಕು, ಸಾಯುವುದೇ ಲೇಸಲ್ಲವೆ?' ಇದು ಊರಿನ ಹೆಂಗಸರ ವಿಮರ್ಶೆಯಾಗಿತ್ತು.

ಸ್ವಲ್ಪ ದಿನ ದೇವಾಲಯದ ಹೊರಗಡೆ ವಾಸ ಮಾಡಿದಳು. ನಂತರ ಸ್ವಲ್ಪ ದಿನ ಅಂಚೆ ಕಛೇರಿ ಗತಿಯಾಯಿತು. ಹೋದವನಿಂದ ಏನಾದರೂ ವಿಷಯ ಬರಬಹುದೇ ಎಂದು ನಿರೀಕ್ಷಿಸುತ್ತಿದ್ದಳು.

ಆ ಊರಿನವರು ತಮ್ಮ ತಮ್ಮ ಹೆಂಡತಿಯರನ್ನು ನಿಂದಿಸುವಾಗ ಹೇಳುತ್ತಿದ್ದರು : 'ಭಾಗೀರಥಿಯ ಹಾಗೆ ಎಂದಾದರೂ ಒಂದು ದಿನ ಮನೆಯಿಂದ ಹೊರಗೆ ದೂಡುತ್ತೇನೆ ನೋಡು' ಎಂದು.

ಅಂದು -

ದೀರ್ಘವಾಗಿ ಯೋಚಿಸಿ ಒಂದು ನಿರ್ಧಾರಕ್ಕೆ ಬಂದಳು. ತನ್ನ ಚಿಕ್ಕ ಬಟ್ಟೆಯ ಚೀಲವನ್ನು ಹಿಡಿದುಕೊಂಡು ಅಂತೋಣಿಯ ಮನೆಯ ಬಾಗಿಲಿನ ಬಳಿ ಮೌನವಾಗಿ ಬಂದು ನಿಂತಳು. ಬಂದೂಕನ್ನು ಒರೆಸುತ್ತಾ ಕುಳಿತವನು ಯಾವುದೋ ನೆರಳು ಕಂಡು ತಲೆ ಎತ್ತಿ ನೋಡಿದ. ಆಕೆಯ ಕಣ್ಣಿನ ಹುಬ್ಬುಗಳು ಎರಡು ದೊಡ್ಡ ಕಂಬಳಿ ಹುಳುಗಳಂತೆ ನಿಮಿರಿ ನಿಂತಿರುವುದನ್ನು ಗಮನಿಸಿದ ಆತ ಬೆಚ್ಚಿಬಿದ್ದ.

ಎದುರು ನಿಂತವಳ ನೋಟ, ಅದು ನೋಟವಾಗಿರಲಿಲ್ಲ. ಈ ದೃಷ್ಟಿಯನ್ನು ಅಂದೊಮ್ಮೆ ಆತ ಯಾಕೆ ಗಮನಿಸದೇ ಹೋದ. ಮೆಲ್ಲನೆ ಬಂದೂಕನ್ನು ಗೋಡೆಗೆ ಒರಗಿಸಿ ಎದ್ದು ನಿಂತ.

ಇದುವರೆಗೆ ತನ್ನಿಂದ ಹಾಳಾದ ಯಾವ ಹೆಣ್ಣುಗಳೂ ಇವಳ ಹಾಗೆ ಈಟಿಯಿಂದ ಇರಿಯುವಂತೆ ದೃಷ್ಟಿಯನ್ನು ಬೀರುತ್ತಾ ಮನೆಯ ಬಾಗಿಲಿನಲ್ಲಿ ಬಂದು ನಿಂತಿರಲಿಲ್ಲ.

''ನಾನು ಇನ್ನು ಮೇಲೆ ಇಲ್ಲೇ ಇರ್ತೇನೆ''. ಕಂಠ ಗಡುಸಾಗಿತ್ತು. ಅವಳು ದಡದಡನೆ ಒಳಗೆ ಹೆಜ್ಜೆ ಇಡುತ್ತಾ ಹೋದಳು. ಆಳು ಮರುದಮುತ್ತು ತೆರೆದ ಬಾಯಿಯನ್ನು ಮುಚ್ಚದೆ ಗರ ಬಡಿದವನಂತೆ ದಿಟ್ಟಿಸಿ ನೋಡುತ್ತಲಿದ್ದ.

''ಈ ಮನೆಯಲ್ಲಿ ಇನ್ನಾರು ಹೆಂಗಸರು ಇಲ್ಲಮ್ಮ.'' ಕ್ಷಣ ಬಿಟ್ಟು ಸ್ವಲ್ಪ ಧೈರ್ಯ ಮಾಡಿಕೊಂಡು ಹೇಳಿದ ಮರುದಮುತ್ತು.

''ಗೊತ್ತು...'' ಎಂದು ಪಡಿನುಡಿಯುತ್ತಾ ಎರಡನೇ ಕೊಠಡಿಯ ಬಾಗಿಲು ದಾಟಿದಳು.

ಹೆಗಲಿನ ಮೇಲೆ ಬಂದೂಕನ್ನಿರಿಸಿ ಬಂದ ಅಂತೋಣಿಯನ್ನು ಎರಡನೇ ಕೋಣೆಗೆ ಹೆಜ್ಜೆ ಇಡಲು ನಿಷೇಧಿಸಿ ತಡೆದು ನಿಲ್ಲಿಸಿದಳು.

''ಅಲ್ಲೇ ನಿಲ್ಲು, ಈ ಬಾಗಿಲು ದಾಟಿ ಈ ಕಡೆ ಹೆಜ್ಜೆ ಇಡಬಾರದು. ಯಾವ ಕಾರಣದಿಂದಲೂ ಬರಬಾರದು. ಒಳಗೆ ಬಂದರೆ ಮತ್ತೆ ನನ್ನ ಶವವನ್ನು ನೋಡ್ತಿಯಾ.''

ಮಂತ್ರಮುಗ್ಧನಾದವನಂತೆ ಅಲ್ಲೇ ನಿಂತ ಅಂತೋಣಿ.

ಹೆಂಡತಿ ಮಕ್ಕಳಿಲ್ಲದೆ ಒಂಟಿ ಕಾಡು ರಾಜನಂತೆ ಬಾಳಿಕೊಂಡಿದ್ದ ಅಂತೋಣಿಯ ಮನೆಯೊಳಗೆ ಯಾವ ಧೈರ್ಯದಿಂದ ನುಸುಳಿದಳು ಆಕೆ!

ಅವಳಿಗೆ ಅಡಿಗೆ ಮಾಡಿ ತಿನ್ನಲು ಬೇಕಾದ ಪಾತ್ರ ಸಾಮಗ್ರಿಗಳನ್ನು ಅಂತೋಣಿ ತಂದುಕೊಟ್ಟನು. ದಿನಕ್ಕೆ ಎರಡುವೇಳೆ ಕಾವೇರಿಗೆ ಹೋಗಿ ಮಿಂದು ನೀರು ತರುತ್ತಿದ್ದ ಭಾಗೀರಥಿ ಈಗ ಯಾರ ಎಲುಬಿಲ್ಲದ ನಾಲಗೆಗಳನ್ನೂ ಲಕ್ಷಿಸುತ್ತಿರಲಿಲ್ಲ. ಕಾವೇರಿಯಿಂದ ಸ್ನಾನ ಮಾಡಿ ನೀರು ತರುವಾಗಲೇ ತೋಟದಿಂದ ಸ್ವಲ್ಪ ದಾಸವಾಳ ಹೂಗಳನ್ನು ಹಿಡಿದುಕೊಂಡೇ ಒಳಗೆ ಬರುತ್ತಿದ್ದಳು. ಅಂತೋಣಿಯ ಮನೆಯ ನಡುಕೋಣೆ ಯಲ್ಲಿ ಅಮೃತಶಿಲೆಯ ದೊಡ್ಡದಾದ ಮೇರಿ ತಾಯಿಯ ಪ್ರತಿಮೆ ಇದ್ದಿತು. ಎರಡು ಹೂಗಳನ್ನು ಅದಕ್ಕೆ ಅರ್ಪಿಸಿ ತನ್ನ ಕೋಣೆಗೆ ಹೆಜ್ಜೆಯಿಡುತ್ತಿದ್ದಳು.

ಅಂತೋಣಿ ನಡುಕೋಣೆಯಲ್ಲಿ ಕುಳಿತಿದ್ದರೂ ಕೂಡ ಅವನನ್ನು ನೋಡುತ್ತಿರಲಿಲ್ಲ ; 'ನಿನ್ನತ್ರ ನನಗೇನು ಮಾತು', ಎಂಬಂತೆ.

ಅಂದೊಮ್ಮೆ ನಿಯಂತ್ರಿಸಲು ಆಗದೆ ಬಾಯಿಬಿಟ್ಟು ಕೇಳಿದನು :

''ಅಮ್ಮ... ಸ್ವಲ್ಪ ನಿಲ್ಲು !''

ಅವನ ಯಾವ ಮಾತಿಗೂ ಆಕೆ ಗೌರವ ಕೊಡದಿದ್ದರೂ 'ಅಮ್ಮ' ಎಂಬ ಎರಡು ಅಕ್ಷರಗಳು ಅವಳನ್ನು ತುಸು ತಡೆದು ನಿಲ್ಲಿಸಿತು.




''ನೀನು ಇಲ್ಲಿ ಇನ್ನೆಷ್ಟು ದಿನ ಇರ್ತೀಯಾ?''

'ಯಾಕಾಗಿ ಕೇಳ್ತೀಯಾ?' ಎಂಬ ಭಾವದಲ್ಲಿ ಆಕೆ ದಿಟ್ಟಿಸಿ ಆತನನ್ನು ನೋಡಿದಳು.

''ಊರಿನಲ್ಲಿ ನಿನ್ನನ್ನು ನನ್ನನ್ನು ಸೇರಿಸಿಕೊಂಡು ತುಂಬಾ ತುಂಬಾ ಬೇಡದ್ದು ಮಾತನಾಡುತ್ತಿದ್ದಾರೆ. ನಾನು ಅಂತಹ ಮಾತಿಗೆಲ್ಲಾ ಹೆದರುವವನಲ್ಲ. ಅನಾವಶ್ಯಕವಾಗಿ ನಿನ್ನ ಹೆಸರು....''

''ನನ್ನ ಹೆಸರು ಕೆಡಲು ಇನ್ನೇನೂ ಬಾಕಿ ಇಲ್ಲ. ಯಾವತ್ತು ನೀನು ನನ್ನ ಮುಟ್ಟಿದೆಯೋ ಅಂದೇ ಕೆಟ್ಟುಹೋಗಿದೆ. ಆದರೆ ಒಮ್ಮೆ ಕೆಸರಿನಲ್ಲಿ ಅರಿಯದೆ ಕಾಲು ಇಟ್ಟೆನೆಂದು ಪುನಃ ಆ ಕೊಚ್ಚೆಯಲ್ಲಿ ಬಿದ್ದು ಕೆಡಲು ನಾನು ಸಿದ್ಧಳಿಲ್ಲ. ಊರಿಗೆ ಊರೇ ಏನು ಬೇಕಾದರೂ ಆಡಿಕೊಳ್ಳಲಿ. ನಿನ್ನಿಂದಾಗಿ ಮಾತ್ರ ನನಗೆ ಈ ಗತಿ ಆಯಿತು. ನಿನ್ನೊಡನೆ ನನ್ನ ದೇಹ ಆ ವಿಷಘಳಿಗೆಯಲ್ಲಿ ಒಂದಾದ ತಪ್ಪಿಗೆ ದಂಡನೆಯನ್ನು ನನ್ನ ಪತಿ ಕೊಟ್ಟಾಯ್ತು. ನನ್ನನ್ನು ಮುಟ್ಟಿದ ಪಾಪವನ್ನು ಸ್ವಲ್ಪವಾದರೂ ನೀನು ಅನುಭವಿಸಬೇಡವೇ? ಅನುಭವಿಸು...'' ಅವಳು ಆವೇಶದಿಂದ ಹೇಳಿದಳು.

''ನಾನು ಇದನ್ನು ದಂಡನೆಯೆಂದು ನೆನೆಸಲಾರೆ. ನಾನು ಮಾಡಿದ ದೊಡ್ಡ ತಪ್ಪಿಗೆ ಕರ್ತನು ನನ್ನನ್ನು ಮನ್ನಿಸಲಾರ, ಆದರೆ ಅದಕ್ಕಾಗಿ ನನ್ನ ಮನೆಯಲ್ಲಿ ಎಷ್ಟು ದಿನವೆಂದು ಈ ಸೆರೆಮನೆ ವಾಸವನ್ನು ಅನುಭವಿಸುತ್ತಿಯಾ? ನಿನ್ನ ಗಂಡನನ್ನು ಹುಡುಕಿ ಅವನ ಹತ್ತಿರ ನಿನ್ನನ್ನು ಒಪ್ಪಿಸಿದರೆ...'' ಅಂತೋಣಿಯ ಕಣ್ಣುಗಳು ತುಂಬಿಬಂದವು. ಇಷ್ಟು ದೊಡ್ಡ ದೇಹದ ವ್ಯಕ್ತಿ ಸಣ್ಣ ಮಗುವಿನಂತೆ ಬಿಕ್ಕಳಿಸುವುದನ್ನು ಒಂದು ಥರ ತೃಪ್ತಿಯಿಂದ ನೋಡುತ್ತಾ ನಿಂತಳು ಆಕೆ.

''ಏನು, ಅವರನ್ನು ಹುಡುಕಿ ತಂದು ನನ್ನ ಬಳಿ ಒಪ್ಪಿಸಿದರೆ ಅವರು ಸುಲಭವಾಗಿ ಸಕಲವನ್ನು ಮರೆತು ನನ್ನನ್ನು ಸ್ವೀಕರಿಸುತ್ತಾರೆಂಬ ಹಾಗೆ! ನಾನು ಸುಲಭವಾಗಿ ಇಷ್ಟು ಅಪರಾಧಗಳನ್ನು ದೂಡಿಕೊಂಡು ಅವರೊಡನೆ ಹೊರಟುಹೋಗುವೆನೆಂಬಂತೆ ಹೇಳುತ್ತಿದ್ದೀಯಲ್ಲ. ಆ ಕಾಲದಲ್ಲಿ ಅಶೋಕವನದಲ್ಲಿ ಸೆರೆ ಇಟ್ಟಿದ್ದ ಸೀತಾದೇವಿಯನ್ನು ಬಿಡಿಸಿ ಅಯೋಧ್ಯೆಗೆ ಕರೆದುಕೊಂಡು ಬಂದ ರಾಮನ ಸಂದೇಹದಿಂದ ಪತ್ನಿಯನ್ನು ಅಗ್ನಿಸ್ನಾನ ಮಾಡಿಸಿದ್ದ ಹಾಗೆ ! ನಾನು ನಿನ್ನ ಮನೆಯಲ್ಲಿ ಒಂಟಿಯಾಗಿ ವಾಸಮಾಡಲು ಬಂದು ಒಂಬತ್ತು ವರ್ಷಗಳಾಯ್ತು. ಓರ್ವ ಸಾಮಾನ್ಯ ವ್ಯಕ್ತಿಯಾಗಿರುವ ಅವರು ನನ್ನನ್ನು ಹೇಗೆ ಸ್ವೀಕರಿಸುತ್ತಾರೆ...? ಇನ್ನು ನಾನು ಸಾಯೋವರೆಗೆ ಇದೇ ನನ್ನ ಮನೆ.''

ಅವಳು ವೇಗವಾಗಿ ಒಳಗೆ ಹೆಜ್ಜೆ ಇರಿಸಿದಳು. ಅವನನ್ನು ನೋಡಿ ಲೇವಡಿ ಮಾಡುವಂತೆ ಆಕೆಯ ಸೊಂಟದಲ್ಲಿದ್ದ ತಣ್ಣೀರಿನ ಕೊಡ ತುಳುಕಿ ಬಿದ್ದು ನಕ್ಕಿತು. ಅವರಿಬ್ಬರ ಬಾಳು ಆ ಬೀದಿಯಲ್ಲಿರುವವರಿಗೂ ಮನೆ ಕೆಲಸದವನಿಗೂ ಒಂದು ತಮಾಷೆ. ಈರ್ವರೂ ಯಾವ ಬಂಧನದಲ್ಲೂ ಒಳಗಾಗದೆ ಬೇರೆ ಬೇರೆ ಕರ್ತವ್ಯನಿಷ್ಠರಾಗಿ ಬಾಳುತ್ತಿದ್ದರು.

''ಬಾಳೆಗೊನೆ ತೆಗೆದಿದ್ದೇನೆ ಧಣಿ...'' ಕೆಲಸದಾಳು ಅಂತೋಣಿಯ ಮುಂದೆ ಕಡಿದ ಹೂಬಾಳೆಯ ಗೊನೆಯನ್ನು ತಂದು ಇಟ್ಟನು.

''ಒಳಗೆ ಅಮ್ಮನ ಹತ್ತಿರ ತೆಗೊಂಡೋಗಿ ಕೊಡು.'' ಅಂತೋಣಿ ಜಗುಲಿಯಲ್ಲಿ ಕುಳಿತು ಗಂಭೀರವಾಗಿ ಹೇಳಿದ.

''ಅದೇ ಥರ ಗುತ್ತಿಗೆ ಹಣ, ಕಬ್ಬು ಮಾರಿದ ಹಣ ಎಲ್ಲವನ್ನೂ ಅಮ್ಮನತ್ರ ತಗೊಂಡ್ಹೋಗಿ ಕೊಡು.''

''ನನ್ನ ತಾಯೇ, ನಾನು ಮಾಡಿದ ಪಾಪಕ್ಕಾಗಿ ನನ್ನ ಉಸಿರನ್ನು ಬೇಕಾದರೂ ಕೊಡಲು ಸಿದ್ಧನಾಗಿದ್ದೇನೆ, ಸ್ವೀಕರಿಸು...'' ಎಂಬ ಭಾವದಲ್ಲಿ ಸರ್ವವನ್ನು ಆತ ಆಕೆಯ ಮುಂದೆ ಸಮರ್ಪಿಸತೊಡಗಿದನು.

'ನಾಶಗೊಂಡ ನನ್ನ ಜೀವ ಇದರಿಂದೆಲ್ಲಾ ತುಂಬಲಾರದು' ಎಂಬಂತೆ ಆಕೆ ಅವೆಲ್ಲವನ್ನು ಮುಟ್ಟದೆ ಕೊಠಡಿಯ ನಡುವಿನಲ್ಲಿದ್ದ ಮೇರಿಮಾತೆಯ ಪ್ರತಿಮೆಯ ಮುಂದೆ ಲೆಕ್ಕ ಮಾಡಿ ನೋಡಿ ತೆಗೆದಿಟ್ಟು, ''ಮರುದಮುತ್ತು, ಇವೆಲ್ಲವನ್ನು ಭದ್ರವಾಗಿ ಅಯ್ಯನವರ ಹತ್ತಿರ ಕೊಟ್ಟುಬಿಡು'' ಎಂದು ಹೇಳುತ್ತಾ ತನ್ನ ಕೋಣೆಯನ್ನು ಸೇರಿದಳು.

ಇವೆಲ್ಲಕ್ಕಿಂತಲೂ ದೊಡ್ಡ ಆಶ್ಚರ್ಯ ಭಾಗೀರಥಿ ಆ ಮನೆಯಲ್ಲಿ ಹೆಜ್ಜೆ ಇಟ್ಟಮೇಲೆ ಅಂತೋಣಿ ಯಾವ ಹೆಣ್ಣುಗಳನ್ನೂ ತಲೆ ಎತ್ತಿ ನೋಡದಿರುವುದು.

'ಎಷ್ಟು ವರ್ಷಗಳು ಇಂತಹ ಒಂಟಿ ಜೀವನ...'

'ಅಂತೋಣಿ ಹೆಂಡತಿ ಹೋಗ್ತಿದ್ದಾಳೆ...'

'ಅಂತೋಣಿ ಶಿಲುಬೆಯನ್ನು ಪೂಜೆ ಮಾಡ್ತಾನೆ, ಇವಳು ವರಲಕ್ಷ್ಮಿ ಪೂಜೆ ಮಾಡ್ತಾಳಂತೆ ಕಣೋ...'

ಈ ಮಾತೆಲ್ಲವೂ ಇವರ ಕಿವಿಗಳಲ್ಲೂ ಬೀಳುತ್ತಿದ್ದವು. ಅವೆಲ್ಲವನ್ನೂ ಸಹಿಸಬೇಕಾಗಿದ್ದರೆ ದೃಢವಾದ ಮನಶ್ಶಕ್ತಿ ಇರಬೇಕು.

'ನಾನೇ ಇದೆಲ್ಲವನ್ನು ಸಹಿಸಬೇಕು. ನನ್ನ ಹಣೆಬರಹ. ಇವನಿಗೇನು, ಮರುದಮುತ್ತುವಿಗೆ ಹೇಳಿ, ಸತ್ತ ಇಲಿಯನ್ನು ಹೊರಗೆ ಬಿಸಾಡುವಂತೆ ನನ್ನ ಕತ್ತುಹಿಡಿದು ಹೊರಗೆ ದೂಡಿ ಮೊದಲಿನಂತೆ ಕುಡಿದು ಕುಪ್ಪಳಿಸಿ ಆಡಂಬರದಿಂದ ಅನ್ಯ ಸ್ತ್ರೀಯರೊಡನೆ ಭೋಗ ಜೀವನದಲ್ಲಿ ಇರಬಹುದಿತ್ತಲ್ಲ. ಇವನು ಯಾಕೆ ನನ್ನ ಮಾತನ್ನು ಮೀರೋದಿಲ್ಲ?' ಯೋಚನೆ ಮಾಡುತ್ತಿದ್ದ ಆಕೆಗೆ ತನ್ನ ಗಂಡನು ಮನೆಯ ಹಿಂದೆ ಒಂದು ಸಣ್ಣ ಗುಡಿಸಲು ಮಾಡಿಕೊಟ್ಟಿದ್ದರೆ ಇಂತಹ ಮಾತು ಕೇಳಿ ಜೀವಿಸಿರಬೇಕಾಗಿತ್ತೆ ಎಂದುಕೊಂಡಳು.

'ಅವರು ಈಗ ಎಲ್ಲಿದ್ದಾರೆ... ಹೇಗಿದ್ದಾರೆ... ಇದ್ದಾರೆಯೋ ಇಲ್ಲವೊ... ಒಂದನ್ನೂ ಅರಿಯದೆ ಈ ಅನಾಥ ಬಾಳ್ವೆಗಾಗಿಯೇ ಅಗ್ನಿಸಾಕ್ಷಿಯಾಗಿ ನನ್ನನ್ನು ಮದುವೆ ಮಾಡಿ ಈ ಊರಿಗೆ ಕರೆತಂದದ್ದು?'

ಈ ನೆನಪುಗಳು, ಅನಿಸಿಕೆಗಳು ಕನ್ನಡಿಯಲ್ಲಿ ಮುಖ ನೋಡಿ ಬೊಟ್ಟು ಇಡುವಾಗ ಕೆಲವು ಸಮಯಗಳಲ್ಲಿ ಆರು ತಿಂಗಳ ದಾಂಪತ್ಯಜೀವನದ ಮಧುರ ಅಂತರಂಗದಲ್ಲಿ ಪಾಕದಂತೆ ಥರಗುಡುತ್ತಿತ್ತು. ಕತ್ತಿನಲ್ಲಿದ್ದ ಅರಸಿನ ದಾರದಲ್ಲಿ ಕಲ್ಲನ್ನು ಕಟ್ಟಿ ತೂಗಾಡಿಸಿದಂತೆ ಹೃದಯ ಭಾರಗೊಳ್ಳುವಾಗ ಅಲೆಯೇಳುತ್ತಿತ್ತು.

''ಇದರಂತೆ ನೆನಪುಗಳು ಮುಳ್ಳಿದ್ದ ಗಿಡದ ಮೇಲಿ ಸ್ಪರ್ಶಗೊಂಡಂತೆ ನನ್ನನ್ನು ಆತ ನೋಡುತ್ತಿರುವಾಗಲೆಲ್ಲ ಅವನ ಮನಸ್ಸಿನಲ್ಲೂ ಇದೇ ಥರದ ಅನುಭವ ಉಂಟಾಗುತ್ತಿರಬಹುದೋ ಏನೋ?'' ಐವತ್ತು ವರ್ಷ ವಯಸ್ಸಾದ ಭಾಗೀರಥಿ ನಂದಾದೀಪವನ್ನು ಬೆಳಗಿಸಿ ಅರಸಿನ ಕುಂಕುಮವನ್ನಿಟ್ಟುಕೊಂಡು, ಮಂಚದಲ್ಲಿ ಎರಡು ಕಾಲುಗಳನ್ನು ಅಲ್ಲಾಡಿಸಲು ಆಗದೆ ಊದಿಕೊಂಡು ಮಲಗಿದ್ದ ಅಂತೋಣಿಯನ್ನು ನೋಡುತ್ತಾ ನೆನೆಸಿಕೊಂಡಳು. ಅಂತೋಣಿಗೂ ಸುಮಾರು ಎಪ್ಪತ್ತು ವರ್ಷ ಪ್ರಾಯ ಸಮೀಪಿಸಿತ್ತು. ಪ್ರಾಯದ ತೊಂದರೆ ಹಾಗೂ ತಾರುಣ್ಯದ ಮಿತಿಮೀರಿದ ಭೋಗಜೀವನ ಎಲ್ಲಾ ಸೇರಿ ಅವನನ್ನು ಈಗ ಒಂದೇ ಕಡೆ ಮಲಗುವಂತೆ ಮಾಡಿತ್ತು.

ಸಮಯಕ್ಕೆ ಸರಿಯಾಗಿ ಔಷಧಿ ಕೊಟ್ಟು ಶುಶ್ರೂಷೆ ಮಾಡಲು ಮರುದಮುತ್ತು ಅಲ್ಲದೆ ಇನ್ನಾರೂ ಇರಲಿಲ್ಲ.

ಒಮ್ಮೆ ದಮ್ಮು ಕಟ್ಟಿ ಕೆಮ್ಮಿ ಉಗುಳಲು ಪಾತ್ರೆಯನ್ನು ಹುಡುಕಿದ ಸಮಯದಲ್ಲಿ ಕೈಗೆ ಸಿಕ್ಕದೆ ಏಳಲು ಅಸಾಧ್ಯವಾಗಿ ಶ್ರಮ ಪಡುತ್ತಿರುವಾಗ ಭಾಗೀರಥಿ ಓಡಿಬಂದು ಮಂಚದ ಅಡಿಯಲ್ಲಿದ್ದ ಪಾತ್ರೆಯನ್ನು ತೆಗೆದು ಅನಿವಾರ್ಯವಾಗಿ ನೀಡಬೇಕಾಯಿತು.

ಅಂತೋಣಿ ಗಾಬರಿಗೊಂಡ.

''ನೀನಾ... ನೀನಾ ತಾಯೇ? ಮರುದ ಎಲ್ಲಿ ಹೋದ?''

''ಅವನೆಲ್ಲಿದ್ದಾನೆ ಎಂದು ಗೊತ್ತಿಲ್ಲ, ಕೊಡು, ನಾನು ತೆಗೆದುಕೊಡೋದ್ರಲ್ಲಿ ದೊಡ್ಡ ಅಪರಾಧವೇನು ಬರೋದಿಲ್ಲ !''

''ಬೇಡಮ್ಮ, ನೀನು ಈ ಕೆಲ್ಸಗಳನ್ನೆಲ್ಲಾ ಮಾಡ್ಬಾರದು. ಮೊದಲೇ ನಾನು ಮಾಡಿದ ತಪ್ಪಿಗೆ ಹೇಗೆ ಪ್ರಾಯಶ್ಚಿತ್ತ ಮಾಡೋದು ಎಂದು ತಿಳಿಯದೆ ತವಕಿಸುತ್ತಿದ್ದೇನೆ.''

ಅಂತೋಣಿಯ ದಪ್ಪದಾದ ಕೆನ್ನೆ ಮೀಸೆಯೆಲ್ಲಾ ಸ್ಪಂದಿಸತೊಡಗಿದವು. ಅಷ್ಟು ದೊಡ್ಡ ಶರೀರ ಅಳುವಿನಿಂದ ನಡುಗುವುದನ್ನು ನೋಡುತ್ತಲಿದ್ದ ಆಕೆಗೂ ಅಳು ಬಂದಿತು.

ಒಂದು ಕಾಲದಲ್ಲಿ ಆತ ಅಳುವುದನ್ನು ಕಂಡು ಸಂತೋಷಪಟ್ಟದ್ದನ್ನು ಸ್ಮರಿಸಿಕೊಂಡಾಗ ತನ್ನ ಬಗೆಗೇ ಜಿಗುಪ್ಸೆ ಉಂಟಾಯಿತು.

''ಏನಾಯ್ತು ಈಗ? ಇಷ್ಟು ವರ್ಷ ನನ್ನನ್ನು ಮನೆಯಲ್ಲಿರಿಸಿ ಊಟ ಹಾಕಿದ್ದಕ್ಕೆ ನಾನು ಇಷ್ಟಾದರೂ ಮಾಡಬಾರದೆ? ಇದನ್ನೇ ನಾನು ಮಲಗಿದರೆ ನೀನು ಮಾಡುತ್ತಿರಲಿಲ್ಲವೇ? ಇಂತಹ ಮಾನವೀಯತೆ ಕೂಡ ಇಲ್ಲದಿದ್ದರೆ ನಾವು ಬರಿಯ ಮೃಗಕ್ಕೆ ಸಮಾನರು.''

ಉಗಿಯುವ ಪಾತ್ರೆಯನ್ನು ಅವಳು ಮುಂದೆ ಇರುವ ಸ್ಟೂಲಿನ ಮೇಲಿರಿಸಿ ಹೋದಳು.

ಅಂದು ಮುಂಜಾನೆ -

ಅಂತೋಣಿಯ ಕತೆ ಮುಗಿಯಿತು. ಊರು ಇಡೀ ಒಟ್ಟು ಸೇರಿ ಬಾಗಿಲಲ್ಲಿ ಬಂದು ನಿಂತಾಗ, ಪಾದ್ರಿಗಳು ಬಂದು ಬೇಕಾದ ಅಂತ್ಯಕರ್ಮಗಳನ್ನು ನಡೆಸಿದರು.

ಮುವ್ವತ್ತು ವರ್ಷಗಳಿಂದಲೂ ಭಾಗೀರಥಿಯೊಡನೆ ಮೌನ ಜೀವನ ನಡೆಸಿದವನು ಇಂದು ದೀರ್ಘ ನಿದ್ರೆಯಲ್ಲಿ ಮಲಗಿದನು.

'ಇನ್ನು ಮೇಲೆ ಅಂತೋಣಿ ಮನೆಯ ಅಮ್ಮನ ಗತಿಯೇನು?' ಊರಿನವರ ಪ್ರಶ್ನೆಗೆ, ಉದ್ದವಾದ ಆತ ಬರೆದಿಟ್ಟ ಕರಾರುಪತ್ರ ಉತ್ತರ ಕೊಡುತ್ತಿತ್ತು. ಈ ಮನೆ ಅದರಲ್ಲಿರುವ ವಸ್ತುಗಳು, ಮತ್ತು ಅವಳ ಜೀವವಿರುವವರೆಗೆ ಅನುಭವಿಸಬೇಕಾದ ಹಣ ಮಾತ್ರ ಅವಳಿಗೆ ಸೇರಬೇಕಾಗಿದ್ದವು. ಉಳಿದವುಗಳನ್ನು ಅನಾಥ ಮಕ್ಕಳ ಆಶ್ರಮಕ್ಕೆ ಬರೆದಿದ್ದನು.

'ನನಗೆ ಇಷ್ಟೇ ಸಾಕು, ನನ್ನ ನಂತರ ಇವೆಲ್ಲವೂ ಅನಾಥ ಮಕ್ಕಳಿಗೆ ಸೇರಲಿ.' ಆಕೆ ಅದರಲ್ಲಿ ಸೇರಿಸಿದಳು.

ಭಾಗೀರಥಿಯ ಕಣ್ಗಳಲ್ಲಿ ಸದಾ ಗೋಡೆಯ ಮೇಲಿರಿಸಿದ ಬಂದೂಕು, ಸೊಳ್ಳೆ ಪರದೆ ಕಟ್ಟಿದ್ದ ಅವನ ಮಂಚ, ಮಾತೆ ಮೇರಿಯ ಪ್ರಜ್ವಲಿಸುವ ಸೌಮ್ಯ ಮುಖ ಇವೆಲ್ಲವನ್ನು ನೋಡುತ್ತಿದ್ದಂತೆ ಕಣ್ಣೀರು ಅಧಿಕವಾಗುತ್ತಿತ್ತು. ಅಂತೋಣಿ ಇಲ್ಲದ ಮನೆ ಬಿಕೋ ಎನ್ನುತ್ತಿತ್ತು. ಕತ್ತಲು ಕೋಣೆಯ ಒಂಟಿ ಮೇಣದ ಬತ್ತಿಯ ಬೆಳಕಿನಲ್ಲಿ ತಾಯಿ ಮೇರಿ ನಿಂತಾಗ ಭಾಗೀರಥಿಯ ಹೃದಯದಲ್ಲಿ ದುಃಖ ಹೆಪ್ಪುಗಟ್ಟಿ ನಿಲ್ಲುತ್ತಿತ್ತು.

'ಇವನು ಯಾರು? ಇವನಿಗೂ ನನಗೂ ಒಂದೇ ದಿನದ ಅನಿರೀಕ್ಷಿತ ಭೇಟಿಯಲ್ಲದೆ ಇನ್ಯಾವ ಬಂಧವಿದೆ? ಇವನು ಹೋದ ಮೇಲೆ ನನ್ನ ಹೃದಯವೇಕೆ ಬಿರುಕು ಬಿಡುವಂತೆ ಆಗುತ್ತಿದೆ? ಪಾಪ! ಅವನಿಗಾಗಿ ನಾನು ಏನು ಮಾಡಿದ್ದೇನೆ? ಅಂದು ಅವನಿಗೆ ಉಗುಳಲು ಪಾತ್ರೆಯನ್ನು ತೆಗೆದುಕೊಟ್ಟುದಲ್ಲದೆ ಅವನಿಗೆ ಒಂದು ಲೋಟ ನೀರು ಕೂಡ ತೆಗೆದುಕೊಡಲಿಲ್ಲವಲ್ಲ ನಾನು! ಆರು ತಿಂಗಳು ನನ್ನೊಡನೆ ಬಾಳ್ವೆ ನಡೆಸಿದವನು ಒಂದೇ ಒಂದು ಕ್ಷಣದಲ್ಲಿ ನನ್ನನ್ನು ಒದರಿ ಬಿಸಾಡಿದ. ಒಂದು ದಿನ ಮಾಡಿದ ತಪ್ಪಿಗಾಗಿ ಬದುಕಿನ ಇಷ್ಟೂ ವರ್ಷ ನನ್ನನ್ನು ಜೋಪಾನವಾಗಿ ಯಾವ ಪ್ರತಿಫಲವನ್ನೂ ನಿರೀಕ್ಷಿಸದೆ ಇಟ್ಟುಕೊಂಡಿದ್ದ ಅಂತೋಣಿ ಎಷ್ಟು ದೊಡ್ಡ ಮನುಷ್ಯ !'

ಸೇರಿದ ಜನ ಅಂತೋಣಿಯ ಒಡಲನ್ನು ಶ್ರೀಗಂಧದ ಮರದ ಪೆಟ್ಟಿಗೆಯಲ್ಲಿ ಇಟ್ಟು, ಎತ್ತಿಕೊಂಡು ಹೋದಾಗ ಅವಳು ಅಡಗಿಸಿಟ್ಟಿದ್ದ ದುಃಖದ ಕಟ್ಟೆ ಒಡೆಯಿತು. ಬಿಕ್ಕಿ ಬಿಕ್ಕಿ ಅತ್ತಳು.

'ಬಾಳಿನ ದಿನಗಳಲ್ಲಿ ಇವಳನ್ನು ಕಾಪಾಡುವೆ' ಎಂದು ಮಾಂಗಲ್ಯ ಬಿಗಿದು ಭರವಸೆ ನೀಡಿ ಯಾವುದೋ ಊರಿಗೆ ಕರೆತಂದು, ಒಂದು ಅನಿರೀಕ್ಷಿತ ಅಸಂಬದ್ಧ ಘಟನೆಯಿಂದಾಗಿ ನಡುನೀರಿನಲ್ಲಿ ಕೈಬಿಟ್ಟು ಅದೃಶ್ಯನಾದ ಪತಿ ರಘುಪತಿ ಭಟ್ಟನಿಗಿಂತಲೂ ಅಂತೋಣಿಯೇ ಅವಳ ಹೃದಯದಲ್ಲಿ ಎದ್ದು ನಿಂತವನು.

''ಅಯ್ಯೋ... ನನ್ನನ್ನು ಒಂಟಿಯಾಗಿ ಬಿಟ್ಟು ಹೋದೆಯಾ...''

ಭಾಗೀರಥಿ ಗೋಳೋ ಎಂದು ರೋದಿಸುತ್ತಾ ಅವಳ ಕತ್ತಿನಲ್ಲಿದ್ದ ಅರಸಿನ ಮಾಂಗಲ್ಯದಾರವನ್ನು ಬಿಚ್ಚಿ ಗೋಡೆಯಲ್ಲಿ ತೂಗುತ್ತಿದ್ದ ಬಂದೂಕಿನ ತುದಿಯಲ್ಲಿ ಸಿಕ್ಕಿಸಿ, ಹಾಗೆ ಮುದುಡಿ ಮಲಗಿದಳು.

ಹೌದು, ಇನ್ನು ಮುಂದೆ ಆಕೆ ರಘುಪತಿಯ ಹೆಂಡತಿಯಾಗಿ ಬಾಳುವುದಕ್ಕಿಂತಲೂ ಅಂತೋಣಿಯ ವಿಧವೆಯಾಗಿ ಬಾಳುವುದೇ ನ್ಯಾಯವೆಂದು ತೀರ್ಮಾನಿಸಿದಳು.

ಕನ್ನಡದಲ್ಲಿ : ಕೋವರ್‌ಕೊಲ್ಲಿ ಕರುಣಾಕರ
ಸಂತವೇರಿ ಅಂಚೆ - ೫೭೭ ೧೩೭
ಚಿಕ್ಕಮಗಳೂರು ಜಿಲ್ಲೆ

# ಬೆಳ್ಳಿ ಕೂದಲ ಕೆಂಪು ಕವಿ



ಸುಭಾಷ್ ಮುಖ್ಯೋಪಾಧ್ಯಾಯರೊಂದಿಗೆ ಲೇಖಕ

ಸುಭಾಷ್ ಮುಖ್ಯೋಪಾಧ್ಯಾಯ ಈ ದೇಶದ ಒಬ್ಬ ಪ್ರಖ್ಯಾತ ಮಾರ್ಕ್ಸ್‌ವಾದೀ ಕಾದಂಬರಿಕಾರ. ಕಮ್ಯುನಿಸ್ಟ್ ಪಕ್ಷದ ಸಕ್ರಿಯ ಕಾರ್ಯಕರ್ತ ನಾಗಿದ್ದುಕೊಂಡು ಹೋರಾಟಗಳನ್ನು ಸಂಘಟಿಸಿದವರು. ಅಂತೆಯೇ ರಾಷ್ಟ್ರದ ಅತ್ಯುನ್ನತ ಸಾಹಿತ್ಯ ಪ್ರಶಸ್ತಿ 'ಜ್ಞಾನಪೀಠ'ವನ್ನೂ ಪಡೆದವರು. ಬಂಗಾಳಿ ಸಾಹಿತ್ಯ ಚರಿತ್ರೆಯಲ್ಲಿ ಒಬ್ಬ ಶ್ರೇಷ್ಠ ಕವಿಯಾಗಿಯೂ ಸ್ಥಾನ ಪಡೆದಿದ್ದಾರೆ ಸುಭಾಷ್. ಕೆಂಪು ಬಾವುಟ ಹಿಡಿದು, ಕೆಂಪು ವಂದನೆ ಹೇಳಿ, ಕೊನೆಗೆ ಇಡೀ ರಾಜ್ಯಕ್ಕೆ ಕೆಂಪು ಬಳಿಯುವಲ್ಲಿ ತನ್ನದೂ ಒಂದು ಪಾಲನ್ನು ಕೊಟ್ಟ ಇವರ ತಲೆಗೂದಲುಗಳೆಲ್ಲಾ ಇದೀಗ ಬೆಳ್ಳಂಬೆಳಗು. ಜ್ಞಾನಪೀಠ ದಕ್ಕಿದಾಗ ಇವರಿಗೆ ವಯಸ್ಸು ಎಪ್ಪತ್ತು. ಇವರ ಮೊದಲ ಕೃತಿ 'ಪದಾತಿಕ್' ಪ್ರಕಟವಾದಾಗ ಆಗಿನ್ನೂ ಇಪ್ಪತ್ತು. ಈ ನಡುವಿನ ಐವತ್ತು ವರ್ಷಗಳ ಬದುಕು ಅದೊಂದು ಪರಿಪೂರ್ಣ 'ಜೀವಕೃತಿ'.

ಸುಭಾಷ್ ಅವರ ಬದುಕಿನ ಉದ್ದೇಶ ಬರಹವಾಗಿರಲಿಲ್ಲ, ಅದು ಉದ್ದೇಶದ ಈಡೇರಿಕೆಗಾಗಿ ಆಯ್ದುಕೊಂಡ ಮಾರ್ಗ ಮಾತ್ರವಾಗಿತ್ತು. ಇವರಿಗೆ ಬರಹಕ್ಕಿಂತ ಮುಖ್ಯವಾಗಿದ್ದು ಬದುಕು; ಅದೂ ಸಮಷ್ಟಿಯ ಬದುಕು. ಆದ್ಯತೆಯಲ್ಲಿ ಸಮಷ್ಟಿಯನ್ನು ಪ್ರಥಮವಾಗಿಟ್ಟು ವೈಯಕ್ತಿಕವನ್ನು ಅಂತಿಮಗೊಳಿಸಿದರು ! ಸಾಹಿತ್ಯಕ್ಕಾಗಿ ಜ್ಞಾನಪೀಠ ಪಡೆದರಾದರೂ ಕ್ರಮಿಸಿದ ಹಾದಿಯ ಹೆಜ್ಜೆ ಗುರುತುಗಳು ಹಲವು ಬಗೆಯವು. ರಾಜಕಾರಣ, ಕಾರ್ಮಿಕ ಸಂಘಟನೆ, ಹೋರಾಟ, ಜೈಲು ಈ ಎಲ್ಲದರ ನಡುವಿನ ಬಿಡುವು ಕಾವ್ಯ, ಕಾದಂಬರಿ – ಇತ್ಯಾದಿ ಸಾಹಿತ್ಯ ರಚನೆ.

ಸುಭಾಷ್ ತಮ್ಮ ಇಪ್ಪತ್ತನೆಯ ವಯಸ್ಸಿನಲ್ಲೇ ಲೇಬರ್ ಪಕ್ಷದ ಸದಸ್ಯರಾಗಿ ಕಾರ್ಮಿಕರನ್ನು ಸಂಘಟಿಸಿದರು. ಅಂದಿನ ಸಾಹಿತ್ಯ ಸಾಮ್ರಾಜ್ಯದ ಅಧಿಪತಿಯಂತಿದ್ದ ರವೀಂದ್ರನಾಥ ಟಾಗೋರರಿಗಿಂತ ಭಿನ್ನವಾದ ನೆಲದ ಗಂಧ ಆಗಲೇ ಅವರ ಗ್ರಹಿಕೆಗೆ ದಕ್ಕಿತ್ತು. ಹಾಗಾಗಿ ಈ ಯುವಕವಿ ಬಂಗಾಳಿ ಸಾಹಿತ್ಯಲೋಕದ ಮನೆಮಾತಾದ, ಚರ್ಚೆಯ ವಸ್ತುವಾದ. ಈ ಪ್ರತಿಷ್ಠೆ ಸುಭಾಷರ ಉತ್ಸಾಹವನ್ನು ಪುಟಕ್ಕಿಟ್ಟಿತು. ಲೇಬರ್ ಪಕ್ಷದ ನಡಿಗೆ ನಿಧಾನವೆಂದು ಅಳೆದು ಕಮ್ಯುನಿಸ್ಟ್ ಪಕ್ಷದ ಸಾಗರಕ್ಕಿಳಿದರು. ಇದರೊಂದಿಗೇ ಅಂಟಿಕೊಂಡಿದ್ದು ಫ್ಯಾಸಿಸ್ಟ್ ವಿರೋಧಿ ಲೇಖಕರ ಸಂಘದ ಜಂಟಿ ಕಾರ್ಯದರ್ಶಿಯ ಕೆಲಸ. ಇದರ ಬೆನ್ನಿಗೇ ಮತ್ತೊಂದು ಕವನ ಸಂಕಲನ ''ಅಗ್ನಿಕೋಣ್'' ಪ್ರಕಟಣೆ. ಇದೇ ಹೊತ್ತಿಗೆ ಆಳುವ ಸರಕಾರ ಜೈಲಿಗೆ ತಳ್ಳಿತು, ಮೂರು ತಿಂಗಳು. ಮತ್ತೆ ಬಯಲಿಗೆ ಬಿದ್ದು ಸೆಣಬಿನ ಕಾರ್ಖಾನೆ ಕಾರ್ಮಿಕರ ಸಂಘಟನೆಯನ್ನು ಕಟ್ಟಿದರು. ಈ ಬಾರಿ ಮತ್ತೆರಡು ವರ್ಷದ ಸೆರೆವಾಸ. ಹೊರಬಂದನಂತರ ನಾವಿಕರ ಟ್ರೇಡ್ ಯೂನಿಯನ್ ಚಟುವಟಿಕೆ ನಡೆಸಿದರು. ಹೀಗೆ ಹಲವು ಹತ್ತು ಹೋರೆಗಳ ನಡುವೆ ವಿವಾಹ. ಕಮ್ಯುನಿಸ್ಟ್ ಪಾರ್ಟಿಯ ಸಂಗಾತಿ ಗೀತಾ ಬಂದೋಪಾಧ್ಯಾಯ ಇವರ ಬಾಳಸಂಗಾತಿಯಾದರು. ಈ ಹೊತ್ತಿಗೆ ಬಾಧಿಸಿದ್ದು ಖಾಸಾ ಬದುಕು. ಕ್ರಾಂತಿಯ ಘೋಷಣೆ ಗಟ್ಟಿಯಾಗಿ ಕೂಗಬೇಕೆಂದರೆ ಹೊಟ್ಟೆತುಂಬ ಅನ್ನ ಬೇಕು ಎಂಬುದು ಅರಿವಿಗೆ ಬಂದದ್ದೇ ಆಗ. ಅದನ್ನು ಗಳಿಸುವುದು ಹೇಗೆ ? ಮುದ್ರಣಾಲಯಗಳಲ್ಲಿ ಕರಡು ತಿದ್ದುವ ಕೆಲಸ ಮಾಡಿದರು. ಪ್ರಕಾಶನಗಳಲ್ಲಿ ಸಂಬಳಕ್ಕಾಗಿ ಹಸ್ತಪ್ರತಿ ಸಿದ್ಧಪಡಿಸಿದರು. ಮೆಲ್ಲಗೆ ಬದುಕಿನ ಬುನಾದಿಯನ್ನು ಭದ್ರಪಡಿಸಿಕೊಂಡರು.

ಸುಭಾಷರು ಐವತ್ತು ವರ್ಷಗಳಲ್ಲಿ ನಲವತ್ತಾರು ಪುಸ್ತಕಗಳನ್ನು ಪ್ರಕಟಿಸಿದರು. ಇವರ ತಾಯ್ನೆಲದ ಬಗೆಗಿನ ಅಭಿಮಾನ 'ಅಮಾರ್ ಬಾಂಗ್ಲಾ' (ಪ್ರವಾಸ ಕಥನ)ದಲ್ಲಿ ನಿಚ್ಚಳವಾಗಿ ಗೋಚರಿಸಿತು. ಕಾರ್ಲ್ ಮಾರ್ಕ್ಸ್‌ನ ''ವೇಜ್ ಲೇಬರ್ ಅಂಡ್ ಕ್ಯಾಪಿಟಲ್'' ಅನ್ನು ಆಧರಿಸಿ 'ಭೂತೇರ್ ಬೇಗಾರ್' ರಚಿಸಿದರು. ಹಂಗ್ರದಾಸ್, ಅಂತರೀಸ್ ಕಾದಂಬರಿಗಳನ್ನು ಬರೆದರು. ರೋಜನ್‌ಬರ್ಗ್‌ನ ಪತ್ರಗುಚ್ಛವನ್ನೂ, ನಜೀಮ್ ಹಿಕ್ಮತ್‌ಯಾರ್‌ರ ಕವಿತೆಗಳನ್ನೂ ಅನುವಾದಿಸಿದರು. ದೇಶ ವಿದೇಶಗಳ ಜನಪದ ಕತೆಗಳನ್ನು ಸಂಪಾದಿಸಿದರು. 'ಜೂತ ದೊರಾಯಿ ಜಾಯ್' ಕೃತಿಗಾಗಿ ೧೯೭೦ರಲ್ಲಿ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪ್ರಾಪ್ತಿಯಾಯಿತು. ಅಲ್ಲದೆ ಆಫ್ರೋ-ಏಷ್ಯನ್ ಕಮಲ ಪ್ರಶಸ್ತಿ, ಕುಮಾರನ್ ಆಶಾನ್ ಪ್ರಶಸ್ತಿ, ಆನಂದ ಪುರಸ್ಕಾರ್ ಮುಂತಾದವನ್ನೂ ಪಡೆದರು. ಈ ಸುದೀರ್ಘ ಪಯಣದ ನಡುವೆ ಇವರ ಅನೇಕ ಕೃತಿಗಳು ಅನೇಕ ಭಾರತೀಯ ಭಾಷೆಗಳಿಗೆ, ಯುರೋಪಿಯನ್ ಭಾಷೆಗಳಿಗೆ ಅನುವಾದಗೊಳ್ಳುವ ಮೂಲಕ ಸುಭಾಷ್ ಮುಖ್ಯೋಪಾಧ್ಯಾಯ ವಿಶ್ವಮನ್ನಣೆ ಪಡೆದರು.

ಅವತ್ತು ನಾನು ಮತ್ತು ರಾಷ್ಟ್ರೀಯ ಗ್ರಂಥಾಲಯದ ಕನ್ನಡ ವಿಭಾಗದ ಮುಖ್ಯಸ್ಥರಾದ ಶ್ರೀ ಜಿ. ಕುಮಾರಪ್ಪ ಆ ಮನೆಯ ಪುಟ್ಟ ಗೇಟು ತೆಗೆದು ಒಳಹೋದಾಗ ಬೆಳ್ಳಿಕೂದಲುಗಳ, ಹಣ್ಣು ದೇಹದ ಸುಭಾಷರ ನಡುಗುವ ಕೈಗಳು ತಂಬಾಕು ಸೇವನೆಯ 'ಪೈಪ್' ಹಿಡಿದಿದ್ದವು. ನಾನು ಕರ್ನಾಟಕದಿಂದ ಬಂದವನೆಂದು ತಿಳಿದೇ ಹೆಚ್ಚು ಸಂತಸಪಟ್ಟರು. ಮಲಗಿದ್ದವರು ಎದ್ದು ಒಳಹೋಗಿ ಮುಖಕ್ಕೆ ನೀರು ಹಾಕಿಕೊಂಡು ಬಂದರು, ಅಷ್ಟೇ. 'ಬೇಕಾದ್ದನ್ನು ಕೇಳಿ, ಮಾತಾಡೋಣ, ನಾನೀಗ ಚರ್ಚೆಗೆ ಸಿದ್ಧ,' ಎಂಬಂತೆ ಆಹ್ವಾನಿಸಿಬಿಟ್ಟರು ಮುಗುಳ್ನಗೆಯ ಮೂಲಕವೇ. ನಾನವರ ಒಪ್ಪಿಗೆ ಪಡೆಯದೆ, ಸಮಯ ನಿಗದಿಗೊಳಿಸಿಕೊಳ್ಳದೆ ದಿಢೀರನೆ ಭೇಟಿ ಕೊಟ್ಟಿದ್ದೆ. ಮಲಗಿದ್ದವರನ್ನೆಬ್ಬಿಸಿ ಮಾತಿಗೆ ಕೂಡಿಸಿಕೊಂಡಿದ್ದೆ. ಈ ಜ್ಞಾನಪೀಠ ಸಾಹಿತ ಅಷ್ಟೊಂದು ಸುಲಭವಾಗಿ ತುಂಬು ಪ್ರೀತಿಯಿಂದಲೇ ಮಾತುಕತೆಗೆ ಒಡ್ಡಿಕೊಂಡಿದ್ದರು. ಒಂದಿಷ್ಟು ಆರಂಭಿಕ ಅನೌಪಚಾರಿಕ ಕ್ಷಣಗಳ ನಂತರ ಮುಕ್ತತೆ ತೆರೆದುಕೊಂಡಿತು. ಪರಿಚಯಿಸಿಕೊಂಡೆ ನಾ ಬಂದ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅಧ್ಯಯನ ಪ್ರವಾಸ ಯೋಜನೆಯೊಂದಿಗೆ. 'ಪ್ರಶ್ನಾವಳಿ ಇದ್ದಿದ್ದರೆ ಚೆನ್ನಾಗಿತ್ತಲ್ಲವೇ' ಎಂದರು ಕುಮಾರಪ್ಪ. 'ಬೇಡ ಮಾರಾಯ್ರೆ, ಆ ಪ್ರಶ್ನೆಗಳ ಗುಂಪಿನ ಯಾಂತ್ರಿಕ ನಡಿಗೆ... ಸುಮ್ಮನೆ ಮಾತಾಡೋಣ' ಎಂದೆ. ಆದರೆ ಭಾಷೆ ? ಸುಭಾಷ್ ಅವರು ಬಂಗಾಳಿಯಲ್ಲೇ ಮಾತಾಡಬೇಕು. ಹಿಂದಿಯಲ್ಲಾದರೆ ಸಹಜ ಹಾಗೂ ಮುಕ್ತವಾಗಿ ಎಲ್ಲವನ್ನೂ ಹೇಳಲಾಗದು. ನನಗೋ ಬಂಗಾಳಿ ಬಾರದು. ಈ ಹೊತ್ತು ಬೇರುಸಹಿತ ಬಂಗಾಳಿಯನ್ನು ಅರಗಿಸಿಕೊಳ್ಳುತ್ತಿದ್ದ ಕನ್ನಡಿಗ ಕುಮಾರಪ್ಪ ನನ್ನೊಂದಿಗಿದ್ದಿದ್ದು ಬಂಗಾರದಂಥಾ ಕೆಲಸವಾಯ್ತು. ಅವರಿಲ್ಲದಿದ್ದರೆ ನಿಜಕ್ಕೂ

ಬಿ. ಪೀರ್‌ಬಾಷ

ಕಷ್ಟವಾಗುತ್ತಿತ್ತು. ಸರಿ, ದುಭಾಷಿಯನ್ನೂ ಒಳಗೊಂಡಂತೆ ನಾವು ಮೂವರು ಮಾತಿನ ಲೋಕಕ್ಕಿಳಿದೆವು.

ಮಾತುಕತೆ ಶುರುವಾತು ಕಂಡುಕೊಂಡಿದ್ದು ವರ್ತಮಾನದ ಸಾಹಿತ್ಯಿಕ 'ಟ್ರೆಂಡ್'ಗಳೊಂದಿಗೆ. ಆ ಸಂದರ್ಭದ ಕರ್ನಾಟಕದ ದಲಿತ-ಬಂಡಾಯದ ಕಾಲಕ್ಕೆ ಬಂಗಾಳದ 'ಟ್ರೆಂಡ್' ಬಗ್ಗೆ ಪ್ರಶ್ನೆಯೊಂದು ಕಾಣಿಸಿಕೊಂಡಿತು. ಅದಕ್ಕೆ ಉತ್ತರವೆಂಬಂತೆ ಇತಿಹಾಸ ಮತ್ತು ವರ್ತಮಾನಗಳೆರಡನ್ನೂ ಕೂಡಿದ ವಿಶ್ಲೇಷಣೆಯನ್ನೇ ನೀಡಿದರು ಮುಖ್ಯೋಪಾಧ್ಯಾಯರು:

''ಆ ತರಹದ ಟ್ರೆಂಡ್ ಇಲ್ಲ ಈಗ. ಮುಂಚೆ ಇತ್ತು. ಆಗ ಹಸಿವಿನ ಪೀಡಿತರ ಬಗ್ಗೆ ಬರೆಯುವ ಒಂದು ಟ್ರೆಂಡ್ ಇತ್ತು. ನಮಗೆಲ್ಲಾ ಅಂತಹ ಕಮಿಟ್‌ಮೆಂಟ್ ಇತ್ತು. ಆದರೆ ಮೊದಲಿನದ್ದು ಈಗಿಲ್ಲ,''ಎನ್ನುತ್ತಲೇ ಅಂತಹ 'ಕಮಿಟೆಡ್' ಸಾಹಿತ್ಯದ ಸಾಹಿತ್ಯಿಕ ಅಂಶದ ಬಗ್ಗೆ ಮಾತು ಹೊರಳಿತು. ಅವರೇ ಉತ್ತರಿಸಿದರು:

– ಈ ಕಮಿಟ್‌ಮೆಂಟ್ ಎನ್ನುವುದು ಒಳ್ಳೆಯದೂ ಹೌದು, ಕೆಟ್ಟದ್ದೂ ಹೌದು. ನಮ್ಮಲ್ಲಿ ಇಂತಹ ಬದ್ಧತೆ ಇದ್ದಾಗ ಇಚ್ಛಾಪೂರ್ಣತೆ ಸಾಧ್ಯವಾಗಿತ್ತು. ಆದರೆ ಒಂದು ಬದಿಗೆ ರಿಯಾಲಿಟಿ ಡಿಸ್ಟಾರ್ಟ್ ಆಗಿತ್ತು. ನಮಗೊಂದು ಐಡಿಯಾಲಜಿ ಇತ್ತು. ಈಗ ಒಂದು ಬಗೆಯ 'ತಂಪು ಭಾವ' ಇದೆ. ಬದುಕಿನ ಬಗ್ಗೆ, ಸಮಾಜದ ಬಗ್ಗೆ ಎಲ್ಲ ಬರಹಗಳಲ್ಲಿ ಪ್ರಾಣವೇ ಇಲ್ಲ. ಆದರೆ ಸಾರಾಸಗಟಾಗಿ ತಳ್ಳಿಹಾಕುವಂತಿಲ್ಲ. ಸಾಹಿತ್ಯದ ತಂತ್ರಗಾರಿಕೆಯಲ್ಲಿ ಉನ್ನತಿಯಾಗಿದೆ. ನಮ್ಮ ಬರಹದ ಹೊಸತರಲ್ಲಿ ಈಗಿನಂತೆ 'ಟೆಕ್ನಿಕ್' ಇರಲಿಲ್ಲ. ಈಗ ತಂತ್ರ ಇದೆ. ಸತ್ವ ಕಡಿಮೆಯಾಗಿದೆ.

**ಪ್ರಶ್ನೆ** : ಆದರೆ ಬರೆಹದ ವಿಷಯ, ವಸ್ತುಗಳ ಆಯ್ಕೆಯ ವೈವಿಧ್ಯತೆಯೊಂದಿಗೆ ವ್ಯಾಪ್ತಿ ವಿಸ್ತಾರಗೊಂಡಿದೆಯಲ್ಲವೇ? ಅಂತೆಯೇ, ಪ್ರಭಾವದ 'ಕೊಡು-ಪಡೆ'ವ ಅಂಶಗಳೂ ಜಾಗತಿಕವಾಗುತ್ತಿವೆ, ಅಲ್ಲವೇ ?

**ಉತ್ತರ** : ಹೌದು, ಪಾಶ್ಚಿಮಾತ್ಯ ಪ್ರಭಾವ ಬರೆಹದಲ್ಲಿ ಕಾಣಿಸಿಕೊಳ್ಳುವ ಮೂಲಕ 'ಅಂತರ ರಾಷ್ಟ್ರೀಯ'ವಾಗ್ತಿದೆ. ಅದ್ರೆ ರಾಷ್ಟ್ರೀಯವಾಗದೇ ಹೋದ್ರೆ ಹೇಗೆ ? ಮೊದಲು ಟ್ರೆಡಿಷನ್ ಇತ್ತು. ಈಗ 'ಇನ್ನೋವೇಶನ್' ಜಾಸ್ತಿ ಆಗ್ತಾ ಇದೆ. ಈಗ 'ಫೋಕ್' ಜೊತೆ, ಗ್ರಾಮಗಳ ಜೊತೆಗಿನ ಸಂಬಂಧ ಬರಹಗಾರರಿಂದ ಕಡಿದುಹೋಗ್ತಾ ಇದೆ. ಅರ್ಬನೈಸ್ ಆಗ್ತಿದೆ. ಬದುಕೂ ಅರ್ಬನೈಸ್ ಆಗ್ತಿದೆ, ಹಳ್ಳಿಗಳಲ್ಲಿ ಕೂಡ.

**ಪ್ರ** : ಬಂಗಾಳಿ ಸಾಹಿತ್ಯವೆಂಬುದು ಕಲ್ಕತ್ತಾ ಸಾಹಿತ್ಯವಾಗ್ತಿದೆಯೆಂಬ ಇತ್ತೀಚಿನ ಚರ್ಚೆಯ ಹಿನ್ನೆಲೆಯಲ್ಲಿ ಅಲ್ಲವೇ ಈ ಮಾತು? ಇಂತಹ ಬೆಳವಣಿಗೆಗಳ ಹಿಂದೆ ವಾಸ್ತವಿಕ ಕಾರಣಗಳೂ ಇರುತ್ತವೆ, ಅಲ್ಲವೇ? ಅಂದ್ರೆ, ಜನರ ಬದುಕಿನ ಕ್ರಮದಲ್ಲಿ ಬದಲಾವಣೆಗಳು ಆಗಿರಬೇಕು ಎಂದೆನಿಸುತ್ತದೆ. ಇದರ ಒಟ್ಟು ಪರಿಣಾಮವಾಗಿ ಸಾಹಿತ್ಯ ಆ ಸ್ವರೂಪ......

**ಉ** : ಇದು ಖಂಡಿತ ಸರಿ. ಜೀವನದಲ್ಲೂ ಹೀಗಾಗಿದೆ. ಜನ ನಗರಕ್ಕೆ ವಲಸೆ ಬರ್ತಿದ್ದಾರೆ. ಗ್ರಾಮದಿಂದ ನಗರಕ್ಕೆ ಬಂದ ಜನರ ಹಿಂದೆಯೇ ಬಂದ ಬರೆಹ ಕೂಡ ಹಳ್ಳಿಗಳ ಕಡೆ ತಿರುಗಿ ನೋಡುತ್ತಲೇ ಇಲ್ಲ. ಒಟ್ಟಾರೆ ಬದುಕು ವಿಚ್ಛಿನ್ನಗೊಳ್ಳುತ್ತಿದೆ.

**ಪ್ರ** : ಇದಕ್ಕೆ ಕಾರಣಗಳನ್ನು ಹೇಗೆ ವಿಶ್ಲೇಷಿಸಬಹುದು ?

**ಉ** : ಗ್ರಾಮಗಳ ಬಗ್ಗೆ ಕೀಳರಿಮೆ ಇದೆ. ಇದು ಈಗಿನದಲ್ಲ. ಸ್ವಾತಂತ್ರ್ಯಾನಂತರದ ಸಾಹಿತ್ಯವೇ ಕಲ್ಕತ್ತಾಮಯವಾಗಿದೆ. ಮೊದಲು ಸಾಹಿತ್ಯದಲ್ಲಿ ಮೇಲ್ಜಾತಿಯ ಡಾಮಿನೇಶನ್ ಇತ್ತು. ಚಟ್ಟೋಪಾಧ್ಯಾಯ, ಮುಖ್ಯೋಪಾಧ್ಯಾಯರವರ ಕೈಯಲ್ಲಿತ್ತು. ಈಗದು ಕೆಳಸ್ತರದ ಜನರ ಕೈಗೂ ದಕ್ಕಿದೆ. ಇದು ಒಳ್ಳೆಯ ಬೆಳವಣಿಗೇನೆ. ಆದರೆ ಹಾಗೆ ಬಂದ ಜನ ಆ ಕೆಳಸ್ತರಗಳ ಬಗ್ಗೆ ಬರೀತಿಲ್ಲ. ಇದು ಖೇದದ ಸಂಗತಿ.

**ಪ್ರ** : ಅಂತಹ ಬರಹಗಾರರು ಕನಿಷ್ಠಪಕ್ಷ ಆ ಕೆಳವರ್ಗ– ಜಾತಿಗಳ ಜೀವನಾನುಭವ ಮತ್ತು ಭಾಷೆಗಳನ್ನಾದ್ರೂ ಬಳಸಿಕೊಳ್ಳಲು ಸಾಧ್ಯವಾಗಿದೆಯಲ್ಲವೇ ?

**ಉ** : ಭಾಷೆ ಬಳಸಿಕೊಂಡಿಲ್ಲ. ಮೊದಲು ಕೂಡ 'ಹಳ್ಳಿ ಸಮಾಜ'ದ ಬಗ್ಗೆ ಬರೀತಿದ್ರು, ಇಲ್ಲವೆಂತಲ್ಲ. ತಾರಾಶಂಕರ ಬಂದೋಪಾಧ್ಯಾಯ, ಬಂಕಿಮಚಂದ್ರರು ಮುಂತಾಗಿ. ಅವರೆಲ್ಲ ಕೆಳವರ್ಗಗಳ ಕಡೆ ನೋಡಿದ್ದಾರೆ. ಆದರೆ ಅದೇ ನೆಲೆಯಿಂದ ಬಂದವರಿಗೆ ಆ ಸ್ತರಗಳ ಬಗ್ಗೆ ಕೀಳರಿಮೆ ಇತ್ತು. ಅವರ ಒಳಮುಚ್ಚುಗತನ ಅವರ ಸರ್‌ನೇಮ್‌ಗಳಿಂದ ಮಾತ್ರ ಗೊತ್ತಾಗ್ತಿತ್ತು. ಆದರೆ ಸ್ವಾತಂತ್ರ್ಯಾನಂತರದಲ್ಲಿ ಈ ಬಗೆಯ ಕೀಳರಿಮೆ ಪ್ರಜಾಪ್ರಭುತ್ವದ ಪರಿಣಾಮವಾಗಿ ಕಡಿಮೆಯಾಗ್ತಾ ಬಂತು.

**ಪ್ರ** : ಬಂಗಾಳದ ಸಾಹಿತ್ಯಕ ಚಳುವಳಿಗಳ ಬೆಳವಣಿಗೆಯ ಬಗ್ಗೆ....

**ಉ** : ಪ್ರೋಗ್ರೆಸಿವ್ ರೈಟರ್ಸ್ ಮೂವ್‌ಮೆಂಟ್ ಬಂತು. ೧೯೪೦ರ ನಂತರ ಫ್ಯಾಸಿಸ್ಟ್ ವಿರೋಧಿ ಲೇಖಕರ ಸಂಘ ಬಂತು. ನಾನೂ ಮತ್ತು ವಿಷ್ಣು ಡೇ ಜಂಟಿ ಕಾರ್ಯದರ್ಶಿಗಳಾಗಿದ್ದೆವು. ಇನ್ನೊಂದು ಬದಿಗೆ ಕಾಂಗ್ರೆಸ್ ಬರಹಗಾರರ ಒಂದು ವಿಂಗ್ ಕೂಡಾ ಇತ್ತು, ಕಾಂಗ್ರೆಸ್ ಸಾಹಿತ್ಯ ಪರಿಷತ್ ಅಂತ. ಆದರೆ ಅದು ಬಹಳ ದಿನ ಉಳಿಯಲಿಲ್ಲ. ನಮ್ಮದು ಅದರ ಕೌಂಟರ್‌ಪಾರ್ಟ್ ಆಗಿದ್ದರೂ ರಾಷ್ಟ್ರೀಯ ಹಿತಾಸಕ್ತಿಯಿಂದ ಒಮ್ಮೊಮ್ಮೆ ನಾವೆಲ್ಲ, ಅಂದರೆ ತಾರಾಶಂಕರ ಬಂದೋಪಾಧ್ಯಾಯ, ಸುಬೋಧ್ ಘೋಷ್, ಪ್ರತಾಪ್‌ಚಂದ್ರ ಮತ್ತು ನಾನು ಕೂಡುತ್ತಿದ್ದೆವು. ನೇತಾಜಿಯವರು ಬಂದನಂತರ ಅದೂ ಪ್ರಭಾವವೂ ಆಯ್ತು. ನಮ್ಮೊಂದಿಗೆ ಶಕ್ತಿ ಚಟ್ಟೋಪಾಧ್ಯಾಯ ಇದ್ದರು. ನಾವೆಲ್ಲ ತುಂಬಾ ಐಡಿಯಲಾಜಿಕಲ್ ಆಗಿದ್ವಿ. ಒಟ್ಟಾರೆ ಎರಡನೇ ಮಹಾಯುದ್ಧದ ಆಸುಪಾಸಿನಲ್ಲಿ ಬಂಗಾಳಿ ಸಾಹಿತ್ಯದಲ್ಲಿ ಎಡಪಂಥೀಯ ನಿಲುವುಗಳು ಕಾಣಿಸಿಕೊಂಡವು. ನಾವೆಲ್ಲ ರಿಯಲಿಸ್ಟ್ ಆಗಿದ್ವಿ. ನಮ್ಮಲ್ಲಿಯೇ ಬಹಳ ಜನ 'ಸ್ಲೋಗನ್ ಮಾಂಗರ್ಸ್' ಇದ್ರು. ನಂತರದಲ್ಲಿ ಅವರೂ ಸಬ್ಜೆಕ್ಟಿವ್ ಆಗಿ ಬರೆಯಲು ಪ್ರಾರಂಭಿಸಿದರು.

**ಪ್ರ** : ನೀವಿದ್ದ ಈ ಗುಂಪು ಎಂದರೆ ಯಾರ್‍ಯಾರು ?

**ಉ** : ಸುರೇಶ್ ಬಸು, ಸಮರ್ ಸೇನ್, ಮಾಣಿಕ್ ಬಂದೋಪಾಧ್ಯಾಯ ಮತ್ತು ನಾನು ಹಾಗೂ ಇನ್ನು ಕೆಲವರು. ರವೀಂದ್ರರನ್ನು ವಿರೋಧಿಸಿ ತಾರಾಶಂಕರ ಬ್ಯಾನರ್ಜಿ, ಬುದ್ಧದೇವ ಬೋಸ್, ಅಚಿಂತ್ಯ ಸೇನ್‌ಗುಪ್ತಾ, ಮಾಣಿಕ್ ಬ್ಯಾನರ್ಜಿ (ಕಮ್ಯುನಿಸ್ಟ್ ಪಕ್ಷದ ಸದಸ್ಯ) ಮೊದಲಾದ ಪ್ರಗತಿಶೀಲ ಬರಹಗಾರರ ಪಡೆಯೇ ಸಿದ್ಧವಾಯಿತು. ಎ.ಸಿ.ಜೋಶಿ, ಸೋಮನಾಥ ಘೋಸ್, ಟಾಗೋರರ ನಂತರ ಪ್ರಗತಿಶೀಲ ಚಳುವಳಿಯಲ್ಲಿ ಸಾಕಷ್ಟು ಸೈದ್ಧಾಂತಿಕ ಕೆಲಸ ಮಾಡಿದರು.

**ಪ್ರ** : ಅದೇ ಹೊತ್ತಿಗೆ ಕನು ಸನ್ಯಾಲ್ ಮತ್ತು ಚಾರು ಮುಜುಂದಾರ್‌ರ ನಕ್ಸಲ್ ಚಟುವಟಿಕೆಗಳ ಪ್ರಭಾವ ಸಾಹಿತ್ಯದ ಮೇಲಾಗಲಿಲ್ಲವೇ ? ಅಥವಾ ನಕ್ಸಲ್ ಸಾಹಿತಿಗಳ ಪಡೆ...

**ಉ** : ಸಾಕಷ್ಟು ಹೆಚ್ಚಾಗಿರಲಿಲ್ಲ. ಅವರ ಚಳುವಳಿ ಸಾಹಿತ್ಯದ ಮೇಲೆ ಪ್ರಭಾವ ಬೀರಲಿಲ್ಲ. ಏಕೆಂದರೆ ಅವರು 'ಐಡಿಯಾಲಜಿ'ಗೆ ಒಳಗಾಗಿ ಬರೆಹ ಬಿಟ್ಟು ಹೋರಾಟ ಮಾಡಿದರು. ಪೆನ್ ಬಿಟ್ಟು ಗನ್ ಹಿಡಿದರು. ಅವರಷ್ಟೇ ಅಲ್ಲ, ಅವರೊಂದಿಗಿದ್ದ ಹಲವರೂ ಹೋರಾಟದಲ್ಲಿ ಮುಳುಗಿ ಮೇಲೇಳಲೇ ಇಲ್ಲ. ನಮ್ಮೊಂದಿಗಿದ್ದ ಅರುಣ ಮಿತ್ರ, ಸರೋಜ ದತ್ತ ಅವರು ಕೊನೆಯಲ್ಲಿ ನಕ್ಸಲ್ ಲೀಡರ್ರು ಆಗಿದ್ರು.

**ಪ್ರ** : ಈ ಮಾತು ನಕ್ಸಲೀಯ ಸಾಹಿತಿಗಳಿಗಷ್ಟೇ ಅಲ್ಲ, ನೇರ ಹೋರಾಟಕ್ಕೆ ಇಳಿದಾಗ ಬರೆಹಗಾರರ ಸಾಹಿತ್ಯಿಕ ಮೌಲ್ಯ ಕುಸಿಯುತ್ತದೆ ಎಂಬ ಸಾಮಾನ್ಯ ಆರೋಪವಿದೆ. ನೀವು ಕೂಡ ಹೋರಾಟ ಮತ್ತು ಸಾಹಿತ್ಯ ಎರಡೂ ಕ್ಷೇತ್ರಗಳಲ್ಲಿ ಹೆಚ್ಚಿನ ಕೆಲಸ ಮಾಡಿದವರು. ನಿಮ್ಮ ಅನುಭವದ ಹಿನ್ನೆಲೆಯಲ್ಲಿ ಏನನ್ನಿಸುತ್ತದೆ ?

**ಉ** : ಹೌದು. ಸಿದ್ಧಾಂತಕ್ಕೆ ಕಮಿಟ್ ಆದಾಗ ಸತ್ಯ ಡಿಸ್ಟಾರ್ಟ್ ಆಗ್ತಾ ಹೋಗ್ತದೆ. ಬರವಣಿಗೆಯಲ್ಲಿ ಮುಕ್ತತೆ ಇರುವುದಿಲ್ಲ. ನಾನೂ ಸಂಘಟನೆಗಳಲ್ಲಿ ಬಹಳಷ್ಟು ಇನ್‌ವಾಲ್ವ್ ಆಗಿದ್ದೆ. ಹಾಗಾದಾಗ ಸಾಹಿತ್ಯದಿಂದ ಹೊರತಾಗಿರಬೇಕಾಗುತ್ತಿತ್ತು. ರೈತರ ಜೊತೆ, ಸೆಣಬಿನ ಕಾರ್ಖಾನೆ ಕಾರ್ಮಿಕರ ಜೊತೆ ಸಂಘಟನೆಯಲ್ಲಿ ತೊಡಗಿಸಿಕೊಂಡ ಕೆಲವರ್ಷ ನನಗೆ ಏನೂ ಬರೆಯಲಾಗಲಿಲ್ಲ. ಸುಮಾರು ಐದಾರು ವರ್ಷ ಪಾರ್ಟಿ ಕೆಲಸ ಮಾಡಿದೆ. ಏನೂ ಬರೆಯಲಿಲ್ಲ. ಆದರೆ ಆ ಅನುಭವ ನನ್ನ ಮುಂದಿನ ಬರಹಗಳಿಗೆ ಅಂತಸ್ಸತ್ವವನ್ನ ಕೊಡ್ತು.

**ಪ್ರ** : ಅಂತೆಯೇ ಬರವಣಿಗೆಯಲ್ಲಿ ಗಂಭೀರವಾಗಿ ತೊಡಗಿಸಿಕೊಂಡಾಗ ಪಾರ್ಟಿ ಕೆಲಸ, ಪಾರ್ಟಿ ಜೊತೆಗಿನ ಸಂಬಂಧ ಹೇಗಿತ್ತು ?

**ಉ** : ನಾನು ಪೂರ್ಣಾವಧಿ ಕಾರ್ಯಕರ್ತನಾಗಿದ್ದೆ. ೧೯೪೬ರಿಂದ ಪಕ್ಷದ ವರದಿಗಾರನಾಗಿದ್ದೆ. ಹಾಗಾಗಿ ಹಳ್ಳಿ ಹಳ್ಳಿ ಸುತ್ತಾಡಬೇಕಾಗುತ್ತಿತ್ತು. ಆ ಸಂದರ್ಭದಲ್ಲಿ ಗ್ರಾಮೀಣ ಬದುಕನ್ನು ಹತ್ತಿರದಿಂದ ಕಾಣುವಂತಾಯ್ತು. ಹಳ್ಳಿಗಳ ಭಾಷೆಯ ಪರಿಚಯವಾಯ್ತು. ಅದು ಮುಂದಿನ ನನ್ನ ಬರವಣಿಗೆಗೆ ನೆರವಾಯ್ತು. ಸ್ವಾತಂತ್ರ್ಯಕ್ಕೆ ಮುಂಚೆ ನಾನು ಜೈಲಿಗೆ ಹೋಗಲಿಲ್ಲ. ಆದರೆ ಸ್ವಾತಂತ್ರ್ಯಾನಂತರ ಭಾರತೀಯ ಸರಕಾರ ನನ್ನನ್ನು ಎರಡೂವರೆ ವರ್ಷ ಜೈಲಿಗೆ ಕಳಿಸಿತು. ೧೯೪೮ರ ನಂತರ ೧೯೬೮ರಲ್ಲಿ ಒಮ್ಮೆ ಜೈಲಿನಲ್ಲಿದ್ದೆ : ಹದಿನೈದು ದಿನ. ಸಂಯುಕ್ತ ರಂಗ ಮತ್ತು ಕಾಂಗ್ರೆಸ್ಸಿನ ಘರ್ಷಣೆಯ ಸಂದರ್ಭವದು. ಕಾಂಗ್ರೆಸ್ ಸರಕಾರ ನನ್ನನ್ನು ಜೈಲಿಗೆ ಹಾಕಿತ್ತು. ಆನಂತರ ನನ್ನ ಬದ್ಧತೆ ಇನ್ನೂ ಗಟ್ಟಿಯಾಗಿ ಪಕ್ಷದ ಕೆಲಸ ತೀವ್ರಗೊಳಿಸುವ ನಿರ್ಧಾರಕ್ಕೆ ಬಂದೆ. ಸೆಣಬಿನ ಕಾರ್ಮಿಕರನ್ನು ಸಂಘಟಿಸಿದೆ. ಆಗಷ್ಟೇ ಮದುವೆಯಾಗಿ ಎರಡು ವರ್ಷ ಹಳ್ಳಿಗಳಲ್ಲಿ ಇದ್ದೆ. ಆ ಅನುಭವ ನನಗೆ ತುಂಬಾ ಕೆಲಸಕ್ಕೆ ಬಂತು. ನಾವು ಕಮ್ಯುನಿಸ್ಟರು ಬದುಕನ್ನ, ಸಮಾಜವನ್ನ ಒಂದು ರೀತಿಯಲ್ಲಿ ನೋಡ್ತೇವೆ. ಆದರೆ ಸಾಮಾನ್ಯ ಜನ ಬೇರೆಯದೇ ರೀತಿಯಲ್ಲಿ ಕಾಣುತ್ತಾರೆ ಅಂತಾ ಆಗ ಗೊತ್ತಾಯ್ತು. ನಮಗೆ ಆಂದೋಲನ ಚಳುವಳಿಗಳು ಗೊತ್ತಿದ್ದವು. ನಮ್ಮ ಸಿದ್ಧಾಂತಕ್ಕಾಗಿ ನಾವು ಚಳುವಳಿ ಮಾಡ್ತಿದ್ವಿ. ಜನ ತಮ್ಮ ಬಯಕೆಗಳ ಈಡೇರಿಕೆಗಾಗಿ ಚಳುವಳಿಗೆ ಬರುತ್ತಿದ್ದರು. ಹೆಂಡತಿಗೆ ಒಂದು ಸೀರೆ, ಮಕ್ಕಳಿಗೆ ಒಂದೆರಡು ಅಂಗಿ ತಗೊಳ್ಳಬೇಕು. ಅವೇ

ಅವರ ಮಹತ್ವದ ಸಂಗತಿಗಳಾಗಿರುತ್ತಿದ್ದವು ಹೊರತು ಕ್ರಾಂತಿಯಲ್ಲ. ಈ ಅಂಶಗಳು ನನ್ನ ಬರವಣಿಗೆ ಮೇಲೆ ಬಹುವಾಗಿ ಪ್ರಭಾವ ಬೀರಿದವು. ನನ್ನ ಕಾವ್ಯದಲ್ಲಿ ಬದಲಾವಣೆ ಆಯ್ತು. ಆ ನಂತರ ನನಗೆ 'ಜೊತದೂರ್ ಜಾಯ್' ಸಂಕಲನಕ್ಕೆ ಅಕಾಡೆಮಿಯ ಪ್ರಶಸ್ತಿ ಬಂತು. ನನ್ನ ಮೊದಲ ಸಂಕಲನ 'ಪದಾತಿಕ್'ನಲ್ಲಿ ಅಬ್ಬರದ ದನಿ ಇತ್ತು. ಛಂದಸ್ಸು ಇತ್ತು. ನಂತರ 'ಕಂಟೆಂಟ್' ಕಡೆ ಗಮನ ಕೊಟ್ಟೆ. ಹೀಗೆ ಬದಲಾವಣೆ ಆಯ್ತು. ನಂತರ ಗದ್ಯ ಬರೆದೆ.

ಪ್ರ : ಒಂದು ಚಳುವಳಿ ಕುರಿತಂತೆ 'ಜನ' ಹಾಗೂ 'ಪಕ್ಷ' ಈ ಎರಡರ ನಡುವಿನ ವ್ಯತ್ಯಾಸದ ಗ್ರಹಿಕೆ ನಿಮಗಾದ ಮೇಲೆ ಸಾಹಿತಿ ಹಾಗೂ ಪಕ್ಷದ ಕಾರ್ಯಕರ್ತ ಎರಡೂ ಆದ ನೀವು ಪಕ್ಷದೊಂದಿಗೆ ಸಮನ್ವಯ ಸಾಧಿಸಲು ಹೇಗೆ ಸಾಧ್ಯವಾಯ್ತು ?

ಉ : ಮೊದಲು ಪಕ್ಷದ ಒಳಗೆ ಎಲ್ಲವನ್ನೂ ಒಪ್ಪಿಕೊಳ್ಳುತ್ತಿದ್ದವನು ಈಗ ಪ್ರಶ್ನಿಸಲಾರಂಭಿಸಿದೆ, ಚರ್ಚಿಸಿದೆ; ಸಮ್ಮೇಳನ, ಸಭೆಗಳಲ್ಲಿ. ನಾಯಕತ್ವ ಇದನ್ನ ಇಷ್ಟಪಡಲಿಲ್ಲ. ಆಂತರಿಕ ಸಂಘರ್ಷ ನಡೀತು. ನಿಧಾನಕ್ಕೆ ಭಿನ್ನಾಭಿಪ್ರಾಯಗಳು ಕಾಣಿಸಿಕೊಂಡವು.

ಪ್ರ : ನೀವು ಪಕ್ಷದ ಕಾರ್ಯಕರ್ತರಾಗಿದ್ದು ಬರೆಹದಲ್ಲಿ ತೊಡಗಿಸಿಕೊಂಡಿದ್ದ ಹೊತ್ತಿನಲ್ಲಿ ಆಗಿನ ಉಳಿದ ಬರಹಗಾರರೊಂದಿಗೆ ಸಂಬಂಧ ಹೇಗಿತ್ತು ?

ಉ : ನಾನಾಗ ಪಕ್ಷಕ್ಕಾಗಿ ಹಳ್ಳಿಗಳಲ್ಲಿ ಕೆಲಸ ಮಾಡಿ ಆಗಾಗ ಕಲ್ಕತ್ತಾಕ್ಕೆ ಬರ್ತಿದ್ದೆ. ಕೆಲವರ್ಷ ಸ್ತೈಮನ್ ಎಂಬ ಹಡಗಿನ ಕಂಪನಿಯಲ್ಲಿ ಕೆಲಸ ಮಾಡಿದೆ. ಆಗ ಕಾಫಿ ಹೌಸಿನ ಬುದ್ಧಿಜೀವಿಗಳು ನನ್ನನ್ನು ಗೇಲಿ ಮಾಡ್ತಿದ್ರು. ಓಹೋ ಬರಹಕ್ಕೆ ಸ್ಫೂರ್ತಿ ಪಡೆಯಲು ಹಳ್ಳಿಗೆ ಹೋಗಿದ್ದಾನೆ ಎಂದು ನಗುತ್ತಿದ್ದರು. ನಂತರ ನಾನು ಪತ್ರಿಕೆಗಳಲ್ಲಿ ಕೆಲಸ ಮಾಡಿದೆ, ಕಲ್ಕತ್ತಾದಲ್ಲಿದ್ದುಕೊಂಡೇ. ಆಗ ಒಂದಿಷ್ಟು ಸಾಮಿಪ್ಯ ಸಾಧ್ಯವಾಯ್ತು. ಸತ್ಯಜಿತ್ ರೇ ಜೊತೆ ಸೇರಿ ಮಕ್ಕಳಿಗಾಗಿ ಒಂದು ಪತ್ರಿಕೆ ಮಾಡಿದೆ, "ಸಂದೇಶ್" ಅಂತಾ. ಈಗ್ಲೂ ಇದೆ ಅದು. ಆಮೇಲೆ ಅದನ್ನು ಬಿಟ್ಟು ಜಾಹಿರಾತು ಅನುವಾದಕನಾಗಿ ಕೆಲಸ ಮಾಡಿದೆ. ಆ ನಂತರ 'ಆಫ್ರೋ-ಏಷ್ಯನ್ ರೈಟರ್ಸ್ ಮೂವ್‌ಮೆಂಟ್' ಜೊತೆ ಸೇರ್ಕೊಂಡೆ. ಹಾಗಾದಾಗ ವರ್ಷದಲ್ಲಿ ನಾಲ್ಕು ತಿಂಗಳು ವಿದೇಶದಲ್ಲಿರ್ತಿದ್ದೆ. ಹೀಗೆ ನಾನು ೧೯೪೨ರಿಂದ ೮೨ರ ತನಕ ಸಿ.ಪಿ.ಐ. ಪಕ್ಷದಲ್ಲಿದ್ದೆ. ಆ ನಂತರ ಪಕ್ಷದ ಜೊತೆ ಅಭಿಪ್ರಾಯ ಭೇದದಿಂದಾಗಿ ಸದಸ್ಯತ್ವವನ್ನು ನವೀಕರಿಸಲಿಲ್ಲ.

ಪ್ರ : ಕಳೆದ ಎರಡು ದಶಕಗಳಿಂದ ಬಂಗಾಳದಲ್ಲಿ ಎಡರಂಗ ಸರ್ಕಾರವಿದೆ. ಈ ಪ್ರಭುತ್ವದೊಂದಿಗೆ ಸಂಬಂಧಪಿಟ್ಟುಕೊಂಡವರ ಬರೆಹ ಮತ್ತು ಬರೆಹಗಾರರ ಮೇಲೆ ಪ್ರಭುತ್ವದ ಸಾಮಿಪ್ಯವು ಪ್ರಭಾವ ಬೀರಿದೆಯೇ ?

ಉ : ಬರೆಹದಲ್ಲಿ ಇಂಟರ್‌ಫಿಯರೆನ್ಸ್ ಇರಲಿಲ್ಲ. ಆದರೆ ಇನ್‌ಫ್ಲೂಯೆನ್ಸ್ ಇರ್ತಿತ್ತು. ಚುನಾವಣಾ ಸಂದರ್ಭದಲ್ಲಿ ಬರೆಹಗಾರರ ಬಳಕೆಯಾಗ್ತಿತ್ತು. ಬೆಂಗಾಲ್ ಕಲ್ಚರಲ್ ರೀಸರ್ಚ್ ಸೆಂಟರ್ ಇದೆ. ಸಚಿವರಾದ ಸುಭಾಷ್ ಚಕ್ರವರ್ತಿ ಅದನ್ನ ನಿಭಾಯಿಸುತ್ತಿದ್ದಾರೆ. ಹೀಗೆ ಸರಕಾರ ಮತ್ತು ಬರೆಹಗಾರರ ನಡುವೆ ಪರಸ್ಪರ ಪ್ರಭಾವವಿದ್ದೇ ಇದೆ. ಸಾಮೀಪ್ಯವಿರುವಂತೆಯೇ ಅಂತರವೂ ಇದೆ. ಇದರಿಂದ ಸಾಹಿತ್ಯ ಕ್ಷೇತ್ರಕ್ಕೆ ಧಕ್ಕೆಯಾಗಿಲ್ಲ.

(ಈ ತನಕ ನಮ್ಮ ನಡುವೆ ಇದ್ದ 'ಸಾಹಿತ್ಯ ಮತ್ತು ರಾಜಕಾರಣ'ದ ಬಗೆಗಿನ ಚರ್ಚೆಯನ್ನು ನೇರವಾಗಿ 'ಸಾಹಿತ್ಯ'ದ ಕುರಿತಂತೆಯೇ ಕೇಂದ್ರೀಕರಿಸಬೇಕೆನ್ನಿಸಿತು.)

ಪ್ರ : ಇಂದಿಗೂ ಬಂಗಾಳಿ ಸಾಹಿತ್ಯ ರಬೀಂದ್ರರ ಪ್ರಭಾವದಿಂದ ಪೂರ್ಣವಾಗಿ ಮುಕ್ತವಾಗಿಲ್ಲ ಎಂಬ ಮಾತಿದೆಯಲ್ಲ ?

ಉ : ಅದನ್ನು ಇಡಿಯಾಗಿ ಹೇಳೋಕ್ಕಾಗಲ್ಲ. ನಾವು ಟಾಗೋರರಿಂದ ಪ್ರಜ್ಞಾಪೂರ್ವಕವಾಗಿ ಭಿನ್ನವಾಗಿರಲು ಪ್ರಯತ್ನಿಸಿ ನಮ್ಮನ್ನು ನಾವೇ ಮಾಡರ್ನ್ ಪೊಯೆಟ್ಸ್ ಅಂತಾ ಕರೆದುಕೊಂಡ್ವಿ. ಅಂತಹ ದೊಡ್ಡ ವ್ಯಕ್ತಿತ್ವದೆದುರು ನಮ್ಮ ಕಾಲ ಮೇಲೆ ನಾವು ನಿಂತುಕೊಳ್ಳುವ, ಸ್ವತಂತ್ರವಾಗಿ ಗುರುತಿಸಿಕೊಳ್ಳುವ ಪ್ರಯತ್ನಪಟ್ವಿ. ಸಣ್ಣ ಮಗು ಗೋಡೆಯನ್ನು ಹಿಡಿದುಕೊಂಡು ನಡೆಯುವಂತೆ. ಆ 'ಗೋಡೆ' ರವೀಂದ್ರರೇ ಆಗಿದ್ದರು. ರವೀಂದ್ರರು ಮಾರ್ಡನ್ ಅಲ್ಲ, ರೊಮ್ಯಾಂಟಿಕ್ ಅಂತಾ ಹೇಳ್ತಿದ್ವಿ. ಅವರ ಕರ್ತೃತ್ವಶಕ್ತಿ ಒಪ್ಪಿಕೊಂಡಿದ್ವಿ. ನಾವು 'ಸೆಕ್ಟೇರಿಯನ್' ಮತ್ತು 'ಡಾಗ್ಮೆಟಿಕ್' ಆಗ್ತಾ ಹೊರಟಂತೆ ರವೀಂದ್ರರನ್ನು ಬೂರ್ಶ್ವಾ ಎಂದು ಕರೆದ್ವಿ. ಒಟ್ಟಾರೆ ರವೀಂದ್ರರ ಜೊತೆ 'ಲವ್ ಅಂಡ್ ಹೇಟ್' ಸಂಬಂಧವಿತ್ತು. ಆದರೆ ಅವರ ಪ್ರಭಾವಕ್ಕೆ ಋಣಿಯಾಗಿದ್ವಿ. ಇದನ್ನು ಆಗ ಹೇಳ್ತಾ ಇರಲಿಲ್ಲ. ವಿರೋಧಿಸ್ತಿದ್ವಿ. ಆದರೆ ಕೊನೆಗೆ ಒಪ್ಪಿಕೊಂಡ್ವಿ. ಏಕೆಂದ್ರೆ ಕಮ್ಯುನಿಸಂ ಅನ್ನು ತಪ್ಪಾಗಿ ಅರ್ಥಮಾಡಿಕೊಂಡಿದ್ವಿ. ಕಮ್ಯುನಿಸಂ ಅನ್ನೋದು ಕನ್‌ಸಿಸ್‌ಟೆಂಟ್ ಹ್ಯೂಮನಿಸಂ ಎಂದು ತಿಳಿದುಕೊಳ್ಳಲಿಲ್ಲ. ನಾವು ಬರೀ ಕ್ಲಾಸ್ ಸ್ಟ್ರಗಲ್ ಬಗ್ಗೆ ಯೋಚಿಸ್ತಿದ್ವಿ. ಮಾತಾಡಿದ್ವಿ. ಹಾಗಾಗಿ ಹ್ಯೂಮನಿಸ್ಟ್ ಅಪ್ರೋಚ್‌ನಲ್ಲಿ ಬರೆದ ಟಾಗೋರ್ ಮತ್ತಿತರೆ ಕವಿಗಳು ಮಹತ್ವದವರೆನಿಸಲಿಲ್ಲ. ಕಮ್ಯುನಿಸ್ಟ್ ರೈಟರ್ಸ್ ಆಗಿ ನಾವು ರಶಿಯನ್ ರೈಟರ್ಸ್ ಕಡೆ ನೋಡಿದ್ವಿ. ನಾವು ನಮ್ಮದೇ ಆದ ಟ್ರೆಡಿಶನ್‌ಗಳನ್ನು ನಿರ್ಲಕ್ಷಿಸಿದ್ವಿ. ಇದರಿಂದ ನಮಗೆ ಅನಿಸಿದ್ದು ಅನುಭವಗಳನ್ನು ಪುಸ್ತಕಗಳಿಂದ ಪಡೆಯದೇ ಜೀವಂತ ಬದುಕಿನಿಂದ ಪಡೆಯಬೇಕು ಎನ್ನುವುದು.



೧೯೪೦-೫೦ರ ನಂತರ ಫ್ರೆಂಚ್ ಕ್ರಾಂತಿಯ ಪ್ರಭಾವ ಇಂಗ್ಲಿಷಿನ ಅನುವಾದದ ಮೂಲಕ ಬಂತು. ನಾವು ಸದಾ ಹೊರಗೆ ನೋಡ್ತಿದ್ವಿ. ಆದರೆ ಭಾರತದ ಬೇರೆ ಬೇರೆ ಭಾಷೆಗಳ ಕಡೆಗೆ ನೋಡ್ಲಿಲ್ಲ. ಅದೇ ಗ್ರಹಿಕೆಯಲ್ಲಿ ಬರೆದೆವು. ಸ್ವಾತಂತ್ರ್ಯಾನಂತರ ಹೊಸ ವಿಚಾರ ಬಂತು. ನಮ್ಮ ಭಾಷೆಗಳಲ್ಲೇ ಒಂದು ಟ್ರೆಡಿಷನ್ ಇದೆ ಎಂದು ನಿಧಾನಕ್ಕೆ ಗೊತ್ತಾಯ್ತು. ಯುರೋಪಿಯನ್ ಭಾಷೆಗಳ ಪ್ರಭಾವದಿಂದ ಬಂಗಾಳಿ ಭಾಷೆ ಮಾಡರ್ನೈಸ್ ಆಯ್ತು. ಟ್ರೆಡಿಷನಲ್ ಆಗಿದ್ದ ಭಾರತೀಯ ಭಾಷೆಗಳೂ ನಿಧಾನವಾಗಿ ಅಂತರರಾಷ್ಟ್ರೀಯ ಸತ್ವ ಪಡೆದುಕೊಳ್ಳ ತೊಡಗಿದವು. ಒಂದೆಡೆ ಅಂತರರಾಷ್ಟ್ರೀಯ, ಇನ್ನೊಂದೆಡೆ ರಾಷ್ಟ್ರೀಯ, ಹೀಗೆ ಅದರ ಸ್ವರೂಪ ಸಮ್ಮಿಳಿತಗೊಂಡಿತು. ನಾವು ಮುಂಚೆ ಬಂಗಾಳಿ ಇತಿಹಾಸಕ್ಕೆ ಮಹತ್ವ ಕೊಡ್ತಿರಲಿಲ್ಲ. ನಿಧಾನವಾಗಿ ನಂತರ ಅದು ಸಾಧ್ಯವಾಯ್ತು. ಅಂದ್ರೆ ಅದು ನಮ್ಮ ರಕ್ತದಲ್ಲೇ ಇತ್ತು. ಇದನ್ನು ನಾವು 'ಶಿಷ್ಟರು' ತಿಳಿದುಕೊಳ್ಳದೇ ಇದ್ರೆ ಗ್ರಾಮೀಣ ಜನಸಾಮಾನ್ಯರ ಜೊತೆ ಬೆರೆಯೋಕ್ಕಾಗಲ್ಲವೆಂದು ನಂತರ ಮನವರಿಕೆ ಮಾಡಿಕೊಂಡೆವು. ಟಾಗೋರರಿಗೆ ಗ್ರಾಮದ ಜೊತೆ ಸಂಬಂಧವಿತ್ತು. ಹಾಡುಗಳನ್ನು ತಿಳಿದಿದ್ದರು. ಮನೆಯಲ್ಲಿ ಕೆಲಸದವರಿಂದ, ಮತ್ತು ಅಜ್ಜಿಯಿಂದ ಕತೆ ಕೇಳುತ್ತಿದ್ದರು. ನಂತರ ಫೋಕ್ ರೈಮ್ಸ್ ಕಲೆಕ್ಟ್ ಮಾಡಿದ್ರು. ಅಂತೆಯೇ ಶರತ್‌ಚಂದ್ರ, ಬಂಕಿಮಚಂದ್ರ ಇವರಿಗೂ ಜಾನಪದ ಪರಂಪರೆ ಇತ್ತು. ಹೀಗೆ ಫೋಕ್‌ಲೋರ್ ಎಂಬುದು ತನ್ನಲ್ಲೇ ಒಳಗೊಳ್ಳದೆ ಇದ್ರೆ ಯಾವ ಲೇಖಕನೂ ರಾಷ್ಟ್ರೀಯ ಲೇಖಕನಾಗಲು ಸಾಧ್ಯವಿಲ್ಲ.

ಪ್ರ : ಬದುಕು ಮತ್ತು ಬರೆಹದ ನಡುವಿನ ಸಂಬಂಧ ಕುರಿತು ?

ಉ : ಬರೆಹಗಾರನ ಬದುಕು ಮತ್ತು ಬರೆಹ ಎರಡೂ ಒಂದೇ ಆಗಬೇಕು. ಆದರೆ ಅನೇಕ ಸಂದರ್ಭಗಳಲ್ಲಿ ಸರಕಾರೀ ನೌಕರ ಸಾಹಿತಿಯಾದಾಗ, ಬರವಣಿಗೆಯಲ್ಲಿ ಕಾಂಪ್ರಮೈಸ್ ಇಲ್ದಿದ್ರೂ, ಕಛೇರಿಯಲ್ಲಿ ಕಾಂಪ್ರಮೈಸ್ ಮಾಡಿಕೊಳ್ಳಲೇಬೇಕು. ಅನೇಕ ಬಾರಿ ಇವೆರಡೂ ಒಂದೇ ಆಗಲು ಸಾಧ್ಯವೇ ಇಲ್ಲ. ಇದು 'ಫ್ರೀಡಂ ಆಫ್ ರೈಟಿಂಗ್' ಮತ್ತು 'ಫ್ರೀಡಂ ಆಫ್ ಕಲ್ಚರ್'ಗೆ ಸಂಬಂಧಿಸಿದ ಪ್ರಶ್ನೆಯೂ ಹೌದು. ಸೂಕ್ಷ್ಮ ಸಂಗತಿ ಇದು. ಆನಂದ ಬಜಾರ್ ಪತ್ರಿಕಾ ಸಮೂಹದ ಬರೆಹಗಾರರಲ್ಲಿ ಹೆಚ್ಚು ಪಾಲು ಪ್ರಮುಖ ಸಾಹಿತಿಗಳದ್ದೇ. ಏನೇ ಆದರೂ ಹಣ ಪೆನ್ನನ್ನು ಹಿಡಿಯುತ್ತದೆ. ಲೇಖಕನಿಗೆ ಸ್ವಾತಂತ್ರ್ಯ ವಿರ್ತದೆ. ಆದ್ರೂ ಧಕ್ಕೆ ಬರ್ತದೆ. ಮುಕ್ತ ಮನಸ್ಸಿನಿಂದ ಬರೆಯಲು ಸಾಧ್ಯವಿಲ್ಲ. ಬರೆಯುವವರ ಧೋರಣೆ ಏನೇ ಇದ್ದರೂ ಆ ಪತ್ರಿಕೆಯ ಧೋರಣೆಗೆ ಪೂರಕವಾಗೇ ಇರಬೇಕಾಗುತ್ತದೆ. ಇದೂ ಕೂಡ ಆ ಮಟ್ಟಿಗೆ ಬದುಕುವುದಕ್ಕಾಗಿ ಧೋರಣೆಗಳೊಂದಿಗೆ ರಾಜಿ ಆದಂತೆಯೇ !

ಪ್ರ : ಇತ್ತೀಚಿನ ಬರೆಹಗಾರರ ಬಗ್ಗೆ ?

ಉ : ಇತ್ತೀಚೆಗೆ ಬರೆಯುತ್ತಿರುವವರಲ್ಲಿ ಮಧ್ಯಮ ಮತ್ತು ಕೆಳವರ್ಗಗಳಿಂದ ಬಂದ ಬರೆಹಗಾರರು ಗಮನ ಸೆಳೆಯುತ್ತಿದ್ದಾರೆ. ಆದರೆ ಬಂಗಾಳಿ ಬರೆಹಗಾರರು ತಮ್ಮ

ಭಾಷೆ ಬಿಟ್ಟರೆ ಬೇರೆ ಭಾಷೆಯಲ್ಲಿ ಏನಾಗಿದೆ ಅಂತ ತಲೆ ಕೆಡಿಸಿಕೊಳ್ಳೋದೇ ಇಲ್ಲ! ಆದ್ರೆ ಕನ್ನಡದ ಸುಮತೀಂದ್ರ ನಾಡಿಗರು ಇಲ್ಲಿಗೆ ಬಂದ ನಂತರ ಬಂಗಾಳಿ ಕಲೀತಾರೆ. ಬುದ್ಧದೇವ ಬಸು, ಅಮಿಯ ಚಕ್ರವರ್ತಿ ಅವರಂಥವರೂ ಇಂಗ್ಲಿಷ್ ಕಲಿತೇ ಬಂಗಾಳಿ ಬರೆದರು. ಈ ಬಗೆಯಲ್ಲಿ ಅನ್ಯಭಾಷಾ ಸಾಹಿತ್ಯ ಕ್ಷೇತ್ರದಲ್ಲಾಗುವ ಬೆಳವಣಿಗೆಗಳನ್ನು ಬಂಗಾಳೀ ಬರಹಗಾರರು ಗಮನಿಸಬೇಕಾಗಿದೆ.

ಕಲ್ಕತ್ತಾ ಬಾಬು ಕಲ್ಚರ್‌ನಲ್ಲಿದೆ. ಅದು ಎಲೀತಿಸ್ಟ್ ಕಲ್ಚರ್. ಆದರೆ ಬಂಗಾಳದ ಸಂಸ್ಕೃತಿ ಬಾಬುಗಳದ್ದಲ್ಲ. ನಿಜ ಬಂಗಾಳದ ಸಂಸ್ಕೃತಿ ಮತ್ತು ಆಚರಣೆಗಳಿಗಿಂತ ಭಿನ್ನವಾಗಿ ನಗರ ಸಂಸ್ಕೃತಿ ಇದೆ. ನಾವು ಬಹುರಾಷ್ಟ್ರೀಯ ಕಂಪನಿಗಳನ್ನು ಓಲೈಸತೊಡಗಿದ್ದೇವೆ. ಉದಾ: ರಸ್ತೆ ಅಗಲ ಮಾಡುವುದು. ಇದು ಬಹುರಾಷ್ಟ್ರೀಯ ಕಂಪನಿಗಳ ಓಡಾಟಕ್ಕೆ ಅನುವಾಗುವ ಅಗಲೀಕರಣ ಎಂದೇ ಅರ್ಥೈಸಿಕೊಳ್ಳಬೇಕು. ಹೊಸ ಕಲ್ಕತ್ತಾದಲ್ಲಿ ನೈಟ್ ಕ್ಲಬ್, ರೆಸ್ಟೋರೆಂಟ್ ಗೀಳು ಹೆಚ್ಚಾಗ್ತಿದೆ.

* * *

ಔಪಚಾರಿಕ ಸಂದರ್ಶನವೇನಲ್ಲದ ಸುಭಾಷ್ ಮುಖ್ಯೋಪಾಧ್ಯಾಯರೊಂದಿಗಿನ ಮಾತುಕತೆ, ಚರ್ಚೆಯ ಸ್ವರೂಪ ಪಡೆದು ಮುಗಿದ ಹೊತ್ತಿಗೆ ಎರಡು-ಮೂರು ತಾಸುಗಳೇ ಕಳೆದಿದ್ದವು. ಬದುಕಿನ ತುತ್ತತುದಿಗೆ ನಿಂತ ಸುಭಾಷರ ಮಾತುಗಳುದ್ದಕ್ಕೂ ವರ್ತಮಾನದ ಪ್ರಸ್ತಾಪ ಬಂದಾಗಲೂ ಭೂತದ ವಿವರಣೆಯೇ ಸಿಗುತ್ತಿತ್ತು. ಇಷ್ಟು ಹೊತ್ತು ಕುಳಿತಲ್ಲಿಯೇ ಕುಳಿತ ಎಂಬತ್ತರ ಆಸುಪಾಸಿನ ಗಟ್ಟಿಗ ಮುಖ್ಯೋಪಾಧ್ಯಾಯರನ್ನು ಇನ್ನೂ ಹೆಚ್ಚು ದಣಿಸುವುದು ಸಾಕೆನಿಸಿತ್ತು.

ಸುಭಾಷ್ ಮುಖ್ಯೋಪಾಧ್ಯಾಯರು ನೇರವಾಗಿ ಮಾರ್ಕ್ಸ್‌ವಾದಿ ಚಳುವಳಿಗಳೊಂದಿಗಿದ್ದು, ಸಾಹಿತ್ಯದ ಶೃಂಗವನ್ನೂ ಏರಿದವರಾದ್ದರಿಂದ ಎಲ್ಲ ಕಡೆಯ ಮಾರ್ಕ್ಸ್‌ವಾದೀ ಬರಹಗಾರರಿಗೆ ಕಾಡುವ ಪ್ರಶ್ನೆಗಳೇ ಇವರೊಂದಿಗಿನ ಚರ್ಚೆಯಲ್ಲಿ ಮುಖ್ಯವೆನಿಸಿದ್ದವು. ಪುಟ್ಟ ಪ್ರಶ್ನೆಗೂ ಸವಿವರ ನೀಡುವ ಅವರ ಓಘವನ್ನು ತಡೆಯಲಾದೀತೇ ? ಹಾಗೆಂದೇ ಇನ್ನೂ ಕೇಳಲೇಬೇಕಿದ್ದ ಪ್ರಶ್ನೆಗಳು ಹಾಗೆಯೇ ಉಳಿದವು. ಭಾಷೆಯ ತೊಡಕಿನದಂತೂ ಹೇಳತೀರದು. ಕುಮಾರಪ್ಪನವರಿಗೆ 'ಬಂಗಾಳಗನ್ನಡ' ದ ಡಬಲ್ ಡ್ಯೂಟಿ.

ನಲ್ವತ್ತು ವರ್ಷ ಕಮ್ಯುನಿಸ್ಟ್ ಪಕ್ಷದಲ್ಲಿದ್ದು, ನಂತರ ಜ್ಞಾನಪೀಠ ಪಡೆದ ಇವರು ಕೊನೆಕೊನೆಗೆ ಕಾಂಗ್ರೆಸ್ ಕಡೆ ವಾಲಿದರು ಎಂಬ ಗುನುಗನ್ನೂ ನಾನು ನಂತರ ಕೇಳಿಸಿಕೊಂಡೆ. ಅದನ್ನು ವಿವರಿಸುವುದಾದರೂ ಹೇಗೆ ? ಬಹುಶಃ ಹೀಗೆ ಕೊನೆಗೊಳಿಸಿದರೆ ಸಾಕೆನಿಸುತ್ತದೆ : ಕ್ರಾಂತಿಕವಿಯ ಮಾತುಗಳ ನಡುವೆ ಬಿಳಿಯ ಬೆಣ್ಣೆ ಕೂದಲುಗಳ ನಾಯಿಮರಿಯೊಂದು ಬಂದು ಅವರ ತೊಡೆಯೇರಿ ಕೂಡಿ ಕಾಡುತ್ತಿತ್ತು. ಅವರನ್ನಾವರಿಸಿತ್ತು. ಅದನ್ನು ಗದರಿಸಿಯೂ ಅಪ್ಪಿಕೊಳ್ಳುವ ಸುಭಾಷರ ಕನ್ನಡಕದಾಚೆನ ಕಣ್ಣುಗಳಲ್ಲಿ ಬದುಕ ಪ್ರೀತಿಯ ಅನುಸಂಧಾನದ ತುಂಟ ನಗೆಯಿತ್ತು.

ಬಿ. ಪೀರ್‌ಬಾಷ
ಪಿಂಜಾರ್ ಓಣಿ, ಹೂವಿನ ಹಡಗಲಿ

# ಕನಕಪುರದ ಪ್ರಾಚೀನ ರಂಗನಾಥ ಶಿಲ್ಪ



*ನದಿಯಲ್ಲಿ ದೊರೆತ ರಂಗನಾಥ ಶಿಲ್ಪ ಕ್ರಿ.ಶ. ಸುಮಾರು ೧೩ನೇ ಶತಮಾನ*

ವೈಷ್ಣವ ಧರ್ಮಕ್ಕೆ ಸಂಬಂಧಿಸಿದಂತೆ ರಾಮ, ಕೃಷ್ಣ, ವಿಷ್ಣು, ವೆಂಕಟರಮಣ, ಹನುಮಂತ, ರಂಗನಾಥ ಹೀಗೆ ಹಲವಾರು ನಾಮಗಳ ದೇವತೆಗಳಿವೆ. ಭಾರತೀಯ ಪರಂಪರೆಯಲ್ಲಿ ಬೆಳೆದುಬಂದಿರುವ ವೈಷ್ಣವ ಧರ್ಮದಲ್ಲಿ ರಂಗನಾಥನಿಗೆ ಆದ್ಯ ಸ್ಥಾನವಿದೆ. ಕರ್ನಾಟಕದಲ್ಲಿ ಬಾದಾಮಿ ಚಾಲುಕ್ಯರ ಕಾಲದಲ್ಲಿಯೇ(ಸುಮಾರು ಕ್ರಿ. ಶ. ೭ನೇ ಶತಮಾನ)ದಶಾವತಾರ ಚಿತ್ರಗಳನ್ನುಳ್ಳ, ಶಯನಾಸ್ಥಿತಿಯಲ್ಲಿರುವ, ರಂಗನಾಥನ ಶಿಲ್ಪವಿದೆ.

ಶ್ರೀರಂಗಪಟ್ಟಣದ ರಂಗನಾಥ, ಬಿಳಿಗಿರಿರಂಗನಬೆಟ್ಟದ ರಂಗನಾಥ, ಮಾಗಡಿಯ ರಂಗನಾಥ ಹೀಗೆ ನಮ್ಮ ರಾಜ್ಯದ ಹಲವಾರು ಕಡೆಗಳಲ್ಲಿ ರಂಗನಾಥನ ದೇವಾಲಯಗಳು ಪ್ರಸಿದ್ಧಿಯನ್ನು ಪಡೆದಿವೆ.

ರಾಮಾನುಜಾಚಾರ್ಯರ (ಕ್ರಿ. ಶ. ೧೨ನೇ ಶತಮಾನ) ಪ್ರಭಾವದಿಂದ ಕರ್ನಾಟಕದಲ್ಲೆಲ್ಲಾ ಶ್ರೀವೈಷ್ಣವ ಆರಾಧನೆ ತೀವ್ರ ಚಟುವಟಿಕೆಯಿಂದ ನಡೆಯುತ್ತಿದೆ. ಕನಕಪುರ ತಾಲೂಕಿಗೂ ಈ ಒಂದು ಪ್ರಭಾವ ಹರಡಿ ಶ್ರೀವೈಷ್ಣವ ಧರ್ಮ ಪಸರಿಸಿದೆ.

ಇತ್ತೀಚೆಗೆ ಅರ್ಕಾವತಿ ನದಿಯ ದಕ್ಷಿಣದ ಸೇತುವೆಯ ಬಳಿ ರಂಗನಾಥನ ವಿಗ್ರಹವೊಂದು ದೊರೆತಿದೆ. ಈ ಶಿಲ್ಪದಲ್ಲಿ ರಂಗನಾಥನು ಪವಡಿಸಿದ್ದು ಪಾದಗಳ ಬಳಿ ಕಮಲದ ಪುಷ್ಪವಿದೆ. ಚತುರ್ಭುಜಗಳನ್ನು ಹೊಂದಿರುವ ಈ ಮೂರ್ತಿಗೆ ಈಗ ಉಳಿದಿರುವುದು ಮೂರು ಕೈಗಳು ಮಾತ್ರ. ಮುಂದಿನ ಬಲದ ಕೈ ಶಿರಕ್ಕೆ ಆಸರೆ ಆಗಿದ್ದರೆ ಬಲದ ಹಿಂದಿನ ಕೈಯಲ್ಲಿ ಚಕ್ರವಿದೆ. ಮುಂದಿನ ಎಡದ ಕೈಯನ್ನು ಶರೀರದ ಮೇಲ್ಗಡೆಯೇ ಚಾಚಿದಂತಿದ್ದು, ಶಂಖವನ್ನು ಹಿಡಿದಿರಬೇಕಿದ್ದ ಎಡದ ಕೈ ಸಂಪೂರ್ಣವಾಗಿ ಒಡೆದುಹೋಗಿದೆ. ಶಿರದಲ್ಲಿ ಮುಕುಟ. ಕೊರಳು, ತೋಳು ಮತ್ತು ಮುಂಗೈಗಳಲ್ಲಿ ಆಭರಣಗಳಿವೆ. ಶರೀರದ ಕೆಳಭಾಗದಲ್ಲಿ ಪೋಷಾಕು ಧರಿಸಿದೆ. ಇದರ ಮೇಲೆ ಉದ್ದನೆಯ ಕಂಠೀಹಾರವಿದೆ. ಮಂದಸ್ಮಿತನಾಗಿರುವ ಮುಖಚರ್ಯೆಯನ್ನು ಹೊಂದಿರುವ ಈ ಶಿಲ್ಪವನ್ನು ಕರಿಯ ಗ್ರಾನೈಟ್‌ನಿಂದ ರಚಿಸಲಾಗಿದ್ದು ಇದರ ಉದ್ದ ಆರು ಅಡಿಗಳು, ಅಗಲ ಎರಡು ಅಡಿಗಳು.

ಪ್ರಾಚೀನತೆಯ ದೃಷ್ಟಿಯಿಂದ ಈ ವಿಗ್ರಹದ ಕಾಲಮಾನವನ್ನು ಕ್ರಿ.ಶ. ಸುಮಾರು ೧೩ನೇ ಶತಮಾನವೆಂದು ಹೇಳಬಹುದಾಗಿದ್ದು, ಬಳಿಯಲ್ಲಿಯೇ ಸ್ಥಾಪಿಸಿದ್ದ ರಂಗನಾಥ ದೇವಾಲಯ ಒಂದು ಕ್ಲಿಷ್ಟ ಸಂದರ್ಭದಲ್ಲಿ ನಾಶವಾಗಲಾಗಿ ಈ ದೇವಾಲಯದ ಶಿಲ್ಪ ಅರ್ಕಾವತಿ ನದಿಯನ್ನು ಸೇರಿದೆ. ಇತ್ತೀಚೆಗೆ ನದಿಯಿಂದ ಈ ಶಿಲ್ಪ ಹೊರತೆಗೆದಿದ್ದು ಇದು ಕನಕಪುರದ ಪ್ರಾಚೀನ ಶಿಲ್ಪಗಳಲ್ಲಿ ಒಂದಾಗಿದೆ.



*ಬಾದಾಮಿಯ ಪ್ರಾಚೀನ ಅನಂತಶಯನ (ಕ್ರಿ. ಶ. ಸುಮಾರು ೭ನೇ ಶತಮಾನ)*

ಚಿತ್ರ-ಲೇಖನ: ಮುತ್ತುರಾಜು
ಕನ್ನಡ ಅಧ್ಯಾಪಕರು, ಜವಾಹರ್ ನವೋದಯ ವಿದ್ಯಾಲಯ, ರೋಶನಾಬಾದ್, ಹರಿದ್ವಾರ ಜಿಲ್ಲೆ, ಉತ್ತರಾಂಚಲ - ೨೪೯ ೪೦೭

# ಕೇಳದಿರುವ ರಾಗಗಳು



■ ಸ. ಉಷಾ

ಕೇಳಿದ ಹಾಡು ಮಧುರವಂತೆ, ಕೇಳದ ಹಾಡು ಅದಕ್ಕಿಂತ ಮಧುರವಂತೆ. ಹೀಗೊಬ್ಬ ಕವಿ ಬಹಳ ಹಿಂದೆ ಹೇಳಿದ್ದಾನೆ. ಪ್ರೀತಿ ಸಹ ಹಾಗೇ. ದಕ್ಕಿದ ಪ್ರೀತಿ ಚಂದ, ದಕ್ಕದ ಪ್ರೀತಿಯ ನೆನಪು, ಅಥವಾ ಕನಸು ಇನ್ನೂ ಚಂದವಿರಬಹುದಾ ಅಂತ ಒಮ್ಮೊಮ್ಮೆ ಒಂದು ಪ್ರಶ್ನೆ ಹುಟ್ಟುತ್ತದೆ. ಈ ಪ್ರಶ್ನೆ ಹುಟ್ಟಲು ಕಾರಣಳಾದವಳು ಒಬ್ಬಳು ಅರುಂಧತಿ.

ಅರುಂಧತಿ ನಮ್ಮ ಕಾಲೇಜಿನ ಕೋಗಿಲೆ, ಐದು ವರ್ಷಗಳ ಕಾಲ ಮುಂದಿನ ಬೆಂಚಿನಲ್ಲಿ ಕೂತು ನನ್ನ ಪಾಠ ಕಣ್ಣಲ್ಲೆ ಕುಡಿದ ಹುಡುಗಿ. ಆ ಕ್ಲಾಸಿನಲ್ಲೋ ಐದು ನಕ್ಷತ್ರಗಳ ಹಾಗೆ ಐದು ಜನ ವಿಶಿಷ್ಟ ಹುಡುಗಿಯರು. ಪ್ರತಿಯೊಬ್ಬರೂ ಅನನ್ಯರೇ.

ಪ್ರತಿಯೊಂದು ಹೂವಿಗೂ ಅದರದೇ ಸುಗಂಧವಿದೆ. ಅರುಂಧತಿಯ ವ್ಯಕ್ತಿತ್ವದ ಸುಗಂಧ ಪಾರಿಜಾತದಂತೆ ಅತಿ ಸೌಮ್ಯ. ಹೆಸರಿಗೆ ತಕ್ಕಂತೆ ಕಂಡೂ ಕಾಣದೆ ಮಿನುಗುವವಳು. ನಯವಾದ ಕೂದಲ ಉದ್ದ ಜಡೆ, ಬಾದಾಮಿ ಮುಖ, ಹಾಲುಗಲ್ಲದ ಮೇಲೊಂದು ಪುಟ್ಟ ಕಪ್ಪು ಮಚ್ಚೆ, ಅದರ ಸುತ್ತ ಕೆಂಪು ಛಾಯೆ, ಕಿವಿಯೊಳಗೊಂದು ಒಂಟಿ ಮುತ್ತಿನ ರಿಂಗು. ಅವಳ ಕಣ್ಣೋ ! ಅದರೊಳಗೇನಿದೆ ಅಂತ ಗ್ರಹಿಸುವುದು ಕಷ್ಟ. ಯಾವಾಗಲೂ ಇಳಿದ ರೆಪ್ಪೆಗಳು ಕಣ್ಣಿನ ಗುಟ್ಟು ಬಿಡದೆ ಕಾಯುತ್ತವೆ. ಎಲ್ಲೋ ಒಂದೊಂದು ಸಾರಿ ಅವಳಿ ಹಕ್ಕಿಗಳು ರೆಕ್ಕೆ ಬಿಚ್ಚಿದ ಹಾಗೆ ಕಣ್ಣುಗಳನ್ನು ಪೂರಾ ಅರಳಿಸಿ ದಿಟ್ಟಿಸುತ್ತಾಳೆ. ಒಂದು ಕ್ಷಣ ಮಾತ್ರ! ಮರುಕ್ಷಣದಲ್ಲಿ ರೆಪ್ಪೆಯ ಜವನಿಕೆ ಅರ್ಧ ಇಳಿದು ಅವಳ ಅಂತರಂಗದ ಪುಟಗಳಿಗೊಂದು ತೆರೆ ಹಾಕಿಬಿಟ್ಟಿರುತ್ತದೆ.

ಗೆಳತಿಯರ ಪಾಲಿಗವಳು ಅರು. ನಮ್ಮ ಕಾಲೇಜಿನ ಕೋಗಿಲೆಯಾಗಿ ಒಂದು ವರ್ಷ ಹಾಡಿದಳು. ಬಹುಮಾನಗಳನ್ನೂ ತಂದಳು. ಅವಳ ಸಂಗೀತ ಕಲಿಕೆಯದಲ್ಲ, ಕೇಳಿಕೆಯದು. ಅವಳ ಬಿಳಿಗೆಂಪು ಬಣ್ಣಕ್ಕೆ ಎಲ್ಲ ಬಣ್ಣದ ಉಡುಪುಗಳು ಚೆನ್ನಾಗಿ ಕಂಡರೂ ಅವಳು ಹೆಚ್ಚಾಗಿ ಉಡುತ್ತಿದ್ದುದು ತಿಳಿಬಣ್ಣಗಳನ್ನೇ. ಅದರೊಳಗೆ ಎಲ್ಲೋ ಒಂದು ಬಿಳಿಯ ಸೆಳಕು ಸೌಮ್ಯವಾಗಿ ಹರಿಯುತ್ತಿರುತ್ತದೆ. ಅಗಸ್ತ್ಯನ ಮರೆಯಲ್ಲಿ ಅರುಂಧತಿ ಮಿನುಗಿದ ಹಾಗೆ. ಮೊದಲ ವರ್ಷದ ಬಿ.ಎ.ಯಲ್ಲಿ ಚಿತ್ರಗೀತೆ, ಭಾವಗೀತೆಗಳನ್ನು ಹಾಯಾಗಿ ಹಾಡಿ ಯೂನಿವರ್ಸಿಟಿಗೆ ಆಯ್ಕೆಯಾಗಿ ಹೋಗಿ ಕಾಲೇಜನ್ನು ಪ್ರತಿನಿಧಿಸಿ ಬಂದ ಅರುಂಧತಿ ಎರಡನೆಯ ವರ್ಷ ಮಾಗಿ ಕೋಗಿಲೆಯಂತೆ ಮೌನವಾದಳು. 'ಹಾಡು ಹಕ್ಕಿಗೆ ಬೇಕೆ ಬಿರುದು ಸಮ್ಮಾನ' ಎಂದು ಅವಳೇ ಹಾಡಿದ್ದನ್ನು ಸತ್ಯವಾಗಿಸುವಂತೆ ಯಾವ ಸ್ಪರ್ಧೆಗಳಿಗೂ ಹೋಗಲಿಲ್ಲ. ಯಾವುದಾದರೂ ಸಮಾರಂಭಕ್ಕೆ ಪ್ರಾರ್ಥನೆ ಮಾಡು ಎಂದರೆ ಹಾಡುವಳು. ಒಮ್ಮೆ ಹೀಗೆ ಮಾತಾಡುತ್ತ ''ಯಾಕೆ ಸ್ಪರ್ಧಿಸಲಿಲ್ಲ'' ಎಂದು ಕೇಳಿದರೆ 'ಸುಮ್ಮನೆ ಮಿಸ್' ಅಂದು ಸುಮ್ಮನಾದಳು. ನಿಜವಾದ ಕಾರಣ ಅವಳ ಪಕ್ಕ ನಿಂತಿದ್ದ ರೇವತಿಯ ಬಾಯಿಂದ ಹೊರಬಿತ್ತು.

''ಸೆಲೆಕ್ಟ್ ಆದರೆ ಬೇರೆ ಊರಲ್ಲಿ ಕಾಂಪಿಟಿಷನ್‌ಗೆ ಹೋಗಬೇಕಲ್ಲಾ ಮಿಸ್, ಅವರ ಮನೇಲಿ ಇಷ್ಟಪಡಲ್ಲ.''

ಇಷ್ಟೇ ಆಗಿ ಒಂದು ದಿನ ಈ ಅರುಂಧತಿ ಮೌನದ ಚಿಪ್ಪೊಡೆಯದೇ, ಮಾತಿನ ಮುತ್ತುದುರಿಸದೇ, ಹಾಡು ನಾಲಗೆಯಲ್ಲಿ ಕುಣಿದರೂ ಹಾಡದೇ, ನೆಲ ನೋಯದ ಹಾಗೆ ನಡೆದು, ಅರಿಶಿನದ ಗೌರಿಯಾಗಿ, ಅಚ್ಚುಕಟ್ಟಾಗಿ ಒಂದು ಕಾಲನ್ನು ಅರ್ಧ ಪದ್ಮಾಸನದಲ್ಲಿ ಮಡಿಸಿ, ಇನ್ನೊಂದು ಕಾಲನ್ನು ಗಲ್ಲಕ್ಕೆ ಆಸರೆಯಾಗಿಟ್ಟು ಪುರೋಹಿತರು ಹೇಳಿಕೊಡುವುದೇ ಬೇಡವೆನ್ನುವಂತೆ ವಧೂಭಂಗಿಯಲ್ಲಿ ಕೂತು, ಆಮೇಲೆ, ಆ ಹುಡುಗನ ಹೆಸರೇನೋ, ಆ ಅವನ ಹೆಸರಿನೊಡನೆ ತನ್ನ ಹೆಸರನ್ನು ಸೇರಿಸಿ ಹೊಳೆಯುವ ನಕ್ಕಿ ಅಕ್ಷರಗಳಲ್ಲಿ ಬರೆದು ಗುಲಾಬಿ ಅಂಟಿಸಿದ ದಿಬ್ಬಣದ ಕಾರಿನಲ್ಲಿ ಕೂತು ಜುಂಯ್ ಅಂತ ಹೋಗಿಬಿಟ್ಟಿದ್ದರೆ ನಾನು ಅವಳನ್ನು ನೆನೆದುಕೊಳ್ಳುತ್ತಿರಲೇ ಇಲ್ಲವೋ ಏನೋ - ಹಾಗೆ ಕನ್ನೆಯ ಸ್ನೇಹದ ಅರಳದ ಮೊಗ್ಗಿನ ಸುಗಂಧ ನನ್ನನ್ನು ತಟ್ಟುತ್ತಿರಲೂ ಇಲ್ಲವೇನೋ. ಅವಳಿದ್ದಾಗ ಕನ್ನೆಯ ಸ್ನೇಹವೇನೆಂದು ನಾನೂ ಅರಿಯಲಿಲ್ಲ. ಆಮೇಲೆ ತಿಳಿಬಣ್ಣಗಳ ನಡುವೆ ಹೊಳೆಯುವ ಬಿಳಿಯ ಸೆಳಕಿನ ಹಾಗೆ ಕನ್ನೆಯ ಸ್ನೇಹ ಕಂಡಿತು. ಕಂಡಿತೆನ್ನುವುದರೊಳಗೆ ಹಾ ಅನ್ನುವುದರೊಳಗೆ ಅರುಂಧತಿಯ ಹಾಗೆ ಅಗಸ್ತ್ಯನ ಹಿಂದೆ ಮರೆಯಾಯಿತು.

ಅದು ಹೀಗಾಯಿತು, ಅರೂ ಆಗ ಅಂತಿಮ ಬಿ. ಎ. ಓದುತ್ತಿದ್ದಳು. ಒಂದು ಸಂಜೆ ನಮ್ಮ ಮನೆಗೆ ವಾಸು ಬಂದ. ವಾಸು ಅಂದರೆ ಪ್ರಪಂಚಕ್ಕೆಲ್ಲ ಗೊತ್ತೇನೋ ಅನ್ನುವ ಹಾಗೆ ನಾನು ವಾಸು ಬಂದ ಎನ್ನುತ್ತೇನೆ. ವಾಸು ನನ್ನ ತಮ್ಮನ ಬಾಲ್ಯ ಸ್ನೇಹಿತ. ನಾನು ಕೆಲಸ ಮಾಡುವ ಊರಿನಲ್ಲೇ ಒಂದು ಬ್ಯಾಂಕಿನಲ್ಲಿ ಅವನಿಗೆ ಕೆಲಸ. ನನ್ನ ತಮ್ಮ ಕರೆಯುವ ಹಾಗೆ ನನ್ನ 'ಯಜಮಾನ'ರನ್ನು ಭಾವಾ ಅನ್ನುತ್ತಾನೆ. ಮಕ್ಕಳಿಗೆಲ್ಲ ಅವನು ವಾಸು ಮಾವ. ನಮ್ಮ ಮನೆಗೆ ಬರುವಾಗಲೆಲ್ಲ ಅವನು ಮೆಹದಿ ಹಸನ್ನನ ಗಝಲುಗಳ ಕ್ಯಾಸೆಟ್ಟನ್ನೋ, ವೋಡ್‌ಹೌಸ್ ಕಾದಂಬರಿಯನ್ನೋ ಹಿಡಿದು ಬರುವುದೂ, ನಾನು ಅವನು ಬಂದಾಗೆಲ್ಲ ಹೀರೇಕಾಯಿ ಬೋಂಡ ಮಾಡುವುದೂ ಒಂದು ಅಲಿಖಿತ ಒಪ್ಪಂದ. ಮನೆಯಲ್ಲಿ ಎಲ್ಲರೂ ಸಾವಿರ ಟೀಕೆ ಮಾಡುವ ನನ್ನ ಅಡುಗೆಗಳನ್ನೆಲ್ಲ 'ಆಹಾ ಗ್ರೇಟ್' ಅಂತ ಊಟ ಮಾಡಿ ಎಂಜಾಯ್ ಮಾಡುವ ಸಹೃದಯ. ಅವನು ಬಂದಾಗ ಮಾತ್ರ ನಾನು ಅಡುಗೆ ತಿಂಡಿ ಚೆನ್ನಾಗಿ ಮಾಡುತ್ತೇನೆ ಎನ್ನುವುದು ಮಕ್ಕಳ, ಅವರಪ್ಪನ ಮಿಥ್ಯಾರೋಪ. ಒಟ್ಟಿನಲ್ಲಿ ವಾಸು ನನ್ನ ದತ್ತು ತಮ್ಮ. ನಾಲ್ಕೈದು ವರ್ಷ ನಮ್ಮ ಊರಿನಲ್ಲೇ ಇದ್ದ ವಾಸುವಿಗೆ ತುಮಕೂರಿಗೆ ವರ್ಗವಾಯಿತು. ಹೀಗೆ ಒಂದು ಸಂಜೆ ತುಮಕೂರಿನಿಂದ ವಾಸು ಬಂದ. ಬಂದವನು 'ಭಾವಾ ಮೇಲೆ ಹೋಗೋಣ' ಎಂದು 'ಇವರನ್ನು' ಕರೆದುಕೊಂಡು ಟೆರೇಸ್ ಮೇಲೆ ಹೋಗಿ ಕೂತ. ನನಗೆ

ಸಂಭ್ರಮವಾಗಿ ಬೇಗ ಅಡಿಗೆ ಮುಗಿಸಿ ಒಂದಿಷ್ಟು ಹೀರೇಕಾಯಿ ಬೋಂಡಾ ಕರಿದು ಮೇಲೆ ಹೋದೆ. ಆಕಾಶದ ಅನಂತ ನಕ್ಷತ್ರಗಳ ಬೆಳಕಲ್ಲಿ ವಾಸುವಿನ ವಾಕ್‌ಮನ್ನಲ್ಲಿ ಶ್ರೀರಾಗ ಆಗ ತಾನೇ ಸಣ್ಣ ತೊರೆಯ ಹಾಗೆ ಆರಂಭವಾಗಿತ್ತು.

''ಲೋ ವಾಸು ಇದನ್ನು ಮತ್ತೆ ಮತ್ತೆ ಕೇಳಬೇಡ, ಮತ್ತೆ ಒಳ್ಳೇ ಕೆಲಸ ಮನೆ ಮಠ ಬಿಟ್ಟು ಸನ್ಯಾಸಿಯಾಗಿ ಹೋದೀಯಾ.'' ನಾನು ಗೇಲಿ ಮಾಡುತ್ತ ಬೋಂಡದ ತಟ್ಟೆ ಇಟ್ಟು ಕೂತೆ.

''ಇವನಾ ಸನ್ಯಾಸಿ ಆಗೋನು ? ಏನೋ ಸ್ವಾರಸ್ಯಕರವಾದ ವಿಷಯ ಹೇಳ್ತಾನೆ ಕೇಳು,'' ಎಂದರು ಅವನ 'ಭಾವ'.

ನನ್ನ ಕುತೂಹಲ ಹೆಚ್ಚಾಯಿತು.

''ಏನೋ ವಾಸು ಸ್ವಾರಸ್ಯ'' ಅಂದೆ.

''ಏನಿಲ್ಲ ನೀವಿಬ್ಬರೂ ನನಗೆ ಒಂದು ಒಳ್ಳೆ ಹೆಣ್ಣು ಹುಡುಕಿ ಕೊಡಲಿಲ್ಲ. ಈಗ ನಾನೇ ಹುಡುಕಿದೀನಿ - ನೀವು ಹುಡುಗಿ ತಂದೆ ತಾಯಿ ಹತ್ರ ಮಾತಾಡಿ ಅಂತ ಭಾವನ್ನ ಕೇಳ್ಕೊತಾ ಇದೀನಿ.''

''ನೋಡಪ್ಪಾ ನನಗೆ ಸಾಂಪ್ರದಾಯಿಕವಾಗಿ ಹೆಣ್ಣು ಕೇಳೋದು, ಕೊಡೋದು, ತೊಗೊಳೋದು, ಮಾತು ಕಥೆ ಅಂದ್ರೇ ಸ್ವಲ್ಪ ಮುಜುಗರ. ನೀನು ಹುಡುಗಿ ಹತ್ರನೇ ಮಾತಾಡು – ಅವಳು ಹೂಂ ಅಂದ್ರೆ, ಆಮೇಲೆ ಬೇಕಾದ್ರೆ ಮಧ್ವೆನೇ ಮಾಡ್ಸೋಣ'' ಅಂದರು ಇವರು.

''ಸಧ್ಯ ಹುಡುಗೀನ ಮಾತಾಡ್ಸಿ - ಅವಳು ಅವರಪ್ಪ ಅಮ್ಮನಿಗೆ ದೂರು ಹೇಳಿ - ಅವರು ನನಗೆ ಒದಿಸಿ - ಈ ಊರಲ್ಲೇನೋ ಒಂದಿಷ್ಟು ಒಳ್ಳೆ ಹೆಸರಿದೆ - ಆಮೇಲೆ ಬಾರಯ್ಯ ನಮ್ಮನೇಲಿ ಒಂದ್ಲೋಟ ನೀರು ಕುಡಿ ಅಂತ ಯಾರೂ ಮಾತಾಡಿಸದ ಹಾಗೆ ಆದ್ರೆ! ಎಲ್ಲರ್ರಿಗೂ ನಿಮ್ಮ ಹಾಗೆ ಅದೃಷ್ಟ ಒಲಿದು ಬರಲ್ಲ ಭಾವಾ'' ಎಂದ ಆ ಕಿಲಾಡಿ.

''ಯಾರೋ ಹುಡುಗಿ'' ಎಂದು ನೇರ ವಿಚಾರಣೆ ಪ್ರಾರಂಭಿಸಿದೆ ನಾನು.

ಹುಡುಗಿ ಬೇರೆ ಯಾರೂ ಅಲ್ಲ, ನಮ್ಮ ಅರು. ವಾಸುವಿನ ಬ್ಯಾಂಕಿನವರು ನಡೆಸಿದ ಕನ್ನಡ ರಾಜ್ಯೋತ್ಸವ ಸ್ಪರ್ಧೆಗಳಿಗೆ ಹೋಗಿ ಅವಳು ಇಂಪಾಗಿ ''ಪಂಚಮವೇದ ಪ್ರೇಮದ ನಾದ'', ''ನಾನು ಬಡವಿ ಆತ ಬಡವ'' ಹಾಡಿ ಮೊದಲ ಬಹುಮಾನಗಳನ್ನು ಬಾಚಿಕೊಂಡು ಬಂದಿದ್ದಾಳೆ. ಇವನು ಕೆನ್ನೆ ಮೇಲಿನ ಮತ್ತಿಯಾಗಿ, ಕಿವಿಯೊಳಗಿನ ಒಂಟಿ ಮುತ್ತಿನ ರಿಂಗ್ ಆಗಿ, ಜೀವಮಾನ ಪೂರ್ತಿ ಇರುವುದಕ್ಕೆ ಸಿದ್ಧನಾಗಿ, ದತ್ತು ಅಕ್ಕ ಭಾವ ಹಂಸದ ರಾಯಭಾರ ಮಾಡಬಹುದೇನೋ ಎಂಬ ಆಸೆ ಹೊತ್ತು ಬಂದಿದ್ದಾನೆ.

ಯಾಕಾಗಬಾರದು. ನನಗೆ ಗೊತ್ತಿದ್ದ ಹಾಗೆ ಜಾತಿಯ ತೊಡಕು ಇಲ್ಲ - ವಾಸು ಲಕ್ಷಣವಾಗಿದ್ದಾನೆ. ಅರೂ ಮುದ್ದಾಗಿದ್ದಾಳೆ. ನಾನು ವಿಚಾರಿಸುತ್ತೇನೆ ಎಂದು ಧೈರ್ಯವಾಗಿ ಹೇಳಿದೆ. ಮುಂದಿನ ಜನ್ಮದಲ್ಲಿ ನನ್ನ ಖಾಸಾ ತಮ್ಮನೇ ಆಗಿ ಹುಟ್ಟುವುದಾಗಿ ಮಾತುಕೊಟ್ಟು ಬೆಳಿಗ್ಗೆ ಯಥಾಪ್ರಕಾರ 'ಗ್ರೇಟ್' ಆಗಿದ್ದ ತಿಂಡಿ ತಿಂದು ವಾಸು ತುಮಕೂರಿಗೆ ಹೋದ.

ಅರುವಿನ ತಂದೆ ತಾಯಿ ನನಗೆ ನೇರವಾಗಿ ಪರಿಚಯವಿರಲಿಲ್ಲ. ನಮ್ಮಿಬ್ಬರಿಗೂ ವಿದ್ಯಾರ್ಥಿಯಾಗಿದ್ದ ಚಂದ್ರಶೇಖರ ಆಗ ಒಂದು ಸ್ಕೂಲಿನಲ್ಲಿ ಮೇಸ್ಟರಾಗಿದ್ದ. ಅವನು ಅರುಂಧತಿಗೆ ತಾಯಿಕಡೆಯಿಂದ ಸಂಬಂಧ ವಾಗಬೇಕೆಂದು ನನಗೆ ಗೊತ್ತಿತ್ತು. ಅವನನ್ನು ಕರೆದು ಅರುವಿಗೆ ಸಧ್ಯದಲ್ಲಿ ಮದುವೆ ಮಾಡುತ್ತಾರಾ? ವಾಸುವಿಗೆ ಕೊಡುತ್ತಾರಾ? ಎಂದು ವಿಚಾರಿಸುವಂತೆ ಹೇಳಿದೆ. ಒಂದು ವಾರದ ನಂತರ ಚಂದ್ರಶೇಖರ ಹ್ಯಾಪ್‌ಮೋರೆ ಹಾಕಿಕೊಂಡು ಬಂದ. ಅವನು ಒಪ್ಪಿಸಿದ ವರದಿ ಹೀಗಿತ್ತು.

ಅರುಂಧತಿಯ ಅಕ್ಕನಿಗೆ ಮದುವೆಯಾಗಿಲ್ಲ. ಅವಳಿಗೆ ಮದುವೆಯಾದ ಮೇಲೆ ಅರುಂಧತಿಯ ಮದುವೆ. ಈಗಾಗಲೇ ಅರುವಿಗೆ ನಾಲ್ಕೈದು ಗಂಡು ಬಂದು ಈ ಕಾರಣಕ್ಕೇ ವಾಪಾಸು ಹೋಗಿದ್ದಾರೆ.

ನಮ್ಮ ವಾಸು ಅರುವಿನ ಕಿವಿಯಲ್ಲಿ ಒಂಟಿಮುತ್ತಿನ ರಿಂಗಾಗಿ ತೂಗಾಡುತ್ತ ಜೀವಮಾನವಿಡೀ ಇರಲು ತಯಾರಿದ್ದ. ಆದರೆ ಅರುವಿನ ಅಕ್ಕನ ಮದುವೆ ಆಗುವ ತನಕ ಯಾವ ಆಸೆ ಭರವಸೆಗಳಿಲ್ಲದೇ ಕಾಯಲು ತಯಾರಿರಲಿಲ್ಲ. ತುಮಕೂರಿನ ಅಜ್ಞಾತವಾಸದಲ್ಲಿ ಹತಾಶೆಯಲ್ಲಿ ನೊಂದುಕೊಂಡು ಮುಖೇಶನ ನೋವಿನ ಹಾಡುಗಳನ್ನು ಕೇಳುತ್ತಿರುವಾಗಲೇ ಅವನಿಗೊಬ್ಬಳು ಸ್ವಯಂತೇಜದ ರುಕ್ಮಿಣಿಯ ಪ್ರೀತಿ ದಕ್ಕಿ - ಅವಳು ಅವನನ್ನು ಒಲಿಸಿಕೊಂಡು ಅವನ ಘೋರ ನೈರಾಶ್ಯವನ್ನೆಲ್ಲ ಕೋಗಿಲೆ ಹಾಡಿನ ಮಲ್ಲಿಗೆ ಕಂಪಿನ ವಸಂತವಾಗಿ ಬದಲಿಸಿದಳು, ಅಂತ ಅವನು ಒಂದು ದಿನ ಮದುವೆಯ ಕರೆಯೋಲೆ ಮುದ್ರಿಸಲು, ಮದುವೆಯ ಸಿದ್ಧತೆಗೆ ಭಾವನ ಸಲಹೆ ಸೂಚನೆ ಕೇಳಲು ಬಂದಾಗ ಗೊತ್ತಾಯಿತು. ಅವನ ರುಕ್ಮಿಣಿಯೂ ಒಮ್ಮೆ ತುಮಕೂರಿಗೆ ಹೋದಾಗ ನೋಡಲು ಸಿಕ್ಕಿದಳು. ಕುತ್ತಿಗೆವರೆಗೆ ಇಳಿದ ನವಿರುಗೂದಲಿನ ಬಾಬ್‌ಕಟ್ಟಿನ ಹುಡುಗಿ, ಕೆಂಪು ಟೀಷರ್ಟು ಹಾಕಿ ಲೂನಾ ನುಗ್ಗಿಸಿಕೊಂಡು ಯಾವ ಟ್ರಾಫಿಕ್‌ನಲ್ಲೂ ನುಸುಳಿ ಹೋಗುವಳು. ವಾಸು ಪರಿಚಯ ಮಾಡಿಸಿದಾಗ ''ನಿಮ್ಮ ಬಗ್ಗೆ ವಾಸು ತುಂಬ ಹೇಳ್ತಿರ್ತಾರೆ'' ಎಂದಳು - ಹೋಟೆಲಿಗೆ ಹೋದಾಗ ನಮಗೆಲ್ಲ ಏನು ಬೇಕೆಂದು ಕೇಳಿ ತಾನೆ ಆರ್ಡರ್ ಮಾಡಿ - ತಾನೇ ಬಿಲ್ ಕೊಟ್ಟಳು. ವಾಸು ಕೊಡಲು ಹೋದರೆ - 'ಪ್ಲೀಸ್ ಇವತ್ತು ನಾನ್ಕೊಡ್ತೀನಿ, ಇವರೆಲ್ಲ ನಮ್ಮೂರಿಗೆ ಬಂದಿದಾರೆ –' ಎಂದು ಸಿಹಿಯಾಗಿ ತಡೆದಳು.

ಇದಾದ ಸ್ವಲ್ಪ ದಿನಕ್ಕೆ ನಮ್ಮ ಅರೂ ಸಹ ಒಂದು ದಿನ ಇನ್‌ವಿಟೇಷನ್ ಹಿಡಿದು ಬಂದಳು. ನಾನು ಸಹಜ ಕುತೂಹಲದಿಂದ ವಿಚಾರಿಸಿದೆ. ''ನಿಮ್ಮಕ್ಕನ ಮದುವೆ ಆಯಿತಾ? ನಿಮ್ಮ ಭಾವ ಏನು ಕೆಲಸ ಮಾಡುತ್ತಾರೆ?''

''ಯಾವ ಅಕ್ಕ ಮಿಸ್ - ಯಾವ ಭಾವ? ನಂಗೆ ಅಕ್ಕನೇ ಇಲ್ಲ ಮಿಸ್. ನಾನೇ ದೊಡ್ಡವಳು.''

''ಮತ್ತೆ ಆ ಚಂದ್ರಶೇಖರ ಹೇಳಿದನಲ್ಲ ನಿಮ್ಮಕ್ಕನ ಮದುವೆ ಆಗದೆ ನಿನ್ನ ಮದುವೆ ಮಾಡುವುದಿಲ್ಲ ಅಂತ, ನಾವು ಒಂದು ಗಂಡಿಗೋಸ್ಕರ ನಿನ್ನ ವಿಚಾರಿಸಿದ್ದೆವು.''

ಆಗ ಅವಳ ರೆಕ್ಕೆಯಂಥ ರೆಪ್ಪೆಗಳು ತೆರೆದುಕೊಂಡವು. ''ನಂಗೊತ್ತು ಮಿಸ್, ಬ್ಯಾಂಕಲ್ಲಿದ್ರಲ್ಲ ವಾಸುದೇವ ಅವ್ರಲ್ವಾ ಮಿಸ್. ನಂಗೆಲ್ಲಿದೆ ಮಿಸ್ ಅಷ್ಟೊಂದು ಅದೃಷ್ಟ - ಅವರು ನನಗೊಂದು ಲೆಟರ್ ಕೊಟ್ಟಿದ್ರು ಮಿಸ್ - ನೀವು ಮಾಸ್ತು ಇಬ್ಬರೂ ನಮ್ಮ ಮನೆಗೇ ಬರ್ತೀರಾ ಅಂತ. ನಾನು ಆ ದಿನಗಳಲ್ಲಿ ಕಾಯ್ತಾ ಇರ್ತಿದ್ದೆ ಮಿಸ್.''

ನನ್ನ ಕಣ್ಣ ಮುಂದೆ ಚಂದ್ರಶೇಖರನ ಹ್ಯಾಪಮೋರೆ ಕಾಣಿಸುತ್ತಲೇ ಇತ್ತು.

''ಮತ್ತೆ ಅವನು ಆ ಚಂದ್ರಶೇಖರ ಯಾಕೆ ಹಾಗೆ ಹೇಳಿದ?''

''ಅವನೊಬ್ಬ ತರಲೆ ಮಿಸ್. ಅವನು ನಮ್ಮನೇಗೆ ಬಂದೂ ಇಲ್ಲ, ಏನೂ ಹೇಳೂ ಇಲ್ಲ. ನಮ್ಮ ತಂದೇನ ಅವರ ಮನೆಯವರೇ ಕೇಳಿದಾರೆ - ಅವನಿಗೆ ಮದುವೆ ಮಾಡಿಸಕ್ಕೆ - ಅದಕ್ಕೇ ನಮ್ ತಂದೆ ಅವನಿಗೆ ಕೊಡಕ್ಕೆ ಇಷ್ಟ ಇಲ್ಲದೆ ನಮ್ಮ ದೊಡ್ಡಪ್ಪನ ಮಗಳು ಇದಾಳೆ, ಅವಳ ನೆಪ ಹೇಳಿ ತಪ್ಪಿಸಿಕೊಂಡಿದಾರೆ. ನೀವು ಬಂದಿದ್ರೆ ಖಂಡಿತಾ ಈ ಸಂಬಂಧ ಆಗ್ತಿತ್ತು ಮಿಸ್. ವಾಸು ಅವರಿಗೆ ಅಂದಿದ್ರೆ ನಮ್ಮ ಮನೇಲೂ ಆಗಲ್ಲಂತಾ ಹೇಳ್ತಿರಲಿಲ್ಲ.''

ಚಂದ್ರಶೇಖರನ ಹ್ಯಾಪ್ ಮೋರೆ - ಈಗ ಅಯಾಗೋ ಮೋರೆಯಾಗಿ ನನ್ನ ಕಣ್ಣ ಮುಂದೆ ಕುಣಿಯಿತು. ಯಾರು ತಪ್ಪು ಮಾಡಿದರು ? ಕನ್ನೆಯ ಸ್ನೇಹವನ್ನು ಅರಿಯುವುದರಲ್ಲಿ ನಾನು ಅನ್ಯಮನಸ್ಕಳಾಗಿದ್ದಾಗಲೇ ಅರೂ ಹೊರಟು ಹೋದಳು. ನಾನೂ ನಿಲ್ಲು ಎನ್ನಲಿಲ್ಲ. ತಿಂಡಿ-ಕಾಫಿ-ಹೂ-ಕುಂಕುಮಗಳ ಬಹಿರುಪಚಾರದ ಹೊರತಾಗಿ ಅವಳಿಗೆ ಕೊಡಲು ನನ್ನಲ್ಲಿ ಇನ್ನೇನೂ ಇರಲಿಲ್ಲ. ಈ ವೇಳೆಗೆ ಅರೂ ವಾಸುವನ್ನು, ವಾಸು ಅರುವನ್ನು ಮರೆತಿರಬಹುದೇನೋ. ಅರುವಿಗೊಬ್ಬಳು ಐಸ್‌ಕ್ರೀಮಿನಂಥ ಮಗಳಿದ್ದಾಳೆ. ವಾಸುವಿಗೊಬ್ಬ ಪ್ರದ್ಯುಮ್ನನಂಥ ಮಗನಿದ್ದಾನೆ. ವಾಸುವಿನ ಹೆಂಡತಿ ವಾಸುವನ್ನು ಕಣ್ಣರೆಪ್ಪೆಯಲ್ಲಿಟ್ಟು ಕಾಪಾಡಿ ಕೊಂಡಿದ್ದಾಳೆ. ಅರುವಿನ ಗಂಡ ಅವಳ ಕಣ್ಣ ರೆಪ್ಪೆಗಳ ಭಾಷೆ ಅರಿತಿದ್ದಾರೆ. ಆದರೆ ನಾನು ಮಾತ್ರ ವಾಸುವನ್ನಾಗಲೀ ಅರುವನ್ನಾಗಲೀ ಮರೆಯಲಿಲ್ಲ.

ಇನ್ನು ಮೇಲೆ ಯಾರಾದರೂ ವಾಸುಗಳು ಬಂದು ಸಂಧಾನಕ್ಕೆ ಕೇಳಿದರೆ ಮೊದಲು ಅರುಗಳನ್ನು ಮಾತಾಡಿಸಬೇಕೆಂದು, ಆಮೇಲೆ ನಾನು ಅಮ್ಮ ಅಪ್ಪಂದಿರ ಹತ್ತಿರ ಸಂಧಾನಕ್ಕೆ ಹೋಗಬೇಕೆಂದು ದೃಢ ನಿಶ್ಚಯ ಮಾಡಿದ್ದೇನೆ.

ಸ. [illegible]
'ನಿನಾದ' ೧೫೭, ಮಾರುತಿ ನಗರ
ಅರಸೀಕೆರೆ (ಜಿಲ್ಲೆ : ಹಾಸನ)

---

[illegible]

ಅ. ರಾ. ಮಿತ್ರ

ಬೆಂಗಳೂರಿಗೂ ಸಿಂಗಾಪುರಕ್ಕೂ
ಎಲ್ಲೆಲ್ಲಿಂದ್ಲೋ ನಂಟು
ಇದು ಕೃಷ್ಣ ಹಾಕಿದ ನಂಟು
ಮಾಡದ್ದಂಗೆ ತಡೆ ಓಡ್ದೋರ್
ಅವ್ರ ಪಾರ್ಟೀಲೇ ಉಂಟು

# ಸುಳ್ಳಿನ ಸುತ್ತ ಒಂದು ಸುತ್ತು

**ವಸುಮತಿ ಉಡುಪ**



ಸುಳ್ಳಿನ ಬಗ್ಗೆ ಒಂದು ಪ್ರಬಂಧ ಬರೆಯಬೇಕೆಂದು ನನಗೆ ಪ್ರೇರೇಪಣೆಯಾದದ್ದರ ಹಿನ್ನೆಲೆಯನ್ನು ಮೊದಲು ಚುಟುಕಾಗಿ ಹೇಳಿಬಿಡುತ್ತೇನೆ. ಈ ಪ್ರಸಂಗದಲ್ಲಿ ಹೊಸತೇನೂ ಇಲ್ಲ, ಎಲ್ಲರಿಗೂ ಗೊತ್ತಿರುವಂತಾದ್ದೇ. ಆಗಷ್ಟೇ ಮಧ್ಯಾಹ್ನದ ಊಟ ಮುಗಿಸಿ ಹೊರಗಿನ ಕೈತೋಟದಲ್ಲಿ ಠಳಾಯಿಸುತ್ತಿದ್ದೆ. ನೆರೆಮನೆಯಾಕೆ ಕಣ್ಣಿಗೆ ಬಿದ್ದರು. ಲೋಕಾರೂಢಿಯ ಎರಡು ಮಾತುಗಳ ವಿನಿಮಯವಾಯ್ತು.

'ಆಯ್ತಾ ಊಟ ?'

'ಹೂಂ, ಈಗಷ್ಟೇ ಆಯ್ತು, ನಿಮ್ದಾಯ್ತಾ ?'

'ಆಯ್ತ್ರೀ, ಏನಡಿಗೆ ಮಾಡಿದ್ರಿ ?'

'ಕೋಸುಗೆಡ್ಡೆ ಹುಳಿ, ಬೀನ್ಸಿನ ಪಲ್ಯ. ನೀವೇನು ಮಾಡಿದ್ರಿ ?'

'ನಾನು ಟೊಮೆಟೋ ಸಾರು ಮಾಡಿ ಬೀಟ್ರೂಟ್ ಪಲ್ಯ ಮಾಡಿದ್ದೆ...'

ಅಲ್ಲೇ ಅಮ್ಮನ ಸೀರೆಯ ನೆರಿ ಹಿಡಿದು ನಿಂತಿದ್ದ ಮೂರರ ಪೋರ,

'ನನಗ್ಯಾಕಮ್ಮಾ ಪಲ್ಯ ಹಾಕ್ಲೇ ಇಲ್ಲ ?' ಅಂತ ಕೇಳ್ತು....

'ಹಾಕ್ಲಿಲ್ವೇನೋ ? ಮೊಸರನ್ನದ ಜೊತೆ ತಿನ್ಲಿಲ್ವಾ ?' ಅಂತ ಆಕೆ ಗದರಿಸಿದ್ದು, 'ಈಗ ತಿಂದಿದ್ದು ಈ ಕ್ಷಣ ಮರ್‍ತುಬಿಟ್ಟಿದಾನೆ.....' ಎಂದು ಮಾತು ಹಾರಿಸಿ ಬೇರೆ ವಿಷಯಕ್ಕೆ ದಾಟಿದ್ದು ಪ್ರಸ್ತುತಕ್ಕೆ ಬೇಕಾಗಿಲ್ಲದ್ದು. ಇವೆಲ್ಲಾ ಸಣ್ಣಪುಟ್ಟ ಸುಳ್ಳುಗಳು. ದಿನನಿತ್ಯದ ಬದುಕಿನಲ್ಲಿ ಅಲ್ಲಿ, ಇಲ್ಲಿ ಚಲಾವಣೆಯಾಗುತ್ತಲೇ ಇರುವಂಥವು. ಇಂಥಾ ಸುಳ್ಳುಗಳ ಹಿಂದೆ ಕೆಲಸ ಮಾಡುವ ಮನೋಧರ್ಮ ಒಂದೇ : ಪೊಳ್ಳು ಪ್ರತಿಷ್ಠೆ . ಅಥವಾ ಇನ್ನೊಂದು ಕಾರಣ ಕೊಡಬಹುದಾದರೆ, ಅಭ್ಯಾಸ ಬಲ. ನಮ್ಮ ಮನೆಯಲ್ಲಿ ನಾವು ಬರೀ ಸಾರು, ಅನ್ನ ತಿಂದರೆ, ಅದನ್ನು ಪ್ರಾಮಾಣಿಕವಾಗಿ ಹೇಳಿಕೊಂಡರೆ, ಅದರಿಂದ ನಮ್ಮ ಘನತೆ, ಗೌರವಕ್ಕೆ ಕುಂದು ಬರುವಂತಹದ್ದು ಅಷ್ಟರಲ್ಲೇ ಇದೆ. ನಾವು ಏನು ತಿಂದೆವು, ಏನು ಬಿಟ್ಟೆವು ಎಂಬುದನ್ನು ಕಟ್ಟಿಕೊಂಡು ಯಾರಿಗೆ ಏನೂ ಆಗಬೇಕಾದ್ದಿಲ್ಲ. ವಾಸ್ತವವಾಗಿ ಏನೋ ಮಾತಿಗೆ ಕೇಳಿರುತ್ತಾರೆಯೇ ಹೊರತು ಕೇಳಿದವರಿಗೆ ಈ ಬಗ್ಗೆ ಯಾವ ಆಸಕ್ತಿಯೂ ಇರುವುದಿಲ್ಲ ಅನ್ನುವುದೂ ಸ್ಪಷ್ಟ. ಆದರೂ ತಟ್ಟನೆ ಸುಳ್ಳು ಬಾಯಿಂದ ಜಾರಿಬಿಡುತ್ತದೆ. ಹೊಸದಾಗಿ ಕೊಂಡ ಸೀರೆಯ, ಮಾಡಿಸಿದ ಒಡವೆಯ, ಬೆಲೆ ಇರಬಹುದು ಅಥವಾ ಮಕ್ಕಳ ಅಂಕಪಟ್ಟಿಯಲ್ಲಿ ನಮೂದಾದ ಅಂಕಗಳೇ ಇರಬಹುದು. ಇದ್ದದ್ದನ್ನು ಇದ್ದಂತೆ ಹೇಳಲು ಹಲವರಿಗೆ ನಾಲಿಗೆ ಏಳುವುದಿಲ್ಲ. ಸ್ವಲ್ಪ ಹೆಚ್ಚುಗಾರಿಕೆ ತೋರಿಸಿಕೊಂಡರಷ್ಟೇ ಸಮಾಧಾನ. 'ಉತ್ಪ್ರೇಕ್ಷೆ ಮಾಡಿ ಹೇಳುವುದು' ಎಂದು ಇಂಥಾ ಮಾತುಗಳನ್ನು ವರ್ಣಿಸಬಹುದೇನೋ. ಹಾಗಾದರೆ ಉತ್ಪ್ರೇಕ್ಷೆಗೂ, ಸುಳ್ಳಿಗೂ ವ್ಯತ್ಯಾಸ ಏನುಂಟು ? ಉತ್ಪ್ರೇಕ್ಷೆಗೆ ಸತ್ಯದ ಒಂದು ಎಳೆ ಇರುತ್ತದೆ. ಅದರ ಜೊತೆ ಸುಳ್ಳನ್ನು ಧಾರಾಳವಾಗಿ ಸೇರಿಸಿ ನೇಯುತ್ತಾರೆ. ಆದರೆ 'ಹಸೀ ಸುಳ್ಳು' ಅನ್ನುವಂಥಾದ್ದು ಈ ಜಾತಿಗೆ ಸೇರಿದ್ದಲ್ಲ. ಇದು ಹಳಿ ಇಲ್ಲದೆ ಬಿಡುವ ರೈಲು. ಕೆಲವರು ಇದರಲ್ಲಿ ಎಷ್ಟು ನಿಪುಣರಾಗಿರುತ್ತಾರೆಂದರೆ ಎದುರಿದ್ದವರನ್ನು ಮಂಗಗಳನ್ನಾಗಿ ಮಾಡುವುದು ಇವರಿಗೆ ಒಂದು ವಿನೋದ. ಪರಿಚಯ ನಿಕಟವಾದಂತೆ ನಮಗೆ ಸತ್ಯದ ಅರಿವಾಗಿ 'ಬುರುಡೆ ಬಿಡುವ' ಅವರ ಬಗ್ಗೆ ತನ್ನಷ್ಟಕ್ಕೆ ತಾತ್ಸಾರ ಮೂಡುತ್ತದೆ. ಅವರು ನಮ್ಮ ನಡುವೆ ನಗೆ ಚಾಟಿಕೆಯ ವಸ್ತುವಾಗುತ್ತಾರೆ. ಈ ಥರದ ವರ್ಣರಂಜಿತ ಮಾತುಗಳು ಅವರ ದೌರ್ಬಲ್ಯವೂ ಇರಬಹುದೆಂದು ನನಗೆ ಅನ್ನಿಸಿದ್ದಿದೆ. ಭ್ರಮಾಲೋಕವೊಂದರಲ್ಲಿ ವಿಹರಿಸುತ್ತಾ, 'ಹೀಗಿದ್ದರೆ ಹೇಗಿರುತ್ತಿತ್ತು ?' ಎಂಬ ತಮ್ಮ ಕನಸು, ಕಲ್ಪನೆಗಳನ್ನು ಅದು 'ಹೀಗೆಯೇ ನಡೆಯಿತು.....' ಎಂದು ಅವರು ವರ್ಣಿಸಿ ಸಮಾಧಾನಪಟ್ಟುಕೊಳ್ಳುತ್ತಾರೆ ಎಂದು ನನ್ನ ಗುಮಾನಿ. ಇವರಿಗೂ ಬುದ್ಧಿ ಬೆಳೆಯದ ಮಕ್ಕಳಿಗೂ ಹೆಚ್ಚಿನ ವ್ಯತ್ಯಾಸ ಕಂಡುಬರುವುದಿಲ್ಲ. 'ಢಿಶುಂ... ಢಿಶುಂ...' ಎಂದು ಮಕ್ಕಳು ಮುಷ್ಟಿ ಕಟ್ಟಿ ಗುದ್ದುವಾಗ ನಾವು ಬಿದ್ದ ನಟನೆ ಮಾಡಿದರೆ ನಿಜಕ್ಕೂ ಗೆದ್ದೇಬಿಟ್ಟೆವೆಂಬಂತೆ ಅವಕ್ಕೆ ಎಷ್ಟು ಸಂತೋಷವಾಗುತ್ತದೆಯೋ ಹಾಗೆ ಇವರಿಗೂ ಇವರ ಮಾತುಗಳನ್ನು ಎದುರಿನವರು ನಂಬಿದರೆ ಅಥವಾ ನಂಬಿದಂತೆ ತೋರ್ಪಡಿಸಿಕೊಂಡರೆ, ಅಷ್ಟೇ ಸಂತೋಷ. ಬುರುಡೆ ಬಿಡುತ್ತಾ ಬಿಡುತ್ತಾ ಬಿಡುತ್ತಾ ಇಂಥವರು ಎಷ್ಟು ಪಳಗಿಹೋಗಿಬಿಟ್ಟಿರುತ್ತಾರೆಂದರೆ ತಮ್ಮ ಜಾಣ್ಮೆಗೆ ತಾವೇ ಬೆನ್ನು ಚಪ್ಪರಿಸಿಕೊಳ್ಳುತ್ತಾ ಅವರು ಮಾತಾಡುವ ರೀತಿಯಿಂದ ಅವರು ಸುಳ್ಳಾಡುವ ಈ ಕ್ರಿಯೆಗೆ ಒಗ್ಗಿಹೋಗಿರುತ್ತಾರೆ ಮಾತ್ರವಲ್ಲ ಅದನ್ನು ಸತ್ಯವೆಂದು ತಾವೇ ನಂಬುವ ಭ್ರಮಾಧೀನ ಅವಸ್ಥೆಗೂ ತಲುಪಿರುತ್ತಾರೇನೋ ಎಂದು ಕೆಲವೊಮ್ಮೆ ಅನಿಸಲೂಬಹುದು. ಸ್ಥೂಲವಾಗಿ ಸುಳ್ಳನ್ನು ಎರಡು ಬಗೆಯವಾಗಿ ವಿಂಗಡಿಸಬಹುದು. ಮೊದಲನೆಯದು ಯಾರಿಗೂ ತೊಂದರೆಯಾಗದಂಥ ಸಾದಾ ಸುಳ್ಳು, ಲೇಖನದ ಮೊದಲಲ್ಲಿ ಪ್ರಸ್ತಾಪಿಸಿದ ಜಾತಿಯಂಥಾದ್ದು. ಎರಡನೆಯದು ಕುಟುಕುವ ಸುಳ್ಳು. ಕುಟುಕಿಸಿಕೊಂಡವರಿಗೆ ನಂಜೇರುವಂತೆ ಮಾಡುವ ಗಂಭೀರ ಜಾತಿಯದು. ಪ್ರತ್ಯಕ್ಷವಾಗಿ ಇದರ ಪ್ರಯೋಗ ಆಗುವುದು ಅಪರೂಪವಾದರೂ ಪರೋಕ್ಷವಾಗಿ ಇದು ಸಾಕಷ್ಟು ಪರಿಣಾಮ ಉಂಟುಮಾಡುತ್ತದೆ. ಉದಾಹರಣೆಗೆ ಹೇಳಬೇಕೆಂದರೆ, ನಿಮ್ಮ ಮಗನಿಗಾಗಿ ತಲಾಶು ಮಾಡಿದ ಒಂದು ಹುಡುಗಿಯ ಬಗ್ಗೆ ಆ ಕುಟುಂಬದ ಮಾಹಿತಿ ಇರುವ ಮತ್ತೊಬ್ಬರಲ್ಲಿ ನೀವು ವಿಚಾರ ಮಾಡುತ್ತೀರಿ ಎಂದಿಟ್ಟುಕೊಳ್ಳಿ. ಯಾವುದೋ ಪೂರ್ವಾಗ್ರಹದಿಂದ ಆತ ಆ ಕುಟುಂಬದ ಬಗ್ಗೆ ಅಲ್ಲದ್ದು ಸಲ್ಲದ್ದು ಹೇಳಿದರೆ ಅದರ ಸತ್ಯಾಸತ್ಯತೆಯ ಬಗ್ಗೆ ನಿಮಗೆ ಸಣ್ಣ ಸಂದೇಹ ಉಂಟಾಗಬಹುದಾದರೂ ನಂಬದೆ ಇರಲೂ ಆಗದೆ ಆ ಸಂಬಂಧವನ್ನು ನೀವು ತಿರಸ್ಕರಿಸಬಹುದಾದ ಸಾಧ್ಯತೆ ಇದ್ದೇ ಇರುತ್ತದೆ. ವಿನಾಕಾರಣ ಇನ್ನೊಬ್ಬರ ತೇಜೋವಧೆ ಮಾಡಲು ಸುಳ್ಳಿನ ಮೊರೆ ಹೋಗುವ ಇಂಥಾ ಜನಗಳಿಗೆ ಯಾವ ಪಾಪಪ್ರಜ್ಞೆಯೂ ಕಾಡುವುದಿಲ್ಲ. ಅವರಿಗೆ ಇದರಿಂದ ಯಾವ ಲಾಭ ಅಥವಾ ನಷ್ಟಗಳಿಲ್ಲವಾದರೂ ಒಬ್ಬರಿಗೆ ಒಳ್ಳೆಯ ದಾಗಬಹುದಾದ ಒಂದು ಅವಕಾಶವನ್ನು ತಪ್ಪಿಸಿದ ವಿಕೃತ ತೃಪ್ತಿ. ಸುಳ್ಳು ಎನ್ನುವುದು ಅವರ ಕೈಯಲ್ಲಿ ಝುಳಪಿಸುವ ಒಂದು ಶಸ್ತ್ರಾಯುಧ. ಆಗದಿದ್ದವರ ರುಂಡ ಚೆಂಡಾಡುವ ಸಾಧನ. ಈ 'ಆಗದವರು' ಅನ್ನುವವರು ಆಗದವರಾದ ಬಗ್ಗೆ ಯಾವ ಬಲವಾದ ಕಾರಣ ಇಲ್ಲದಿದ್ದರೂ, ಎದುರಿಗೆ ಸಿಕ್ಕಾಗ ಅವರೊಡನೆ ಈ ಮನುಷ್ಯ ನಗುನಗುತ್ತಾ ಹಿತೈಷಿಯಂತೆ ಮಾತಾಡುವವನಾಗಿರಬಹುದಾದರೂ, ಒಳಗೊಳಗೆ ಕತ್ತಿ ಮಸೆಯುವುದು ಕೆಲವರ ಸ್ವಭಾವ. ಸಂಬಂಧಿಗಳೆನಿಸಿ ಕೊಂಡವರಲ್ಲಿ ಈ ಥರದ ಮಾತ್ಸರ್ಯ ಕೆಲಸ ಮಾಡುವ ಪ್ರಮಾಣ ಹೆಚ್ಚು. 'ಒಬ್ಬರಿಗೆ ಒಳ್ಳೆಯದಾದರೆ ಅದರಿಂದ ಯಾರಿಗೂ ಸಂತೋಷವಾಗುವುದಿಲ್ಲ. ಅಭಿನಂದನೆಯ ಹೇಳಿಕೆಗಳೆಲ್ಲಾ ಬರಿಯ ತೋರಿಕೆಯ ನಾಟಕಗಳು' ಎನ್ನುವ ಕಟು ವಾಸ್ತವವಾದಿಯೊಬ್ಬರ ಹೇಳಿಕೆಯಲ್ಲಿ ಸ್ವಲ್ಪಮಟ್ಟಿನ ಉತ್ಪ್ರೇಕ್ಷೆ ಇದ್ದಿರಬಹುದಾದರೂ ಪೂರಾ ಸುಳ್ಳೆಂದು ತಳ್ಳಿ ಹಾಕುವಂತಿಲ್ಲ. ಲೋಕ ಇರುವುದೇ ಹೀಗೆ.

ಸ್ಟಾರ್ ಟಿ.ವಿ.ಯವರ ಬಹುಜನಪ್ರಿಯ 'ಕೌನ್

ಬನೇಗಾ ಕರೋಡ್‌ಪತಿ' ಕಾರ್ಯಕ್ರಮದ 'ಫೋನ್ ಇನ್ ಫ್ರೆಂಡ್'ನ ಕುರಿತಾಗಿ ಮೊನ್ನೆ ಪರಿಚಿತರೊಬ್ಬರು ಒಂದು ಸಂಶಯದ ರಾಗ ಎಳೆದರು. ಅಮಿತಾಭರು 'ನನ್ನೆದುರು ಹಾಟ್ ಸೀಟ್‌ನಲ್ಲಿರುವ ಈ ಇಂಥವರು ಈಗ ಇಷ್ಟು ದುಡ್ಡು ಗೆದ್ದಿದ್ದಾರೆ. ನೀವು ಸಹಾಯ ಮಾಡಿದರೆ ಇದರ ಎರಡರಷ್ಟು ಗೆಲ್ಲುತ್ತಾರೆ' ಇತ್ಯಾದಿಗಳನ್ನು ವರದಿ ಒಪ್ಪಿಸಿ ಹಾಟ್ ಸೀಟಿನವರು ಫೋನ್ ಮುಖಾಂತರ ಪ್ರಶ್ನೆಯನ್ನು ಅತ್ತ ಕಡೆಗೆ ರವಾನಿಸಿದಾಗ ಆ ಅತ್ತಲಿನವರು ಸರಿ ಉತ್ತರ ಗೊತ್ತಿದ್ದರೂ ಅದನ್ನು ಹೇಳಿಬಿಡುತ್ತಾರೆಂದು ಏನು ಗ್ಯಾರಂಟಿ ? ಯಾರೋ ಕೂತಲ್ಲೇ ದುಡ್ಡು ದೋಚುತ್ತಿರುವುದು ಇನ್ಯಾರಿಗೋ ಹೊಟ್ಟೆ ಕಿವುಚಿದಂತಾಗುವುದಿಲ್ಲವೇ ಎನ್ನುವುದು ಅವರ ಸಂದೇಹ. ಅವರು 'ಅತಿ ಸಂಶಯಪೀಡಿತ ವ್ಯಕ್ತಿ' ಅನಿಸಿದರೂ ಕೊಂಚ ಯೋಚಿಸಿದಾಗ ಅವರು ಹೇಳಿದ್ದರಲ್ಲಿ ಪೂರಾ ಸುಳ್ಳಿಲ್ಲ ಅನ್ನಿಸಿತು. ಹತ್ತಿರದ ರಕ್ತ ಸಂಬಂಧಿಗಳಾಗಿದ್ದರೆ ಸರಿ ಉತ್ತರ ಗೊತ್ತಿದ್ದರೆ, ಪ್ರಾಮಾಣಿಕವಾಗಿ ಹೇಳಿಯಾರೇನೋ. ಉಳಿದವರಿಗೆ ಹೇಳಬೇಕೆಂದೇನಿದೆ ? ಯಾರಿಗೋ ಲಾಟರಿಯಲ್ಲಿ ಲಕ್ಷಗಟ್ಟಲೆ ದುಡ್ಡು ಬಂದರೆ ನಮಗೆ ಏನೂ ಅನಿಸುವುದಿಲ್ಲ. ಆದರೆ ಆ ವ್ಯಕ್ತಿ ನಮ್ಮ ನೆರೆಮನೆಯವರಾಗಿದ್ದರೆ ? ಸಂಬಂಧಿಯೋ, ಗೆಳೆಯನೋ, ಗೊತ್ತಿದ್ದವರೋ ಆಗಿದ್ದರೆ ? ಆಗಲೂ ಸಂತೋಷವಾಗುತ್ತದೆ ಎಂದು ಆತ್ಮಸಾಕ್ಷಿಯಾಗಿ ಹೇಳಬಲ್ಲವರಿದ್ದರೆ ಅಂಥವರು ನಮಸ್ಕಾರಕ್ಕೆ ಯೋಗ್ಯರು ಎನ್ನುವುದರಲ್ಲಿ ಅನುಮಾನವಿಲ್ಲ. ದುರುದ್ದೇಶಪೂರಿತವಾದ ಸುಳ್ಳುಗಳಂತೆ ಸದುದ್ದೇಶಪೂರಿತವಾದುವೂ ಇರುತ್ತವೆ. 'ಸಾವಿರ ಸುಳ್ಳು ಹೇಳಿ ಒಂದು ಮದುವೆ ಮಾಡು' ಎನ್ನುವ ಗಾದೆಯನ್ನೇ ನೋಡಿ. ವಿವಾಹಯೋಗ್ಯ ಕನ್ಯೆ ಅಥವಾ ವರನಲ್ಲಿ ಇಲ್ಲದ ಸದ್ಗುಣಗಳನ್ನು ಆರೋಪಿಸಿ ಅವರನ್ನು ವಿವಾಹ ಬಂಧನದಲ್ಲಿ ಸಿಲುಕಿಸಿ ಕೃತಾರ್ಥರಾಗಬಯಸುವವರು ಇಂತಹ ಸುಳ್ಳುಗಳನ್ನು ನಿರರ್ಗಳವಾಗಿ ಚಲಾಯಿಸುತ್ತಾರೆ ಮತ್ತು ಅವರ ದೃಷ್ಟಿಯಲ್ಲಿ ಈ ಸುಳ್ಳುಗಳು ಸುಳ್ಳುಗಳೇ ಅಲ್ಲ. ಒಂದು ಒಳ್ಳೆಯ ಕಾರ್ಯಕ್ಕಾಗಿ ಸುಳ್ಳು ಹೇಳುವುದು ಕ್ಷಮಾರ್ಹ ಎನ್ನುವುದು ಅವರ ನಂಬಿಕೆ. ಒಮ್ಮೆ ಮದುವೆಯಾಯಿತೆಂದರೆ ನಂತರ ಹೊಂದಿಕೆ ಎನ್ನುವುದು ಅನಿವಾರ್ಯವಾಗಿ, ಅಭ್ಯಾಸವೂ ಆಗಿಬಿಡುತ್ತದೆ ಎನ್ನುವುದು ಅವರ ನಿಲುವು. ಈ ತರ್ಕ ಕೆಲವೊಮ್ಮೆ ಹೆಚ್ಚು ಕಮ್ಮಿಯಾಗಿ ಮದುವೆ ಮಾಡಿಸಿದವರ ಮೇಲೆ ಗೂಬೆ ಕೂರಿಸುವ ಪ್ರಸಂಗಗಳು ಬೇಕಾದಷ್ಟು ನಡೆದಿವೆ, ನಡೆಯುತ್ತಿವೆ. ಆತ್ಮಪ್ರಶಂಸೆ ಅಥವಾ ತೀರಾ ಸ್ವಂತದವರ ಕುರಿತು ಹೇಳಿಕೊಳ್ಳುವಾಗ ಸುಳ್ಳು ಬಾಯಿಂದ ಉದುರುವ ಸಂಭವ ಕೊಂಚ ಜಾಸ್ತಿ. ಟಿ. ವಿ. ಧಾರಾವಾಹಿಯೊಂದರ ಸಣ್ಣ ಪಾತ್ರವೊಂದರಲ್ಲಿ ಪರಿಚಿತರೊಬ್ಬರು ಕಾಣಿಸಿಕೊಂಡಿದ್ದರು. ಅವರು ಭೇಟಿಯಾದಾಗ ಸಹಜವಾಗಿ ಈ ಬಗ್ಗೆ ಎರಡು ಪ್ರಶಂಸೆಯ ಮಾತಾಡಿದೆ. ಈ ಪ್ರಶಂಸೆ ಅನ್ನುವುದನ್ನು ಗಮನಿಸಿದಾಗ ಇಲ್ಲೂ ಕೂಡಾ ಹೆಚ್ಚಿನಂಶ ಕೆಲಸ ಮಾಡುವುದು ಸುಳ್ಳು. ಯಾವುದೋ ಕಾರ್ಯಕ್ರಮಕ್ಕೆ ಹೋಗಿರುತ್ತೇವೆ. ಭಾಷಣಕಾರರು ಘಂಟೆ ಹೊತ್ತು ಕೊರೆದು ತಲೆ ಕೆಡಿಸಿರುತ್ತಾರೆ. ಆದರೂ, 'ಭಾಷಣ ಚೆನ್ನಾಗಿತ್ತು ಸಾರ್, ಚೆನ್ನಾಗಿ ಮಾತಾಡಿದ್ರಿ' ಅನ್ನುವುದೊಂದು ಸೌಜನ್ಯ. ಇದೊಂದು ಲೋಕಾರೂಢಿ ಎನ್ನುವುದು ಗೊತ್ತಿದ್ದರೂ ಸ್ವಂತಕ್ಕೆ ಅದನ್ನು ಆರೋಪಿಸಿಕೊಳ್ಳದ ಆ ಜನ ಈ ಮಾತನ್ನು ಪರಮ ಸತ್ಯವೆಂದು ನಂಬಿ ಮತ್ತೊಂದು ಅವಕಾಶ ಸಿಕ್ಕಿದಾಗ ಮತ್ತಷ್ಟು ಕೊರೆಯುತ್ತಾರೆ. ಹೊಗಳಿಕೆಗೆ ಕಿವಿ ಜೋಲು ಬಿಡುವುದು ಮಾನವ ಸಹಜ ದೌರ್ಬಲ್ಯ. 'ಹೊಗಳಿ ಹೊಗಳಿ ಅಟ್ಟಕ್ಕೆ ಹತ್ತಿಸುವುದು' ಗಾದೆ ಮಾತಾಗಿದೆ. ವಾಸ್ತವವಾಗಿ ಹೊಗಳಿಕೆ ಅಂದರೇನು ? ಚಿಟಿಕೆ ಸತ್ಯಕ್ಕೆ ಬೊಗಸೆ ತುಂಬಾ ಸುಳ್ಳು ಸೇರಿಸಿ ಮಾಡಿದ ಕರ್ಣ ರಸಾಯನ. ಕೆಲವೊಮ್ಮೆ ಸತ್ಯದ ಸೋಂಕಿಲ್ಲದೆ ಬರೀ ಸುಳ್ಳೇ ಪ್ರಾಧಾನ್ಯ ವಹಿಸುವುದೂ ಉಂಟು. ಈ ಥರದ ಹೊಗಳಿಕೆಗಳ ಹಿಂದೆ ನಾನಾ ಉದ್ದೇಶಗಳು ಕೆಲಸ ಮಾಡುತ್ತಿರುವ ಸಂಭವವನ್ನು ಕೆಲ ಸಂದರ್ಭಗಳಲ್ಲಿ ಅಲ್ಲಗಳೆಯುವಂತಿಲ್ಲ. ಅದಿರಲಿ, ನಾನು ಆಡಿದ ಎರಡು ಒಳ್ಳೆಯ ಮಾತುಗಳಿಂದ ಧಾರಾವಾಹಿಯ ನಟರು ಹಿರಿಹಿಗ್ಗಿದರು. ಅಂತಹ ಒಂದು ಸದವಕಾಶ ತಮ್ಮನ್ನು ಅರಸಿಕೊಂಡು ಬಂದಲ್ಲಿಂದ ತೊಡಗಿ, 'ಈಗಾಗಲೇ ಬಹಳ ಆಫರ್‌ಗಳು ಬರ್ತಿವೆ' ಎನ್ನುವವರೆಗೆ ಮಾತಾಡಿ ದಣಿದರು. 'ಕೊಚ್ಚಿ ಕೊಚ್ಚಿ ಇಳಿಸ್ತಾನೆ' ಎನ್ನುವ ಮಾತು ಯಾರೂ ಈ ಥರದ ಬಡಾಯಿಗೆ ತಗುಲುಹಾಕಬಹುದಾದರೂ ಅಂತಹ ಟೀಕೆ ಸಜ್ಜನಿಕೆಯ ಲಕ್ಷಣವಲ್ಲವೆಂದು ನಾನು ಸುಮ್ಮನಿದ್ದೇನೆಂದು ಹೇಳಿದರೆ ನೀವು ನಂಬುವ ಪೈಕಿ ಅಲ್ಲವೆಂದು ನಾನು ಬಲ್ಲೆ.

ಸುಳ್ಳನ್ನು ಸತ್ಯವೆಂದೂ, ಕರಿಯನ್ನು ಬಿಳಿ ಎಂದೂ, ಸಾಧಿಸಿ ತೋರಿಸಬೇಕಾಗುವುದು ಕೆಲವರ ವೃತ್ತಿ, ಹೊಟ್ಟೆಪಾಡು. ಸಮೃದ್ಧ ಮೇಲುಸಂಪಾದನೆಯಿರುವ ಸರ್ಕಾರಿ ನೌಕರರು ಹಣದ ಮುಗ್ಗಟ್ಟಿನ ಬಗ್ಗೆ ಸದಾ ಮಾತಾಡುವುದು ಮೇಲ್ನೋಟಕ್ಕೆ ಹಾಸ್ಯಾಸ್ಪದವೆನ್ನಿಸಿದರೂ ತಮ್ಮಲ್ಲಿಯ ಕಪ್ಪು ಹಣವನ್ನು ಮುಚ್ಚಿಡಬೇಕೆಂಬ ಹವಣಿಕೆ ಈ ತೋರುಗಾಣಿಕೆಯಲ್ಲಿ ಅಡಗಿರುವುದು ಸ್ಪಷ್ಟ. ಮಕ್ಕಳನ್ನು ಸ್ಕೂಲಿಗೆ ಸೇರಿಸುವಾಗ ಖುಷಿ ಬಂದ ವಯಸ್ಸನ್ನು ಬರೆಸುತ್ತಿದ್ದುದು ಹಿಂದೆಲ್ಲಾ ನಡೆಯುತ್ತಿದ್ದ ಸಾಮಾನ್ಯ ಸಂಗತಿ. ಒಂದಿಷ್ಟು ಧೋರಣೆ, ಒಂದಿಷ್ಟು ಅಜ್ಞಾನ ಮಿಳಿತಗೊಂಡಿರುತ್ತಿದ್ದ ಈ ಕ್ರಿಯೆ ಕ್ರಮೇಣ ಸ್ಕೂಲಿಗೆ ಸೇರಿಸುವ ಕಾಲಕ್ಕೆ ಸರಿಯಾಗಿ ಐದು ವರ್ಷ, ಹತ್ತು ತಿಂಗಳಾಗುವಂತೆ ಮಾರ್ಪಾಟಾಗಿ ನಂತರ ಹುಟ್ಟಿದ ದಾಖಲೆಯೊದಗಿಸುವುದು ಕಡ್ಡಾಯವಾದ ಮೇಲೆ ನಿಂತುಹೋದದ್ದನ್ನು ಎಲ್ಲರೂ ಬಲ್ಲರು. ಬಸ್ಸಲ್ಲಿ ಟಿಕೇಟು ಮಾಡಿಸಬೇಕಾದಾಗ, ಸಿನಿಮಾಕ್ಕೆ ಟಿಕೇಟು ತೆಗೆಸಬೇಕಾದಾಗ, ತನ್ನಷ್ಟಕ್ಕೆ ಮಕ್ಕಳ ವಯಸ್ಸು ತಗ್ಗಿಬಿಡುತ್ತದೆ. ತೊಡೆಯ ಮೇಲೆ ಕೂರಿಸಿಕೊಂಡು, ಸೊಂಟಕ್ಕೇರಿಸಿಕೊಂಡು, ಅವು ಇದ್ದದ್ದಕ್ಕಿಂತಾ ಸಣ್ಣವು ಎಂದು ಮನಗಾಣಿಸಲು ಪಡುವ ಪಾಡು ತಮಾಷೆಯಾಗಿರುತ್ತದೆ. ಗಂಡು ತನ್ನ ಸಂಬಳದ ಬಗ್ಗೆ, ಹೆಣ್ಣು ವಯಸ್ಸಿನ ಬಗ್ಗೆ, ನಿಜ ಹೇಳುವುದಿಲ್ಲವೆಂಬುದನ್ನು 'ಆ ವಿಷಯ ಕೇಳಬಾರದು' ಎಂಬುದರಲ್ಲಿ ಅಡಗಿಸಿಟ್ಟು ಹೇಳುತ್ತಾರೆ. ಸುಳ್ಳು ದಾಖಲೆಯೊದಗಿಸಿ ವೃತ್ತಿಪರ ಕಾಲೇಜುಗಳಲ್ಲಿ ಸೀಟು ಗಿಟ್ಟಿಸುವುದು, ಸುಳ್ಳು ದಾಖಲೆಯ ಬಲದಿಂದ ಕೆಲಸ ಗಿಟ್ಟಿಸುವುದು, ಇವತ್ತಿನ ದಿನಮಾನದಲ್ಲಿ ಅಲ್ಲಲ್ಲಿ ನಡೆಯುತ್ತಿರುವ ಸಂಗತಿ. ಪ್ರಾಮಾಣಿಕನಾಗಿರುವವನು 'ಕೆಲಸಕ್ಕೆ ಬಾರದ ಬುದ್ದು' ಎನ್ನುವಂತೆ ಗುರ್ತಿಸಲ್ಪಡುತ್ತಾನೆ. ಸುಳ್ಳು ಇವತ್ತಿನ ದೇವರು. ಈ ದೇವರ ಪ್ರಭಾವಲಯದಲ್ಲಿ ಸಿಕ್ಕಿಕೊಳ್ಳದಿರುವವನು ನತದೃಷ್ಟ. 'ಮನೆ ಬಾಗಿಲಿಗೆ ಬರುವ ಸೇಲ್ಸ್‌ಮನ್‌ಗಳಿಂದ ತೊಡಗಿ ಮನೆಕೆಲಸಕ್ಕೆ ಬರುವ ಒಕ್ಕಲುಗಿತ್ತಿಯವರೆಗೆ ಸುಳ್ಳು ವಿಜೃಂಭಿಸುತ್ತಿರುತ್ತದೆ.' 'ಸತ್ಯ ಹೇಳಿದರೆ ನೆನಪಿಟ್ಟುಕೊಳ್ಳಬೇಕಾದ ಅವಶ್ಯಕತೆ ಇಲ್ಲ. ಸುಳ್ಳಾದರೆ ನೆನಪಿನಲ್ಲಿಟ್ಟುಕೊಳ್ಳದೆ ವಿಧಿ ಇಲ್ಲ' ಎನ್ನುವ ಮಾತೂ ಇವತ್ತು ಅರ್ಥಹೀನವಾಗಿದೆ. ಯಾವುದೋ ಹೇಳಿಕೆಯ ಕುರಿತು, 'ತಾವು ಹಾಗೆ ಹೇಳಿಯೇ ಇಲ್ಲ' ಎಂದು ಜಾರಿಕೊಳ್ಳುವ ರಾಜಕಾರಣಿಗಳ ಬಗ್ಗೆ ಯಾರಿಗೆ ಗೊತ್ತಿಲ್ಲ ? ಇಂದಿನ ತಾಂತ್ರಿಕ ಮುನ್ನಡೆಯ ದಿನಗಳಲ್ಲಿ ಹೀಗೆ ನುಣುಚಿಕೊಳ್ಳುವುದು ಸ್ವಲ್ಪ ಕಷ್ಟವಾದರೂ, 'ನಾನು ಹೇಳಿದ್ದು ಅರ್ಥದಲ್ಲಲ್ಲ, ಈ ಅರ್ಥದಲ್ಲಿ.....' ಎಂದು ತಿರುಚುವ ಅವಕಾಶ ಇದ್ದೇ ಇದೆ. ಒಡೆದ ಮುತ್ತನ್ನು ಜೋಡಿಸುವ ಬುದ್ಧಿವಂತರು ಇದ್ದೇ ಇರುತ್ತಾರೆ. ಸುಳ್ಳು ಎಲ್ಲೆಲ್ಲಿ, ಯಾವ ಯಾವಾಗ, ಯಾತ್ಯಾತಕ್ಕೆ ಉಪಯೋಗಿಸಲ್ಪಡುತ್ತದೆ ಎಂದು ವಿವರಿಸಹೊರಟರೆ ಒಂದು ಮಹಾಪ್ರಬಂಧಕ್ಕಾಗುವಷ್ಟು ವಿಷಯಗಳನ್ನು ಒಗ್ಗೂಡಿಸಬಹುದಾದ ಸಾಧ್ಯತೆ ಇದೆ. ಸುಳ್ಳಿನ ಹರಹು ಅಷ್ಟು ವಿಸ್ತಾರವಾದದ್ದು.



ಮಧುಮತಿ ಉಡುಪ
'ಗೌರಿ', ೩ನೇ ಕ್ರಾಸ್
ಗಾಂಧೀನಗರ 'ಎ' ಬ್ಲಾಕ್
ಶಿವಮೊಗ್ಗ-೫೭೭೨೦೧



**ಎಸ್. ನಿಜಲಿಂಗಪ್ಪ** ಒಂದು ಅಧ್ಯಯನ
*ಕೋ. ಚೆನ್ನಬಸಪ್ಪ*
**ಪುಟ : 238** **ಬೆಲೆ : ರೂ. 125**
**ಲೋಹಿಯಾ ಪ್ರಕಾಶನ**, ಕ್ಷಿತಿಜ, ಕಪ್ಪಗಲ್ಲು ರಸ್ತೆ
ಬಳ್ಳಾರಿ-583 103

*ಹಳೆಯ ಕಾಂಗ್ರೆಸಿಗ, ನಿಷ್ಠಾವಂತ ರಾಜಕೀಯ ಧುರೀಣ, ಏಕೀಕೃತ ಕರ್ನಾಟಕದ ಪ್ರಪ್ರಥಮ ಮುಖ್ಯಮಂತ್ರಿ ಶ್ರೀ ಎಸ್. ನಿಜಲಿಂಗಪ್ಪ ಅವರ ಕುರಿತಾದ ಒಂದು ಅಧ್ಯಯನ. ರಾಜ್ಯ ಹಾಗೂ ರಾಷ್ಟ್ರ ರಾಜಕಾರಣದಲ್ಲಿ ಮಹತ್ವದ ಪಾತ್ರವಹಿಸಿ ವಿವಿಧ ರಾಜಕೀಯ ಹುದ್ದೆಗಳನ್ನಲಂಕರಿಸಿದ ಅವರ ವ್ಯಕ್ತಿತ್ವ ಆಡಂಬರರಹಿತವಾದುದು. ಅವರೊಂದಿಗೆ ಐವತ್ತು ವರ್ಷಗಳ ಸುದೀರ್ಘ ಒಡನಾಟವಿದ್ದ ಶ್ರೀ ಕೋ. ಚೆನ್ನಬಸಪ್ಪ ತಮ್ಮ ಲೇಖನಿಯಿಂದ ನಿಜಲಿಂಗಪ್ಪನವರ ಧೀಮಂತ ವ್ಯಕ್ತಿತ್ವದ ಪರಿಚಯ ನೀಡುತ್ತಾರೆ.*

**ಯಾನ ಮತ್ತು ಇತರ ನಾಟಕಗಳು**
*ಆರ್. ವಿ. ಭಂಡಾರಿ*
**ಪುಟ : 167** **ಬೆಲೆ : ರೂ. 80**
**ಬಂಡಾಯ ಪ್ರಕಾಶನ**, ಅರೆ ಅಂಗಡಿ, ಹೊನ್ನಾವರ
ಉತ್ತರ ಕನ್ನಡ - 581 430



*ಈ ದೇಶದ ನೂರಾರು ಅನಿಷ್ಟಗಳನ್ನು ಪಟ್ಟಿ ಮಾಡಿರುವ ಎಂಟು ಕಿರುನಾಟಕಗಳ ಸಂಗ್ರಹ. ಮಾನವತೆಯನ್ನು ಮೆಟ್ಟಿನಿಂತ ಕೋಮುವಾದಿಗಳು, ಬಡಜನೋದ್ಧಾರ ಮಾಡುವ ಗೋಮುಖ ವ್ಯಾಘ್ರಗಳು ಲೇಖಕರ ಬರಹದ ಹೊಡೆತಕ್ಕೆ ಸಿಕ್ಕಿ ಒದ್ದಾಡುತ್ತಾರೆ. ಪುರಾಣಗಳಲ್ಲಿ ಬರುವ ಕುರುಡು ಕಥೆಗಳು ಈ ನಾಟಕಗಳ ಮೂಲಕ ಎಡಪಂಥೀಯ ವೈಚಾರಿಕ ದೃಷ್ಟಿಕೋನಗಳಿಂದ ತೂಗಿ ನೋಡಿದಾಗ ಹೇಗೆ ಮರುಹುಟ್ಟು ಪಡೆದು ಹೊಸ ಮೌಲ್ಯಗಳಿಗೆ ಸ್ಪಂದಿಸುತ್ತವೆಯೆಂದು ಇಲ್ಲಿ ಓದಿ ನೋಡಿ !*

**ಒಳದನಿ** (ಲೇಖನ ಸಂಗ್ರಹ)
*ಕೆ. ನ. ಶಿವತೀರ್ಥನ್*
**ಪುಟ : 72** **ಬೆಲೆ : ರೂ. 55**
**ನೈಋತ್ಯ ಪ್ರಕಾಶನ**, 43, ಮಾಂದಳಿರು, 2ನೇ ಹಂತ, ಎಂ. ಬ್ಲಾಕ್, ಕುವೆಂಪುನಗರ, ಮೈಸೂರು - 570 023



*ಸತ್ಯವು ಸರ್ವಶ್ರೇಷ್ಠ, ಪೂಜನೀಯವೆಂದು ನಂಬಿದ ಗಾಂಧೀಜಿಯವರ ಉನ್ನತ ಆದರ್ಶ ವ್ಯಕ್ತಿತ್ವಗಳನ್ನು ತಿಳಿಸುವ ಕೆಲ ಲೇಖನಗಳಿದ್ದು, ಸಾಹಿತಿ-ಕವಿಗಳು ಗಾಂಧಿಯನ್ನು ಕಂಡ ಬಗೆಯನ್ನೂ ಇಲ್ಲಿ ಪರಿಚಯಿಸಲಾಗಿದೆ. ಅಸ್ಪೃಶ್ಯತೆಯ ನಿವಾರಣೆಗೆ ಶ್ರಮಿಸಿದ ಅಂಬೇಡ್ಕರ್ ಬಗ್ಗೆ ಒಂದು ಲೇಖನವಿದೆ. ಇನ್ನುಳಿದ ಲೇಖನಗಳು ಅಂತರ್ಮುಖ ವ್ಯಕ್ತಿತ್ವದ ಹಾಗೂ ಪ್ರಜ್ಞೆಯ ಸಂಕೇತದ ಫಲವಾಗಿ ಹೊರಹೊಮ್ಮಿವೆ. ಗೆಂಡಗಯ್ಯ ಎಂಬ ಇನ್ನೊಂದು ಬಹುಚರ್ಚಿತ ಕಥಾನಕದಿಂದಲೂ ಈ ಲೇಖಕರು ಪರಿಚಿತರು.*

**ಕಾಲ ನಮ್ಮ ಕೈಯಲ್ಲಿದೆ** (ಲೇಖನಗಳು)
*ಶೈಲಜಾ ಉಡಚಣ*
**ಪುಟ : 94** **ಬೆಲೆ : ರೂ. 35**
**ಚೇತನ ಪ್ರಕಾಶನ**, 'ಚೇತನ', 1-891/4, ಜೇವರ್ಗಿ ಕಾಲನಿ, ಓವರ್ ಬ್ರಿಜ್ ಹತ್ತಿರ, ಗುಲಬರ್ಗಾ-2

*ಯುವ ಜನತೆಗೆ ಬಹಳಷ್ಟು ಕಿವಿ ಮಾತುಗಳನ್ನೂ, ಸಂದೇಶಗಳನ್ನೂ ಹೊತ್ತು ತಂದಿರುವ ಈ ಲೇಖನ ಸಂಗ್ರಹದಲ್ಲಿ ಮನಸ್ಸಿದ್ದಲ್ಲಿ ಮಾರ್ಗವೆಂಬ ಬಲವಾದ ಪ್ರತಿಪಾದನೆಯಿದೆ. ವ್ಯಕ್ತಿತ್ವ ವಿಕಾಸಕ್ಕೆ ಸಹಾಯವಾಗಬಹುದಾದಂಥ ಮಾರ್ಗದರ್ಶನ ಹಾಗೂ ಆತ್ಮವಿಶ್ವಾಸದಿಂದ ಮುನ್ನಡೆಯುವ ಬಗ್ಗೆ ಧೈರ್ಯದ ಮಾತುಗಳು ಇಲ್ಲಿವೆ. ಇವು ಸಾರ್ವತ್ರಿಕ ಸತ್ಯಗಳಾಗಿದ್ದು ಎಲ್ಲ ವರ್ಗದ ಜನರಿಗೂ ಅನ್ವಯಿಸುವಂಥವು.*

**ಕೃತ** (ಕಥಾ ಸಂಕಲನ)
*ಎಂ. ವ್ಯಾಸ*
**ಪುಟ : 168** **ಬೆಲೆ : ರೂ. 50**
**ಕಾಸರಗೋಡು ಪ್ರಕಾಶನ**, ವಿದ್ಯಾನಗರ, ಕಾಸರಗೋಡು-3

*ಯಾವ ಹುತ್ತದಲ್ಲಿ ಯಾವ ಹಾವೋ ಎಂಬಂತೆ ವಿವಿಧ ವ್ಯಕ್ತಿಗಳ ಅಂತರಂಗದಲ್ಲಿ ಸುಳಿದಾಡುವ, ಅಳತೆಗೆ ಸಿಗದ ಮನುಷ್ಯನ ನಿಗೂಢ ವ್ಯಕ್ತಿತ್ವದ ಬೆನ್ನುಹತ್ತಿ ಜಾಲಾಡುವ ಲೇಖಕರು ಕಥಾಸಾಹಿತ್ಯದಲ್ಲಿ ಕ್ರಮಿಸಿರುವ ದಾರಿ ವಿಶಿಷ್ಟ ಹಾಗೂ ನಿಗೂಢ. ಇಲ್ಲಿನ ಕಥೆಗಳ ಮೂಲಕ ಅವರು ಮಾನವನ ವಿವಿಧ ಸ್ವಭಾವಗಳ ಪರಿಚಯ ಮಾಡಿಸುತ್ತಾರೆ. ಅವರು ಬಗೆದಷ್ಟೂ ನಿಗೂಢವಾಗಿ, ಅರ್ಥೈಸಿದಷ್ಟೂ ಒಗಟಾಗಿ ಅಪರಿಚಿತ ಮುಖವಾಡದ ಕಾಮುಕತೆ ಹಾಗೂ ಸಾವು ಸವಾಲೆಸೆಯುತ್ತವೆ. ಬದುಕಿನ ಎರಡು ಮುಖಗಳನ್ನು ಸಂಕೇತಿಸುವಂತೆ ಕಥೆಗಳಿಗೆಲ್ಲ ಎರಡಕ್ಷರದ ಶೀರ್ಷಿಕೆಯಿದೆ.*

**ಕತೆಯಾದಳು ಅಜ್ಜಿ** (ಕಥೆಗಳು)
*ದಮಯಂತಿ ನರೇಗಲ್*
**ಪುಟ : 144** **ಬೆಲೆ : ರೂ. 60**
**ಮನೋಹರ ಗ್ರಂಥಮಾಲಾ**, ಲಕ್ಷ್ಮೀ ಭವನ, ಸುಭಾಸ ರಸ್ತೆ, ಧಾರವಾಡ-1

*ಕಾಲ ಬದಲಾದಂತೆ ಅಳು-ನಗುವಿನ ಅಲೆಅಲೆಗಳಲ್ಲಿ ತೇಲಿ ಮುಳುಗುತ್ತಾ ಸಾಗುವ ಜೀವನದ ಘಟನೆಗಳನ್ನು ವಿವಿಧ ಕೋನಗಳಿಂದ ಸೆರೆಹಿಡಿದ ಉತ್ತಮ ಕಥಾ ಸಂಕಲನ. ಬಾಲ್ಯದಿಂದ ಮುಪ್ಪಿನ - ಸಾವಿನ ಹಂತದವರೆಗೆ ಮಾನವ ತನ್ನ ಬಾಳಗೀತೆಗಳನ್ನು ವಿವಿಧ ರಾಗಗಳಿಗಳವಡಿಸಿ ಹಾಡುವ ಪರಿ ಮನೋಜ್ಞವಾಗಿ ಕಥೆಗಳಲ್ಲಿ ಬಿಂಬಿಸಿದೆ. ಬಹಳ ಸೂಕ್ಷ್ಮವಾದ ಲೇಖಕಿಯ ಮನಸ್ಸು ನಮ್ಮ ಸುತ್ತಮುತ್ತ ನಡೆಯುವ ಕ್ಷಣಕ್ಕೊಂದರಂತೆ ತಿರುವು ಪಡೆಯುವ ಘಟನೆಗಳನ್ನು ಕಥೆಗಳನ್ನಾಗಿಸ ಬಲ್ಲದು. ಹದಿಮೂರು ಕಥೆಗಳ ಸಂಕಲನ.*

**ಪುಸ್ತಕ ಸಂಸ್ಕೃತಿ** (ಅಂಕಣ ಬರಹಗಳು)
*ಡಾ॥ ಹಾ. ಮಾ. ನಾಯಕ*
**ಪುಟ : 422** **ಬೆಲೆ : ರೂ. 165**
**ಗೀತಾ ಬುಕ್ ಹೌಸ್**, ಪ್ರಕಾಶಕರು, ಕೆ. ಆರ್. ಸರ್ಕಲ್, ಮೈಸೂರು-570 001

*ಪುಟ್ಟ ಮಗುವೊಂದು ಒಂದೊಮ್ಮೆ ಹೆತ್ತವರೊಂದಿಗೆ ಪುಸ್ತಕ ಮಳಿಗೆಗೆ ಬಂದಿದ್ದಾಗ, ತನ್ನ ಆಯ್ಕೆಯ ಪುಟ್ಟ ಪುಸ್ತಕ ತನಗೆ ದಕ್ಕದೇ ಹೋದಾಗ ಆ ಮಗುವಿನ ಪ್ರತಿಭಟನೆಯನ್ನೂ, ಅಸಹಾಯಕತೆಯನ್ನೂ ಗುರುತಿಸಿದ ಅಲ್ಲೇ ಇದ್ದ ಹೆಸರಾಂತ ಸಾಹಿತಿ - ವಿಮರ್ಶಕ ಡಾ॥ ಹಾ. ಮಾ. ನಾಯಕರು ತುಂಬ ನೊಂದಿದ್ದರು. ಹೆತ್ತವರು ಮಕ್ಕಳನ್ನು ಓದಿಗೆ ಪ್ರೋತ್ಸಾಹಿಸಬೇಕಾದ ಅಗತ್ಯವನ್ನು ನಾವಿಂದು ಮನಗಾಣಬೇಕಾಗಿದೆ. ಪುಸ್ತಕಾಸಕ್ತರಿಗೆ ಸುಮಾರು ಒಂದು ನೂರು ಪುಸ್ತಕಗಳ ಪರಿಚಯ ಮಾಡಿಕೊಡಲಾಗಿದೆ.*

**ಅವ್ವ** (ಕವಿತೆಗಳು)
*ಡಾ॥ ಸರಜೂ ಕಾಟ್ಕರ್*
**ಪುಟ : [illegible]** **ಬೆಲೆ : ರೂ. 60**
**ಲೋಹಿಯಾ ಪ್ರಕಾಶನ**, 'ಕ್ಷಿತಿಜ', ಕಪ್ಪಗಲ್ಲು ರಸ್ತೆ, ಬಳ್ಳಾರಿ - 583 103

*ಕನ್ನಡ-ಮರಾಠಿ ದಲಿತ ಸಾಹಿತ್ಯ ಸಂಶೋಧಕರಾಗಿ ಡಾಕ್ಟರೇಟ್ ಪಡೆದಿರುವ ಡಾ॥ ಸರಜೂ ಕಾಟ್ಕರ್ ಕವಿತೆಗಳನ್ನು ತಾಯಿಯಂತೆ ಪ್ರೀತಿಸಿ ಗೌರವಿಸುವವರು ಮಾತ್ರವಲ್ಲ, ತಮ್ಮ ಕವಿತೆಗಳಿಗೂ ತಾಯಿ ಪ್ರೀತಿಯನ್ನು ತೋರಿದವರು. ಪ್ರಧಾನಿ ವಾಜಪೇಯಿಯವರ ಕವಿತೆಗಳನ್ನು ಕನ್ನಡಕ್ಕೆ ಅನುವಾದಿಸಿದ ಶ್ರೇಯಸ್ಸು ಇವರಿಗಿದೆ. ಇಲ್ಲಿನ ಕವಿತೆಗಳಲ್ಲಿ ಸರ್ವನಾಶದ ದಾರಿ ಹಿಡಿದಿರುವ ಯುದ್ಧಕೋರರ ಬಗ್ಗೆ, ಬಾಳ್ವೆಯನ್ನು ಕೈಯಾರೆ ಹಾಳುಗೆಡವಿದ ಶಕ್ತಿಗಳ ವಿರುದ್ಧ ಧ್ವನಿಯಿದೆ.*

**- ಇಂದಿರಾ ಕುಮಾರಿ**

# ತೇಜಸ್ವಿಯ ಸಾಧನೆಗೆ ಸಂದ ಗೌರವ



**ಸ್ವಾಮರ್ಥ್ಯದಿಂದ ತಮ್ಮ ಅದ್ಭುತ ಕಲೆಗಾರಿಕೆಯನ್ನೂ ಅನಂತವಾದ ಸೃಜನಶೀಲ ಆಯಾಮಗಳನ್ನೂ ದಾಖಲಿಸುವ ಮುಖೇನ ತೇಜಸ್ವಿಯವರು ತಮ್ಮ ಸ್ವತಂತ್ರ, ಸ್ವೋಪಜ್ಞ ಅಸ್ತಿತ್ವವನ್ನು ಸಾರಿ ಹೇಳುತ್ತಿರುವುದಕ್ಕೆ ದ್ಯೋತಕ ಅವರಿಗೆ ಲಭಿಸಿರುವ ಪಂಪ ಪ್ರಶಸ್ತಿ.**

**ಹೊ**ಸಗನ್ನಡ ಸಾಹಿತ್ಯಕ್ಕೊಂದು ಅಪೂರ್ವವಾದ ಮತ್ತು ಅಪರೂಪದ ತಿರುವನ್ನು ತಂದುಕೊಟ್ಟ ಕನ್ನಡದ ಹೆಮ್ಮೆಯ ಕತೆಗಾರ ಶ್ರೀ ಪೂರ್ಣಚಂದ್ರ ತೇಜಸ್ವಿಯವರಿಗೆ ಈ ಸಾಲಿನ ಪಂಪ ಪ್ರಶಸ್ತಿ ಲಭಿಸಿದೆ. ಇಂದಿನ ಕ್ಷುಲ್ಲಕ ಹಾಗೂ ಕ್ಷುದ್ರ ಸಾಹಿತ್ಯಕ ರಾಜಕಾರಣದಲ್ಲಿ ಇಂತಹ ಎಲ್ಲೋ ಒಂದೆರಡು ಮಿಂಚಿನ ಸುದ್ದಿಗಳು ಪ್ರಜ್ಞಾವಂತರಿಗೆ ಪುಲಕ ನೀಡುತ್ತವೆ.

ತೇಜಸ್ವಿಯವರು ನಮ್ಮ ರಾಷ್ಟ್ರಕವಿ ಕುವೆಂಪು ಅವರ ಪುತ್ರ ಎಂಬ ಅಭಿಮಾನ ಒಂದು ಕಡೆ ಇರಲಿ; ಕುವೆಂಪು ಮೂಲಕ ತೇಜಸ್ವಿಯವರನ್ನು ಗುರುತಿಸುವ ಪರಿಪಾಠವೂ ಮತ್ತೊಂದೆಡೆ ಇರಲಿ; ಸ್ವಸಾಮರ್ಥ್ಯದಿಂದ ತಮ್ಮ ಅದ್ಭುತ ಕಲೆಗಾರಿಕೆಯನ್ನೂ ಅನಂತವಾದ ಸೃಜನಶೀಲ ಆಯಾಮಗಳನ್ನೂ ದಾಖಲಿಸುವ ಮುಖೇನ ತೇಜಸ್ವಿಯವರು ತಮ್ಮ ಸ್ವತಂತ್ರ, ಸ್ವೋಪಜ್ಞ ಅಸ್ತಿತ್ವವನ್ನು ಸಾರಿ ಹೇಳುತ್ತಿರುವುದಕ್ಕೆ ದ್ಯೋತಕ ಅವರಿಗೆ ಲಭಿಸಿರುವ ಪಂಪ ಪ್ರಶಸ್ತಿ.

ಖ್ಯಾತ ನವ್ಯ ವಿಮರ್ಶಕ ಪ್ರೊ. ಜಿ. ಎಚ್. ನಾಯಕರ ನೇತೃತ್ವದ ಸಮಿತಿಯು ಈ ಪ್ರಶಸ್ತಿಗಾಗಿ - ಈ ಸಾಲಿಗಾಗಿ - ತೇಜಸ್ವಿಯವರನ್ನು ಆಯ್ಕೆ ಮಾಡಿದ್ದು ಕೂಡ ಸಂತೋಷದ ಸಂಗತಿ. ತೇಜಸ್ವಿಯವರ ಪ್ರಾರಂಭಿಕ ಘಟ್ಟದ ಬರವಣಿಗೆಯನ್ನು ಗಂಭೀರ ನೆಲೆಯಿಂದ ಗಮನಿಸುತ್ತ ಬಂದಿರುವ ನಾಯಕರು ತೇಜಸ್ವಿಯವರ ಸೃಜನಶೀಲತೆಯ ಅಪಾರ ಹೊಳಹುಗಳನ್ನು ಗುರುತಿಸಿ ಓದುಗರ, ಸಹೃದಯರ ಸಮೀಪಕ್ಕೆ ಕೊಂಡೊಯ್ಯುವ ಸೇತುವೆಯೋಪಾದಿಯ ಕೆಲಸವನ್ನು ಮಾಡುತ್ತಲೇ ಬಂದಿದ್ದಾರೆ. ಹಾಗೆಯೇ ಬದಲಾದ ತೇಜಸ್ವಿಯವರ ಬರಹದ ಕ್ರಮಗಳನ್ನು ಸಾಮಾಜಿಕ ಮತ್ತು ಸಾಂಸ್ಕೃತಿಕ ನೆಲೆಗಳಿಂದ ವಿಶ್ಲೇಷಿಸುವ ಕಾಯಕವನ್ನು ನಡೆಸಿಕೊಂಡು ಬಂದಿದ್ದಾರೆ. ಆದರೂ ತೇಜಸ್ವಿಯವರ ಒಟ್ಟು ಬರಹಗಳ ಹಿನ್ನೆಲೆಯಲ್ಲಿ ಅವರಿಂದ ಒಟ್ಟಂದದ ಒಂದು ವಿಮರ್ಶಾ ಹೊತ್ತಗೆ ಬರಬೇಕಾಗಿದೆ. ಅದಕ್ಕಾಗಿ ಕನ್ನಡ ವಿಮರ್ಶಾಲೋಕ ಕಾತುರದಿಂದ ಕಾಯುತ್ತಿದೆ.

ನಾಯಕರು ಮತ್ತು ತೇಜಸ್ವಿಯವರು ಓರಗೆಯ ಗೆಳೆಯರು; ಬದುಕಿನ ಭೂತ, ವರ್ತಮಾನ, ಭವಿಷ್ಯತ್ತುಗಳ ನೆಲೆಯಿಂದ ಇಬ್ಬರೂ ಸಮೀಪವರ್ತಿಗಳು. ತೇಜಸ್ವಿಯವರು ನಾಯಕರ ಕುಟುಂಬ ಸ್ನೇಹಿತ, ಅಂದರೆ ಈ ಪ್ರಶಸ್ತಿಯು ಇಬ್ಬರು ಸ್ನೇಹಿತರ ನಡುವೆ ನಡೆದ ಕೊಡು-ಕೊಳ್ಳಾಟ ಎಂದು ಯಾರೂ ತಪ್ಪು ತಿಳಿಯಬೇಕಾದ ಅಗತ್ಯವಿಲ್ಲ.

ಏಕೆಂದರೆ ನಾಯಕರ ಸ್ವಭಾವ ತಿಳಿದವರಿಗೆ ಚೆನ್ನಾಗಿ ಗೊತ್ತು. ಅವರೆಂದೂ ದಾಕ್ಷಿಣ್ಯಕ್ಕೆ, ವೈಯಕ್ತಿಕ ಒಲವಿಗೆ, ಪಕ್ಷಪಾತಕ್ಕೆ ಒಳಗಾದವರಲ್ಲ. ಯೋಗ್ಯರಿಗೆ ಪ್ರಶಸ್ತಿ ಸಿಕ್ಕರೆ ಪ್ರಶಸ್ತಿಗೆ ಗೌರವ ಎಂಬ ಹಾ. ಮಾ. ನಾಯಕರ ನಿಲುವನ್ನು ಸಮರ್ಥಿಸುವವರು. ಹಾಗೆ ನೋಡಿದರೆ ತೇಜಸ್ವಿಯವರಿಗೆ ಸಾಹಿತ್ಯದ ಉನ್ನತ ಗೌರವವೆನಿಸಿಕೊಂಡ ಜ್ಞಾನಪೀಠ ಮರ್ಯಾದೆ ಸಿಗಬೇಕಿತ್ತು, ಇಷ್ಟರಲ್ಲಾಗಲೇ. ಅನಂತಮೂರ್ತಿಯಂಥವರಿಗೇ ಸಿಕ್ಕಿರುವಾಗ ತೇಜಸ್ವಿಗೆ ಸಿಗಬಾರದೆ? ಇಲ್ಲೆಲ್ಲ ಖಾಜೀನ್ಯಾಯ ಮಾಡುವ, ಚೌಕಾಸಿ ನಡೆಸುವ, ಒಂದನ್ನು ಹೋಲಿಸಿ ಮತ್ತೊಂದನ್ನು ಹೀಗಳೆಯುವ ಪ್ರಮೇಯವಿಲ್ಲ. ಎಂತೆಂಥವರೋ ಜ್ಞಾನಪೀಠದಿಂದ ಪುರಸ್ಕೃತರಾಗಿರುವಾಗ ತೇಜಸ್ವಿಯಂಥ ನಿಜವಾದ ಕಲಾವಿದನಿಗೆ ನಾವು ಆ ಮರ್ಯಾದೆ ನೀಡಬೇಕಾದ್ದು ಸಹಜವಾಗಿದೆ. ಈಗಾಗಲೇ ತೀಕ್ಷ್ಣ ವಿಚಾರ ಪ್ರಜ್ಞೆಯುಳ್ಳ ಓದುಗನು ತೇಜಸ್ವಿಯವರಿಗೆ ತನ್ನ ಹೃದಯದ ಭಾವಪೂರ್ಣ ಮೆಚ್ಚುಗೆ, ಗೌರವಗಳನ್ನು ಸಲ್ಲಿಸಿರುವನು. ಕನ್ನಡದ ಅಪಾರ ಓದುಗವರ್ಗ ಅವರಿಗೆ ಪಂಪ ಪ್ರಶಸ್ತಿಯಾದರೂ ಸಿಕ್ಕಿತಲ್ಲ ಎಂದು ಸಮಾಧಾನಗೊಂಡಿದೆ.

ವಿಜ್ಞಾನ-ಸಾಹಿತ್ಯ-ಪರಿಸರ ಈ ಮೂರು ಸಾಂಸ್ಕೃತಿಕ ವಲಯಗಳನ್ನು ಖಚಿತವಾಗಿ ಅರ್ಥಮಾಡಿಕೊಂಡು, ಅರ್ಥೈಸುವ, ಕಲೆಯ ಮೂಲಕ ತಮ್ಮದೇ ಆದ ಹೊಳಹುಗಳನ್ನು ಸಿದ್ಧಾಂತಗಳನ್ನು ಸೃಷ್ಟಿಶೀಲವಾಗಿ ಕಟ್ಟಿಕೊಡುವ ತೇಜಸ್ವಿಯವರ ಬರೆಹವನ್ನು ನಾವಿನ್ನೂ ಗಂಭೀರವಾಗಿ ಅಧ್ಯಯಿನಿಸಿಲ್ಲ ಎಂಬುದು ವಿಷಾದದ ಸಂಗತಿ. ತೇಜಸ್ವಿಯವರ ಒಟ್ಟು ಬರವಣಿಗೆಯನ್ನು ಕೂಡಿಸಿ ನೋಡಿ, ಸಿದ್ಧಾಂತೀಕರಿಸುವ, ಆ ಮುಖೇನ ನಮ್ಮ ಸಮಾಜ ಮತ್ತು ಸಂಸ್ಕೃತಿಗಳ ಫಲಿತಗಳನ್ನು ಕಂಡುಕೊಳ್ಳುವ ನಮ್ಮ ಜೀವಕ್ಕೆ, ಜೀವನಕ್ಕೆ ಆಪ್ಯಾಯ ಮಾಡಿಕೊಳ್ಳುವ ಕೆಲಸ ಇನ್ನಾದರೂ ನಡೆಯಬೇಕು.

ತೇಜಸ್ವಿಯವರ ಬರಹ ವ್ಯಾಪಕವಾದದ್ದು. ಅವರ ಲೇಖನ ಕೃಷಿಯು ಸಾಹಿತ್ಯದ ಹಲವು ಪ್ರಕಾರಗಳಲ್ಲಿ ನಡೆದಿದೆ. ಮುಖ್ಯವಾಗಿ ಕಥೆ ಹಾಗೂ ಕಾದಂಬರಿಗಳು ಅವರ ಸೃಜನಶೀಲ ಚಿಂತನೆಯನ್ನು ದಾಖಲಿಸಿವೆ. ಇನ್ನುಳಿದಂತೆ ಅವರು ಕಳೆದ ಹತ್ತು-ಹದಿನೈದು ವರ್ಷಗಳಿಂದೀಚೆಗೆ ಬರೆದು ಪ್ರಕಟಿಸುತ್ತಿರುವ ವಿಜ್ಞಾನ ಹಾಗೂ ಸಾಮಾನ್ಯ ಜ್ಞಾನದ ಬರಹಗಳು ನಮ್ಮ ಕನ್ನಡ ಓದುಗರಿಗೆ ಹುಲುಸಾದ ಸಾಮಗ್ರಿಗಳನ್ನು ಒದಗಿಸಿಕೊಟ್ಟಿವೆ.

ಇಲ್ಲಿ ಎರಡು ಮುಖ್ಯವಾದ ಸಂಗತಿಗಳನ್ನು ಗುರುತಿಸಬೇಕು: ಕನ್ನಡ ಲೇಖಕರೂ, ಚಿಂತಕರೂ ಆದ ತೇಜಸ್ವಿಯವರು ತಮ್ಮ ಸೃಷ್ಟಿಶೀಲ ಬರಹಗಳಲ್ಲಿ ಕೊಟ್ಟ ಆಕೃತಿಗಳು; ಎರಡನೆಯದು ತಮ್ಮ ವಿಜ್ಞಾನ, ಸಾಮಾನ್ಯ ಜ್ಞಾನದ ಹಲವು ಮಜಲುಗಳನ್ನು ದಾಖಲೆ ಸಮೇತ ಅವರು ಪ್ರಸ್ತುತಪಡಿಸುತ್ತಲೇ ಕಟ್ಟಿಕೊಡುತ್ತಿರುವ ಜ್ಞಾನ ಪ್ರಧಾನ ಮಾಹಿತಿಗಳು. ಇವೆರಡೂ ತೇಜಸ್ವಿಯವರಲ್ಲಿ ಪೂರಕವಾಗಿವೆ. ಒಟ್ಟಾರೆ ಅವರ ಚಿಂತನೆಯನ್ನು ಪ್ರಭಾವಿಸಿರುವುದು ನಿಗೂಢ ಪರಿಸರ ಹಾಗೂ ಅದಕ್ಕೆ ಅಂಟಿಕೊಂಡಿರುವ ಮನುಷ್ಯ ಸಮಾಜ.

ತೇಜಸ್ವಿಯವರು ಹಳೆಯದರಲ್ಲೇ ಹೊಸದನ್ನು ಕಂಡು ದಾಖಲಿಸುವವರು ಮಾತ್ರವಲ್ಲ ಅನನ್ಯವಾದ ಅಭಿವ್ಯಕ್ತಿ ವಿಧಾನವನ್ನು ಕಂಡುಕೊಂಡವರು.

ಪ್ರಾರಂಭದಲ್ಲಿ ನವ್ಯ ಚಳವಳಿಯಿಂದ ಪ್ರೇರಿತರಾದ ತೇಜಸ್ವಿ ಬಹು ಬೇಗ ತಮ್ಮ ಅಂತಸ್ಸತ್ವದ ಜಾಡನ್ನು ಗುರುತಿಸಿ, ನವ್ಯೋತ್ತರದ ಹೆಬ್ಬಾಗಿಲನ್ನು ಪ್ರವೇಶಿಸಿದರು. ಬಂಡಾಯ, ದಲಿತ ಎಂಬ ಯಾವ ವಿಶೇಷಣವೂ ಇಲ್ಲದೆ ಕೇವಲ 'ನವ್ಯೋತ್ತರ' ಎಂದೇ ಗುರುತಿಸಬೇಕಾದ ಸಾಹಿತ್ಯ ತೇಜಸ್ವಿಯವರದು.

'ಹೊಸ ದಿಗಂತದ ಕಡೆಗೆ' ಅವರು ಚಲಿಸಿದ ಸಂದರ್ಭವಂತೂ ಚಾರಿತ್ರಿಕ ಮಹತ್ವ ಪಡೆದಿದೆ; ಅದು ಒಳಗಿನಿಂದ ಬಂದ ಸಾಂಸ್ಕೃತಿಕ ಜರೂರು. ಕುವೆಂಪು ಅವರ ಕಲಾಸೃಷ್ಟಿ, ಕಾರಂತರ ಪ್ರಯೋಗಶೀಲತೆ ಹಾಗೂ ಲೋಹಿಯಾ ಅವರ ತತ್ವ ಚಿಂತನೆಗಳು ನನ್ನನ್ನು ಗಾಢವಾಗಿ ಕಲಕಿದವು. ಈ ಮೂರೇ ನನ್ನನ್ನು ಪ್ರಭಾವಿಸಿದ್ದು ಎಂಬುದಾಗಿ ಅವರು

**ಡಾ॥ ಎಚ್. ಎನ್. ಮಂಜುರಾಜ್**

ಹೇಳುವಾಗ ಕನ್ನಡ ಸಂಸ್ಕೃತಿ ಎದುರಿಸುತ್ತಿದ್ದ ದುಃಸ್ಥಿತಿ ಮತ್ತು ಅವರ ಬರಹದ ಹಿಂದಿನ ಮೂಲ ಪ್ರೇರಣೆ – ಎರಡನ್ನೂ ನಾವು ಅರಿಯಬಹುದು. ನವ್ಯದ ವ್ಯಕ್ತಿಪ್ರಜ್ಞೆಯನ್ನು ಕೈ ಬಿಟ್ಟ ತೇಜಸ್ವಿಯವರು ನವ್ಯೋತ್ತರ ನೆಲೆಯ, ಬಹುಮಟ್ಟಿಗೆ ಬಂಡಾಯ ಸಾಹಿತ್ಯ ಚಳುವಳಿಯ, ಮೂಲ ಚೋದಕವೆನಿಸಿದ ಸಮೂಹವಾದಿ ನೆಲೆಯಲ್ಲಿ ಸಾಹಿತ್ಯವನ್ನು ನೋಡತೊಡಗಿದರು. ಕರ್ವಾಲೋ, ಚಿದಂಬರ ರಹಸ್ಯ, ಜುಗಾರಿ ಕ್ರಾಸ್, ಕಿರಗೂರಿನ ಗಯ್ಯಾಳಿಗಳು ಮೊದಲಾದ ಕೃತಿಗಳಲ್ಲಿ ಅವರ ಈ ಹೊಸ ಸೃಷ್ಟಿ, ಹೊಸ ದೃಷ್ಟಿಗಳನ್ನು ಕಾಣಬಹುದು.

ಗ್ರಾಮ ಭಾರತದ ಅನೇಕ ಸ್ಥಿತ್ಯಂತರಗಳನ್ನು ತೇಜಸ್ವಿಯವರಂತೆ ತೆರೆದು ತೋರಿದ ಮತ್ತೊಬ್ಬ ಕನ್ನಡ ಲೇಖಕ ತಕ್ಷಣಕ್ಕೆ ನೆನಪಾಗರು. ಆಧುನಿಕತೆ, ನಾಗರಿಕತೆ, ಸಂಸ್ಕೃತೀಕರಣಗಳು ಗ್ರಾಮಸಮಾಜದ ಮೇಲೆ ಬೀರುವ ಪರಿಣಾಮಗಳನ್ನು ಎಳೆ ಎಳೆಯಾಗಿ, ಅಷ್ಟೇ ವೈನೋದಿಕ ನೆಲೆಯಲ್ಲಿ ತಿಳಿಹೇಳುವ, ಕೃತಿಯ ಕೊನೆಯಲ್ಲಿ ಗಂಭೀರ ಸತ್ಯಗಳನ್ನು ಅನಾವರಣ ಮಾಡುವ ಈ ಅನನ್ಯ ಬರಹಗಾರ ಕನ್ನಡನಾಡಿನ ಹೆಮ್ಮೆಯ ಪುತ್ರ.

ತಮ್ಮ ಕತೆ ಕಾದಂಬರಿಗಳಲ್ಲಿ ನಾಗರಿಕತೆಯ ಸೋಂಕು ನಮ್ಮ ಹಳ್ಳಿಗಳನ್ನು ವ್ಯಾಪಿಸುತ್ತಿರುವ ಚಿತ್ರಣವನ್ನು ಶ್ರೀ ಕೃಷ್ಣ ಆಲನಹಳ್ಳಿ ತಂದರೆ, ತೇಜಸ್ವಿಯವರು ಅದಕ್ಕಿಂತ ಮುಂದೆ ಹೋಗುವವರು. ಆಲನಹಳ್ಳಿಯವರ ಬರಹದ ಮುಂದುವರೆದ ಮುಖ ಇವರದು. ಅಷ್ಟು ಮಾತ್ರವಲ್ಲ, ಈ ಗ್ರಾಮೀಣಾನುಭವವು ಬದುಕಿನ ನೆಲೆಯಲ್ಲಿ ವಹಿಸುವ ಪಾತ್ರ, ಆ ಮುಖೇನ ಬದುಕಿನ ನೆಮ್ಮದಿ, ಸಾರ್ಥಕತೆಗಳು ರೂಪುಗೊಳ್ಳುವ ಬಗೆ - ಇವನ್ನೂ ತೆರೆದು ತೋರುವವರು. ಇವರ ಕತೆಗಳಲ್ಲಿ ವ್ಯಕ್ತಿಪ್ರಜ್ಞೆಯ ಮೂಲಕ ಅನಾವರಣ ವಾಗುವ ಸಾಮಾಜಿಕ ಸತ್ಯಗಳು ಚಿತ್ರಿತಗೊಳ್ಳುತ್ತವೆ. ಕಾದಂಬರಿಗಳಲ್ಲಿ, ವ್ಯಕ್ತ ಮತ್ತು ಅವ್ಯಕ್ತ ಸಂಬಂಧಗಳಿಂದ ರೂಪುಗೊಳ್ಳುವ ವ್ಯಕ್ತಿಪ್ರಜ್ಞೆಯು ಅಂತಿಮವಾಗಿ ಒಂದು ಜೀವನದರ್ಶನವಾಗಿ, ಒಟ್ಟು ಬದುಕಿನ ಸಂಘರ್ಷಗಳ ನೆಲೆಯಲ್ಲಿ ಪ್ರತಿಬಿಂಬಿತವಾಗುವ ಜೀವಧ್ವನಿಯಾಗಿ ಕಾಣಿಸಿಕೊಳ್ಳುವುದು.

ಯಾವೊಂದು ಪಾತ್ರವನ್ನೂ ಹಗುರವಾಗಿ ನೋಡದ ತೇಜಸ್ವಿಯವರು ಎಲ್ಲಾ ಪಾತ್ರಗಳಿಗೆ ನ್ಯಾಯ ಒದಗಿಸಿಕೊಡುವವರು. ಇವರ ರಚನೆಗಳಲ್ಲಿ ಯಾವೊಂದು ಪಾತ್ರ, ಯಾವೊಂದು ಸಾಲು ಕೂಡ ಅನಗತ್ಯವಾಗಿ ಬರುವುದಿಲ್ಲ. ಮೇಲ್ನೋಟಕ್ಕೆ ಸಂಬಂಧಪಡದ ಹಲವು ಭಿನ್ನ ಸಂಗತಿಗಳು ಹೇಗೆ ಬದುಕಿನ ನೆಲೆಯಲ್ಲಿ – ಮನುಷ್ಯ ಮತ್ತು ಸಮಾಜದ ಇರುವಿಕೆಯಲ್ಲಿ – ಅವಿನಾಭಾವ ಸಂಬಂಧ ಹೊಂದಿರುತ್ತವೆಂಬ ವಾಸ್ತವ ಸತ್ಯಗಳನ್ನು ಇವರು ಅತ್ಯಂತ ಕಲಾತ್ಮಕವಾಗಿ ಪ್ರತಿಪಾದಿಸುವರು.

ನವ್ಯದ ಪ್ರಖರ ಸ್ಥಿತಿಯಲ್ಲಿ ತೇಜಸ್ವಿಯವರು ತಮ್ಮ ಬರವಣಿಗೆಯನ್ನು ಆರಂಭಿಸಿದರಾದರೂ ಅಲ್ಲಿಯೂ ಅವರು ಗಟ್ಟಿಯಾದುದನ್ನೇ ಕೊಟ್ಟರು. ಆದರೆ ಬಲುಬೇಗ ನವ್ಯದ ಜೀವವಿರೋಧಿ ಆಶಯವನ್ನು ಕಂಡುಕೊಂಡರು. ತಮ್ಮ ಹೊಸ ನೋಟಕ್ಕೆ ಹೊಸ ಶೈಲಿಯೇ ಬೇಕೆಂಬುದನ್ನು ತಿಳಿದು, ಅದರಂತೆ ಬರಹದ ಕೃಷಿಯನ್ನು ವಿಭಿನ್ನವಾಗಿ ಅಷ್ಟೇ ಸುಲಲಿತವಾಗಿ ಮುಂದುವರಿಸಿದರು.

'ಪರಿಸರ'ವನ್ನು ಹೊಸ ರೀತಿಯಲ್ಲಿ ವಿಶ್ಲೇಷಿಸುವ ತೇಜಸ್ವಿಯವರು ಸೃಜನಶೀಲತೆಯನ್ನು ಅದಕ್ಕಾಗಿ ಅನನ್ಯವೆಂಬಂತೆ ಬಳಸಿಕೊಳ್ಳುತ್ತಿದ್ದಾರೆ. ಪರಿಸರವೆಂಬುದು ಮನುಷ್ಯ ಬದುಕಿನ ಒಂದಂಗವಲ್ಲ; ಅದೇ ಮನುಷ್ಯ ಬದುಕು ಎಂಬ, ಪರಿಸರದ ಕೂಸಾಗಿ ಮಾನವ ಹೇಗೆ ತನ್ನ ಬಾಳ್ವೆಯನ್ನು ಹದಮಾಡಿಕೊಳ್ಳಬೇಕೆಂಬ, ನಿಸರ್ಗದ ವಿಶ್ವಕೋಶದಲ್ಲಿ ಮನುಷ್ಯನೆಂಬುವನು ಒಂದು ಪುಟದ ಒಂದಕ್ಷರವಷ್ಟೇ ಎಂಬ ವಿನಯ ಸತ್ಯವನ್ನು ಅವರು ಕಥನಾತ್ಮಕವಾಗಿ ಅಭಿವ್ಯಕ್ತಿಸುವರು. ಅವರ ಒಂದೊಂದು ಕಾದಂಬರಿಯೂ ಹಿಂದಿನದರ ಮುಂದುವರಿದ ರೂಪ. ಪರಿಸರದ ಕಥೆಗಳಾಗಲಿ, ಮಿಸ್ಸಿಂಗ್ ಲಿಂಕ್ ಆಗಲಿ, ಮಿಲೆನಿಯಮ್ ಶ್ರೇಣಿಯ ಪುಸ್ತಕಗಳಾಗಲೀ ಎಲ್ಲವೂ ಅವರ ವೈಚಾರಿಕತೆ ಮತ್ತು ಸೃಜನಶೀಲತೆಯ ನಡುವಣ ಹದವಾದ ಹೊಂದಾಣಿಕೆ ಎಂದೇ ನನಗೆ ತೋರುವುದು. ಕಿರಗೂರಿನ ಗಯ್ಯಾಳಿಗಳು ಕಥಾಸಂಕಲನವಂತೂ ಸ್ತ್ರೀವಾದಿ ನೆಲೆಯ ಸಾಹಿತ್ಯಕ್ಕೆ ಬರೆದ ಹೊಸ ಭಾಷ್ಯ; ಹಳ್ಳಿಯ ಹೆಣ್ಣು ಮಕ್ಕಳ ಅದಮ್ಯ ಶಕ್ತಿಯ ದ್ಯೋತಕ.

ಕಲೆ, ಸಾಹಿತ್ಯ, ಮಾನವಶಾಸ್ತ್ರ, ಮನೋವಿಜ್ಞಾನ, ಪರಿಸರ, ಸ್ತ್ರೀವಾದ, ಜಾಗತಿಕ ವಿಸ್ಮಯಗಳು, ಚರಿತ್ರೆಯ ಅವ್ಯಕ್ತ ಹಾಗೂ ಅನಭಿವ್ಯಕ್ತ ಆಲೋಚನಾ ಸಂಗತಿಗಳು, ನಿಸರ್ಗ ಮತ್ತು ಮನುಷ್ಯನ ನಡುವಿನ ಸಂಬಂಧ ವಿನ್ಯಾಸ – ಹೀಗೆ ಹಲವು ಹತ್ತು ಅಂತರಶಿಸ್ತುಗಳ ನಡುವಿನ ಗಡಿರೇಖೆಗಳನ್ನು ದಾಟಿ ಎಲ್ಲವನ್ನೂ ಕಲೆಯಾಗಿ, ಸಾಹಿತ್ಯವಾಗಿ ಜನಮಾನಸವು ಸುಲಭವಾಗಿ ಓದಿ ಅರ್ಥೈಸಿಕೊಂಡು, ಬದುಕಿನಲ್ಲಿ ಅಳವಡಿಸಿಕೊಳ್ಳಲು ಕಾತುರರಾಗುವಂತೆ ಒಂದು ಪರಿಪೂರ್ಣ ಕಲಾಕೃತಿಯಾಗಿ ಸುವ ತೇಜಸ್ವಿಯವರ ಅದ್ಭುತ ಸೃಜನಾತ್ಮಕ ಶಕ್ತಿಯು ನಮ್ಮೊಳಗಿನ ನಮ್ಮನ್ನು ಎಚ್ಚರಿಸುವ, ಜಾಗೃತಗೊಳಿಸುವ ಒಂದು ಬಹು ಸೂಕ್ಷ್ಮ ಹತಾರ ಎಂದೇ ನನ್ನ ಭಾವನೆ.

ಲಂಕೇಶ್, ಅನಂತಮೂರ್ತಿ ಮೊದಲಾದ ಹೊಸ ಗನ್ನಡ ಸೃಜನಶೀಲ ಲೇಖಕರೊಂದಿಗೆ ತೇಜಸ್ವಿಯವರನ್ನೂ ಇಟ್ಟು ನೋಡುವ ಪ್ರಕ್ರಿಯೆ ಸಹ ನಡೆದಿಲ್ಲ. ಈ ಮೂವರು ಪ್ರತಿಭಾವಂತರ ಆಲೋಚನೆಗಳಲ್ಲಿರುವ ಸಾಮ್ಯ-ವೈಷಮ್ಯ ಗಳನ್ನು ಒರೆಗೆ ಹಚ್ಚುವ ತೌಲನಿಕ ಅಧ್ಯಯನ ಸಹ ನಡೆಯಬೇಕಿದೆ. ಲಂಕೇಶ್ ಮತ್ತು ಅನಂತಮೂರ್ತಿಯವರಿ ಗಿಂತ ಭಿನ್ನವಾಗಿ ಆಲೋಚಿಸುವ, ವಿಭಿನ್ನವಾದ ಆದರೆ ಮಾನವೀಯವಾಗುವ ಕಲೆಯನ್ನು ಅರಳಿಸುವ ತೇಜಸ್ವಿ ಯವರು, ಶಿವರಾಮ ಕಾರಂತರು ಹೇಳುವಂತೆ 'ಕೇವಲ ಮನುಷ್ಯ'ನಾಗಿ ಜನಜೀವನಕ್ಕೆ, ತನ್ನ ಪೀಳಿಗೆಗೆ, ಕಾಲಾತೀತ ನಿಸರ್ಗಕ್ಕೆ ಸ್ಪಂದಿಸುವರು. ಇದೇ ಅವರ ವಿಶಿಷ್ಟತೆ.

ತೇಜಸ್ವಿಯವರು ಹೀಗೆಯೇ ಇನ್ನೂ ಹಲವು ರೋಚಕ ವಾದ ಅಷ್ಟೇ ಅದ್ಭುತವಾದ ಕತೆಗಾರಿಕೆಯನ್ನು ಮೆರೆಯ ಲೆಂದು ಎಲ್ಲ ಅಭಿಮಾನಿಗಳ ಪರವಾಗಿ ಕೇಳಿಕೊಳ್ಳೋಣ; ಅವರಿಗೆ ಎಲ್ಲ ಓದುಗ ವರ್ಗದ ಶುಭಾಶಯಗಳು.


**ಡಾ॥ ಎಚ್. ಎನ್. ಮಂಜುರಾಜ್**
ಕನ್ನಡ ಅಧ್ಯಾಪಕ, ಸರ್ಕಾರಿ ಪದವಿ ಕಾಲೇಜು
ಕೃಷ್ಣರಾಜನಗರ


## ಅನುಭವ ಮತ್ತು ಕವಿತೆ

ನೆಲದೊಳಗಿಂದೆದ್ದ ಇರುವೆ
ರಾತ್ರೋ-ರಾತ್ರಿ
ಪಡಸಾಲೆಯಲಿ ಮಲಗಿದ್ದವರ
ನಡುವೆ ತೂರಿ
ಅಡಿಗೆಮನೆಯ ಸಕ್ಕರೆ ಡಬ್ಬ
ವಶಪಡಿಸಿಕೊಂಡವು.

ಈ ಪಾಟಿ ದೊಡ್ಡ ನೆಲದಲ್ಲಿ
ಎಷ್ಟು ಕೋಟಿ ಕಿಂಡಿಗಳಿವೆ ?
ಹೇಗೆ ಸಿಕ್ಕಿತು ಇವಕ್ಕೆ ಈ ದಾರಿ ?
ಸೂಕ್ಷ್ಮದರ್ಶಕ ಯಂತ್ರ ಇದ್ದಿದ್ದರೆ
ಇವಕ್ಕೆ ಕಣ್ಣಿದೆಯೋ, ಇಲ್ಲವೋ
ನೋಡಬಹುದಿತ್ತು.
ಟಪ-ಟಪ ಹನಿಗಳೇಟು
ಬಿದ್ದ ಕೂಡಲೇ...
ಮಣ್ಣ ಕೂದಲ ಗುಹೆಗಳು
ಬಿಡುವಿಲ್ಲದ ಕಾಲುಗಳನ್ನು
ಕರೆದುಬಿಡುತ್ತವೆ.

ಇರುವೆಗಳಿಗೆ ಕೇಳಿದೆ
ನೆಲದೊಳಗೆ ಬೆಂಕಿಯಿದೆಯೆನ್ನುತ್ತಾರೆ
ಅಲ್ಲಿ ನೀವು ಹೇಗೆ ಉಸಿರಾಡುತ್ತಿದ್ದಿರಿ.. ?
ಕವಿತೆ ಕೇಳಿಸಿಕೊಂಡು ನಕ್ಕುಬಿಟ್ಟಿತು.



ಸಿ. ವಿ. ಶೇಷಾದ್ರಿ,
ಹೊಳವನಹಳ್ಳಿ.

# ವಿಶ್ವವಿದ್ಯಾಲಯಗಳಲ್ಲಿ ಜ್ಯೋತಿಷಿಗಳು !

■ ರುಕ್ಮಿಣಿಮಾಲಾ

"ಸ್ವಾಮಿ, ಸ್ವಾಮಿ" ಎಂದು ಜೋರಾಗಿ ಕರೆಯುತ್ತ ಪರಮೇಶ್ವರ ಉರುಫ್ ಪರಮುನ ಮನೆ ಬಾಗಿಲು ತಟ್ಟಿದರೊಬ್ಬರು.

ಪಾರು ಯಾನೆ ಪಾರ್ವತಿ ಕಿಟಕಿಯಲ್ಲಿ ಇಣುಕಿ ನೋಡಿ, ಪರಿಚಿತ ಮುಖವಲ್ಲ ಎಂದರಿವಾದೊಡನೆ ಬಾಗಿಲು ತೆರೆಯದೆಯೆ "ಯಾರು ಬೇಕಾಗಿತ್ತು?" ಎಂಬ ಪ್ರಶ್ನೆ ಹಾಕಿದಳು.

"ಅದು, ಜ್ಯೋತಿಷಿಗಳು...."

ಜ್ಯೋತಿಷಿ ಎಂಬ ಮಾತು ಕೇಳಿ ಕೆಂಡಾಮಂಡಲ ಕೋಪಗೊಂಡ ಪಾರು ಅವರಿಗೆ ಮುಂದೆ ಮಾತಾಡಲು ಅವಕಾಶವೀಯದೆ "ಈ ಮನೆಯಲ್ಲಿ ಯಾರೂ ಜ್ಯೋತಿಷಿಗಳಿಲ್ಲ. ನಿಮಗೆ ವಿಳಾಸ ತಪ್ಪಿರಬಹುದು" ಎಂದಳು ಖಾರವಾಗಿ.

ಅದೇ ಸಮಯಕ್ಕೆ ಸರಿಯಾಗಿ ವಾಯುವಿಹಾರಕ್ಕೆ ತೆರಳಿದ ಪರಮುನ ಆಗಮನವಾಯಿತು ಅಲ್ಲಿ. "ಯಾರು ಬೇಕು ಸ್ವಾಮಿ? ನನ್ನನ್ನು ನೋಡಲು ಬಂದಿರಾ? ಬನ್ನಿ ಒಳಗೆ ಕೂತು ಮಾತಾಡೋಣ. ಇದೇನು ಪಾರು ನೀನು, ಬಾಗಿಲೂ ತೆರೆಯದೆ, ಅವರನ್ನು ಒಳಗೂ ಕರೆಯದೆ ಹೀಗೆ ಹೊರಗೇ ನಿಲ್ಲಿಸಿದ್ದೀಯಲ್ಲ? ಬಾಗಿಲು ತೆರೆ ಬೇಗ."

ಆಯಿತು. ಈ ಆಸಾಮಿಗೆ ಮಾತಾಡಲು ಒಬ್ಬ ಬಕರಾ ಸಿಕ್ಕಿದ. ಇನ್ನು ಅವನ ಪಾಡು ಗೋವಿಂದ. ಪರಮು ಕೆಲಸದಿಂದ ನಿವೃತ್ತಿಗೊಂಡನಂತರ ಹೀಗೆ ಮನೆಗೆ ಯಾರೇ ಬರಲಿ – ಪರಿಚಿತರೇ ಆಗಬೇಕೆಂದಿಲ್ಲ – ಅವರೊಡನೆ ಗಂಟೆಗಟ್ಟಲೆ ಮಾತಾಡುತ್ತ ಕುಳಿತುಬಿಡುತ್ತಾರೆ. ಪಾರು ಗೊಣಗುಟ್ಟುತ್ತ ಬಾಗಿಲು ತೆರೆದು ಒಳನಡೆದಳು.

"ಹೀಗೆ ಬನ್ನಿ. ಕುಳಿತುಕೊಳ್ಳಿ. ವಿದ್ಯುತ್ ಪಂಕ ಹಾಕುತ್ತೇನೆ. ಬಹಳ ಸೆಖೆ ಈಗ" ಎಂದು ಅವರಿಗೆ ರಾಜೋಪಚಾರ ನೀಡಿ ಪರಮು ಆ ಅಪರಿಚಿತರನ್ನು ಒಳಗೆ ಬರಮಾಡಿದ.

"ನೋಡಿ ಸ್ವಾಮಿ, ಅಂದ ಹಾಗೆ ನಿಮ್ಮ ಹೆಸರು ಗೊತ್ತಾಗಲಿಲ್ಲ" ಎಂದು ಮಾತಿಗೆ ಶುರುಹಚ್ಚಿದ ಪರಮು.

"ನನ್ಹೆಸರು ಸೋಮಪ್ಪ. ಇಲ್ಲೇ ಕೆಂಚಳ್ಳಿಯಲ್ಲಿದ್ದೀನಿ. ಭಾರೀ ಬಂಗಲೆ ಕಟ್ಟಿಸಿದ್ದೀನಿ. ೨೦ ಎಕ್ರೆ ಹೊಲ ಇದೆ. ದುಡ್ಡು ಕಾಸು ಚೆನ್ನಾಗಿ ಮಾಡಿಕೊಂಡಿವ್ನಿ. ಬಡ್ಡಿ ವ್ಯಾಪಾರ ಮಾಡುತ್ತಿದ್ದೇನೆ" ಇತ್ಯಾದಿ ತಮ್ಮ ಪ್ರವರ ಹೇಳಿಕೊಂಡರು ಹೆಮ್ಮೆಯಿಂದ.

"ಸೋಮಪ್ಪನವರೇ, ಸಂಜೆ ಹೊತ್ತಲ್ಲಿ ಉದ್ದಕ್ಕೂ ೪ ಕಿ.ಮೀ. ದೂರ ನಡೆದಾಡಿ ಗಾಳಿ ಸೇವನೆ (ಮಲಿನಗಾಳಿ) ಮಾಡಬೇಕು. ಇದು ವೈದ್ಯರ ದೃಷ್ಟಿಯಿಂದ ಬಹಳ ಒಳ್ಳೆಯದು. ಆದ್ದರಿಂದ ನಾನು ತಪ್ಪದೆ ಗಾಳಿ ಸೇವನೆಗೆ ಹೋಗುತ್ತೇನೆ."

"ವೈದ್ಯರ ದೃಷ್ಟಿಯಿಂದ ಒಳ್ಳೆಯದು ಎಂದಿರಲ್ಲ, ಅದೇಗೆ ಸ್ವಾಮಿ?" ಎಂದರು ಸೋಮಪ್ಪ ಆಶ್ಚರ್ಯದಿಂದ, ಪರಮುನ ಒಗಟಿನ ಮಾತು ಅರ್ಥವಾಗದೆ.

"ಗಾಳಿ ಸೇವನೆಗೆಂದು ನಾನು ಹೊರಗೆ ಹೋಗುತ್ತೇನೆ. ಈಗ ಗಾಳಿ ಶುದ್ಧವಾಗಿದೆಯೇ? ಇಲ್ಲ. ವಾಯುಮಾಲಿನ್ಯದೊಂದಿಗೆ ಶಬ್ದಮಾಲಿನ್ಯವೂ ಹೆಚ್ಚಾಗಿದೆ. ಮಾಲಿನ್ಯಗೊಂಡ ವಾಯು ಸೇವನೆ ಮಾಡಿ ನಾವು ಕಾಯಿಲೆ ಬರಿಸಿಕೊಳ್ಳುತ್ತೇವೆ. ಶೀತ, ಜ್ವರ, ಎಂದು ಔಷಧೋಪಚಾರಕ್ಕಾಗಿ ವೈದ್ಯರಲ್ಲಿಗೆ ಧಾವಿಸುತ್ತೇವೆ. ಇದರಿಂದ ವೈದ್ಯರಿಗೆ ಲಾಭವಲ್ಲವೆ ನೀವೇ ಹೇಳಿ."



ಪರಮುನ ವಿವರಣೆ ಕೇಳಿದ ಸೋಮಪ್ಪ ಸಂತೋಷಗೊಂಡು "ನೀವು ಬಹಳ ಚೆನ್ನಾಗಿ ಮಾತಾಡುತ್ತೀರಿ" ಎಂದು ಹೊಗಳಿದ.

ಹೊಗಳಿಕೆ ಕೇಳಿ ಉಬ್ಬಿದ ಪರಮು ಮೀಸೆ ಮೇಲೆ ಕೈಯಾಡಿಸುತ್ತ "ಈ ಮಾತು ಉಂಟಲ್ಲ ಸೋಮಪ್ಪನವರೆ, ಹಾಗೆಲ್ಲ ಸುಲಭದಲ್ಲಿ ಬರುವುದಿಲ್ಲ. ನಾವು ದಿನಾ ಮಾತಾಡುತ್ತ ಇರಬೇಕು. ಮಾತಾಡಲು ಯಾರೂ ಸಿಗುವುದಿಲ್ಲವೆಂದು ಮಾತಾಡದೆ ಕುಳಿತಿರಬಾರದು. ಕಲ್ಲನ್ನಾದರೂ ಮಾತಾಡಿಸುವ ಸ್ವಭಾವ ಬೆಳೆಸಿಕೊಳ್ಳಬೇಕು. ಸಾಹಿತ್ಯ ಓದಬೇಕು. ಆಗ ಮಾತು ನಿರರ್ಗಳವಾಗಿ ಬರುತ್ತದೆ. ನನಗೆ ಮಾತಾಡಲು ನಿತ್ಯ ನಿಮ್ಮಂಥವರು ಯಾರಾದರೂ ಸಿಗುತ್ತಾರೆ" ಎಂದು ಮಾತಿನ ಬಗ್ಗೆ ಉಪನ್ಯಾಸವನ್ನೇ ಕೊಟ್ಟ ಪರಮು. ಆದರೆ ಇದು ಸೋಮಪ್ಪನಿಗೆ ಎಷ್ಟು ಅರ್ಥವಾಯಿತೊ ಗೊತ್ತಿಲ್ಲ !

ಪರಮುನ ಮಾತಿನ ಶೈಲಿಯನ್ನು ಈ ಸೋಮಪ್ಪ ವಿಷಯ ಗೊತ್ತಿಲ್ಲದೆ ಹೊಗಳಿದ. ಇನ್ನು ಪರಮುನ ಮಾತಿನ ದಾಳಿಯಿಂದ ಅವನನ್ನು ಹೇಗೆ ಕಾಪಾಡುವುದು ಎಂದು ಪಾರು ಚಿಂತಿಸಿದಳು.

"ನಿಮ್ಮ ಮನೆ ಪಕ್ಕದಲ್ಲೆ ಅಪ್ಪಣ್ಣ ಜ್ಯೋತಿಷಿಗಳೆಂಬುವರು ಇದ್ದಾರಲ್ಲ. ಅವರನ್ನು ಭೇಟಿಯಾಗಬೇಕೆಂದು ನಾನು ೪ ದಿನದಿಂದ ಇಲ್ಲಿ ಬರುತ್ತಿದ್ದೇನೆ. ಆದರೆ ಅವರು ಕೋಣೆ ಬಾಗಿಲು ತೆರೆಯುವುದೇ ಗೊತ್ತಾಗುತ್ತಿಲ್ಲ. ಭೇಟಿಯ ಸಮಯ ಬದಲಾವಣೆ ಮಾಡಿದ್ದಾರ ಹೇಗೆ? ಈ ವಿಷಯ ನಿಮಗೆ ಗೊತ್ತೇ ಇರುತ್ತದೆ ಎಂದು ಇಂದು ನಿಮ್ಮ ಮನೆಗೆ ಬಂದೆ. ಅಪ್ಪಣ್ಣ ಜ್ಯೋತಿಷಿಗಳ ಬಳಿ ಹಿಂದೊಮ್ಮೆ ಯಾವುದೋ ತಾಪತ್ರಯಕ್ಕೆ ಪರಿಹಾರ ಕೇಳುವ ಸಲುವಾಗಿ ಬಂದಿದ್ದೆ. ಅವರು ತಿಳಿಸಿದಂತೆ ಮಾಡಿದೆ ನೋಡಿ. ಸಮಸ್ಯೆ ಬಗೆಹರಿಯಿತು. ಅವರು ನುಡಿದದ್ದೆಲ್ಲ ನಿಜವಾಗುತ್ತದೆ. ಎಂಥ ಕರಾರ್‌ವಾಕ್ಕಾದ ಭವಿಷ್ಯ ನುಡಿಯುತ್ತಾರೆ ಗೊತ್ತೇ ಸ್ವಾಮಿ ನಿಮಗೆ? ನಿಮಗೆ ಗೊತ್ತಿಲ್ಲದೆ ಏನು? ನಿಮ್ಮ ಮನೆ ಬಳಿಯಲ್ಲೆ ಅವರು ಇದ್ದಾರಲ್ಲ," ಜ್ಯೋತಿಷಿಗಳನ್ನು ಹೊಗಳಿದ ಸೋಮಪ್ಪ.

"ಅಪ್ಪಣ್ಣ ಆ ಕೋಣೆ ಖಾಲಿ ಮಾಡಿ ವಾರ ಆಗಿರಬಹುದು. ಈ ಜ್ಯೋತಿಷಿಗಳು ಇದ್ದಾರಲ್ಲ, ನಿಮ್ಮೊಂದಿಗೆ ಉಪಾಯವಾಗಿ ನಿಮಗೆ ತಿಳಿಯದಂತೆ ನಿಮ್ಮ ಪ್ರವರ ಎಲ್ಲ ಕೇಳಿ ತಿಳಿದುಕೊಳ್ಳುತ್ತಾರೆ. ಆನಂತರ ಒಂದೊಂದಾಗಿ ಪ್ರಶ್ನೆ ಕೇಳುತ್ತ ಅದಕ್ಕೆ ಸರಿಯಾಗಿ ಉತ್ತರಿಸುತ್ತ ಹೋಗುತ್ತಾರೆ. ಆಗ ನೀವು 'ಓ! ಇವರು ಹೇಳುವುದೆಲ್ಲ ಎಷ್ಟು ನಿಜ. ನಮ್ಮಲ್ಲಿ ಹಾಗೆ ನಡೆದಿರುವುದನ್ನು

ಪ್ರತ್ಯಕ್ಷ ನೋಡಿದಂತೆ ಹೇಳುತ್ತಾರಲ್ಲ' ಎಂದು ವಿಸ್ಮಯದಿಂದ ತಲೆದೂಗುತ್ತೀರಿ. ಅದು ಒಂದು ಕಸರತ್ತು ಅಷ್ಟೆ ಸ್ವಾಮಿ. ಅವರು ಹೇಳುವುದು ಕೆಲವು ಕಾಕತಾಳೀಯವಾಗಿ ನಿಜವಾಗಿರುತ್ತವೆ.'' ಜ್ಯೋತಿಷ್ಯದಲ್ಲಿ ನಂಬಿಕೆ ಇರದ ಪರಮು ನುಡಿದ.

ಜ್ಯೋತಿಷ್ಯವನ್ನು ಅಸಡ್ಡೆಯಿಂದ ನೋಡಿದ ಪರಮು ಬಗ್ಗೆ ಅಸಮಾಧಾನಗೊಂಡ ಸೋಮಪ್ಪ ''ಏನೋ ಸ್ವಾಮಿ, ನಮಗಂತೂ ಇದರಿಂದ ಬಹಳ ಒಳ್ಳೆಯದಾಗಿದೆ. ಅವರು ನಮ್ಮ ಹಸ್ತ ನೋಡಿ ಇದ್ದದ್ದನ್ನು ಇದ್ದಂಗೇ ಹೇಳುತ್ತಾರೆ. ಅದು ಎಲ್ಲರಿಗೂ ಸಾಧ್ಯವಿಲ್ಲ. ಎಷ್ಟೆಷ್ಟು ದೊಡ್ಡ ಮನುಷ್ಯರೆಲ್ಲ ಅವರ ಬಳಿ ಭವಿಷ್ಯ ಕೇಳಲು ಬರುತ್ತಾರೆ ಗೊತ್ತ ನಿಮಗೆ? ನಮ್ಮ ಅಪ್ಪಣ್ಣ ಜ್ಯೋತಿಷಿಗಳೆಂದರೆ ಏನು ತಿಳಿದಿದ್ದೀರಿ ನೀವು?'' ಎಂದು ಕೇಳಿದ.

''ಸರಿ ಸೋಮಪ್ಪನವರೆ, ನಮ್ಮಲ್ಲಿ ವಾದ ಏಕೆ? ನಿಮ್ಮ ನಂಬಿಕೆಯನ್ನು ನಾನೇಕೆ ಹಳಿಯಲಿ?'' ಮಾತಾಡಲು ಜನ ಸಿಕ್ಕಿದರೆ ಸಾಕು. ಇವರ ನಂಬಿಕೆ ಬಗ್ಗೆ ವಾದ ಮಾಡಿ ನಿಷ್ಠುರ ಕಟ್ಟಿಕೊಂಡರೆ ಕಷ್ಟ ಎಂದು ಆಲೋಚಿಸಿ ರಾಜಿಗೆ ಬಂದ ಪರಮು.

''ಇಲ್ಲಿಂದ ೪ ಬೀದಿ ಆಚೆಗೆ ಕುಪ್ಪಣ್ಣ ಎಂಬ ಜ್ಯೋತಿಷಿಗಳು ಇದ್ದರು. ಅವರು ಬಾಗಿಲು ತೆರೆದಿಲ್ಲ. ಇದೇನು ಒಟ್ಟಿಗೆ ಎಲ್ಲ ಜ್ಯೋತಿಷಿಗಳು ಬಾಗಿಲು ತೆರೆದಿಲ್ಲ! ಅವರಿಗೆಲ್ಲ ಏನಾಯಿತು? ನಮ್ಮ ಮನೆಯಲ್ಲಿ ಇತ್ತೀಚೆಗೆ ಎಲ್ಲ ಕಷ್ಟಗಳೇ ಬರುತ್ತಿವೆ. ಯಾರೂ ನೆಮ್ಮದಿಯಿಂದಿಲ್ಲ. ನನ್ನ ದಾಯಾದಿ ಭೂಪಣ್ಣ ಏನಾದರೂ ಮಾಟ ಮಂತ್ರ ಮಾಡಿಸಿದ್ದಾನೇನೋ ಎಂಬ ಸಂದೇಹ ಬಂದಿದೆ ನನಗೆ. ನಮ್ಮನ್ನು ಕಂಡರೆ ಅವನಿಗೆ ಹೊಟ್ಟೆ ಉರಿ ಉಂಟು. ಅದನ್ನು ನಿವಾರಿಸಲು ಶಕ್ತರಾದವರು ಅಪ್ಪಣ್ಣ ಅಥವಾ ಕುಪ್ಪಣ್ಣನಂಥ ಜ್ಯೋತಿಷಿಗಳು. ಆದರೆ ಇವರ ಭೇಟಿಯೇ ಆಗುತ್ತಿಲ್ಲ. ನನಗೆ ಬಹಳ ಚಿಂತೆ ಆಗಿದೆ. ನಮಗೆ ದುಡ್ಡಿಗೆ ಏನೂ ತೊಂದರೆ ಇಲ್ಲ. ನಮ್ಮ ತೊಂದ್ರೆಗಳನ್ನು ನಿವಾರಿಸಿದರೆ ಸಾಕು. ಅವರಿಗೆ ಎಷ್ಟು ಬೇಕಾದರೂ ದುಡ್ಡು ಕೊಡಬಲ್ಲೆ,'' ಸೋಮಣ್ಣ ವ್ಯಾಕುಲದಿಂದ ನುಡಿದ.

''ವಿಶ್ವವಿದ್ಯಾಲಯಗಳಲ್ಲಿ ಇನ್ನು ಮುಂದೆ ಜ್ಯೋತಿಷ್ಯ ಶಾಸ್ತ್ರ ಬೋಧಿಸುವ ಸಂಗತಿ ನಿಮಗೆ ಗೊತ್ತಿಲ್ಲ ಅಂತಾಯಿತು. ನೀವು ದಿನಪತ್ರಿಕೆ ಓದುವುದಿಲ್ವೆ?''

''ಅಯ್ಯೋ, ಅದನ್ನು ಓದಲು ನನಗೆಲ್ಲಿ ಸ್ವಾಮಿ ಟೈಮಿದೆ? ಮತ್ತೆ ಅದರಲ್ಲಿ ಏನಿದೆ ಎಂದು ಓದುವುದು? ಇಲ್ಲಿ ಒಬ್ಬರು ಸತ್ತರು, ಅಲ್ಲೊಂದು ಕೊಲೆ, ಅಪಘಾತ ಇತ್ಯಾದಿ ಇರುತ್ತೆ ಅಷ್ಟೆ. ಅವನ್ನೇನು ಓದುವುದು? ಏನು ವಿಷಯ ನೀವೆ ಹೇಳಿ,'' ಎಂದ ಉಡಾಫೆಯಿಂದ ಸೋಮಣ್ಣ.

''ಅಪ್ಪಣ್ಣ ಕುಪ್ಪಣ್ಣರಿಗೆಲ್ಲ ಸರ್ಕಾರಿ ಕೆಲಸ ಸಿಕ್ಕಿದೆ. ಕೈ ತುಂಬ ಸಂಬಳ ಬಂದೀತು. ಅದೂ ಯು. ಜಿ. ಸಿ. ಸ್ಕೇಲ್! ಅದಕ್ಕೇ ಇಲ್ಲಿ ಬಾಗಿಲು ತೆರೆದಿಲ್ಲ. ಇನ್ನು ಮುಂದೆ ನಿಮ್ಮಂಥವರನ್ನು ಕಾಯುತ್ತ ಕೂರುವ ಸಂಭವವೂ ಅವರಿಗಿಲ್ಲ. ಅವರ ಮನೆ ವಿಳಾಸ ಮಾತ್ರ ನನಗೆ ತಿಳಿಯದು'', ವಿಷಯ ವಿವರಿಸಿದ ಪರಮು.

''ಅವರಿಗೆ ಎಲ್ಲಿ ಕೆಲಸ ಸಿಕ್ಕಿರುವುದು? ಅಲ್ಲಿಗೇ ಹೋಗಿ ಕೇಳುತ್ತೇನೆ. ಅಲ್ಲಿ ನಮ್ಮ ಕೈ ನೋಡುತ್ತಾರೆಯೇ?''

''ಅವರಿಗೆ ಕೆಲಸ ಸಿಕ್ಕಿರುವುದು ವಿಶ್ವವಿದ್ಯಾಲಯಗಳಲ್ಲಿ. ಅಲ್ಲಿ ನೀವು ಕೂಡ ಕಾಲೇಜ್ ಸೇರಿ ಜ್ಯೋತಿಷ್ಯ ಕಲಿಯಬಹುದು. ಅನಂತರ ನೀವು ಇನ್ನೊಬ್ಬರ ಭವಿಷ್ಯ ಹೇಳಬಹುದು!''

ಓ! ಸೋಮಪ್ಪನೂ ಮಾತಿನಲ್ಲಿ ಹಿಂದೆ ಬಿದ್ದಿಲ್ಲ. ಸರಿಯಾದ ಜೊತೆ ಇಬ್ಬರದೂ. ಈಗಾಗಲೇ ಮಾತು ಪ್ರಾರಂಭಿಸಿ ಒಂದು ಗಂಟೆ ಮೇಲಾಯಿತು. ಆದರೂ ಇಬ್ಬರ ಮಾತುಕತೆ ನಿಲ್ಲುವ ಸೂಚನೆ ಕಾಣುತ್ತಿಲ್ಲ. ಊಟ ಮಾಡುವ ವೇಳೆಯಾಯಿತು. ಇವರನ್ನು ಹೇಗಾದರೂ ಇಲ್ಲಿಂದ ಸಾಗಹಾಕಬೇಕು ಎಂದು ಯೋಚಿಸಿದ ಪಾರು ಅವರಿಬ್ಬರ ಮಾತುಕತೆಯ ಮಧ್ಯೆ ಪ್ರವೇಶಿಸಿ ''ಸೋಮಣ್ಣನವರೆ, ಅಪ್ಪಣ್ಣ, ಕುಪ್ಪಣ್ಣನಂಥವರು ಮುರಳಿ ಮನೋಹರ ಜೋಶಿ ಬಳಿಗೆ ತೆರಳಿ ತಮ್ಮ ಹಸ್ತ ಅವರಿಗೆ ತೋರಿಸಿದರಂತೆ. ಅವರ ಸಮಸ್ಯೆಗೆ ಪರಿಹಾರ ಸಿಕ್ಕಿತಂತೆ,'' ಎಂದಳು ವಿನೋದದಿಂದ.

''ಹೌದೆ ತಾಯಿ? ನಮ್ಮ ಅಪ್ಪಣ್ಣ, ಕುಪ್ಪಣ್ಣನಂಥವರಿಂದಲೂ ಈಯಪ್ಪ ಉಸಾರು ಅಂದಾಗಾಯಿತು. ಅವರ ಸಮಸ್ಯೆಗಳನ್ನು ಪರಿಹರಿಸಿದ್ದಾರೆಂದರೆ ಭಾರೀ ಜ್ಯೋತಿಷ್ಯ ಕಲಿತವರೇ ಇರಬೇಕು. ಹಾಗಾದರೆ ನಾನೂ ಅವರತಾವ ಹೋಗಿ ನನ್ನ ಹಸ್ತ ಚಾಚುತ್ತೇನೆ. ನನ್ನ ಸಮಸ್ಯೆಯನ್ನೂ ನಿವಾರಿಸಿಯಾರು. ಒಂಚೂರು ಅವರ ವಿಳಾಸ ಹೇಳಿ ತಾಯಿ ನಿಮಗೆ ಪುಣ್ಯ ಬಂದೀತು,'' ಎಂದರು ಆತುರದಿಂದ ಸೋಮಣ್ಣ.

ಪಾರು ಒಡನೆಯೇ ''ನಮಗೆ ಅವರ ವಿಳಾಸ ತಿಳಿಯದು. ಬೇರೆ ಯಾರನ್ನಾದರೂ ಕೇಳಿ ತಿಳಿದು ಆದಷ್ಟು ಬೇಗ ಅವರ ಬಳಿಗೆ ಹೋಗಿ ನಿಮ್ಮ ಕಷ್ಟವನ್ನು ಹೇಳಿಕೊಳ್ಳಿ'' ಎಂದು ಹೇಳಿದಳು. ಪರಮುಗೆ ಈಗ ಮಾತಾಡಲು ಅವಕಾಶ ನೀಡಿದರೆ ಕಷ್ಟ; ಮಾತಾಡಲು ಬಿಟ್ಟರೆ ವಿಷಯ ಎಲ್ಲಿಂದ ಎಲ್ಲಿಗೋ ತಲುಪೀತು ಎಂದು ಚಿಂತಿಸಿ, ಸೋಮಣ್ಣನನ್ನು ಅಲ್ಲಿಂದ ಬೇಗ ತೆರಳುವಂತೆ ಮಾಡುವಲ್ಲಿ ಪಾರು ಯಶಸ್ವಿಯಾದಳು. ಸೋಮಣ್ಣ, ಜೋಶಿಯವರ ವಿಳಾಸ ಕೇಳುತ್ತ ನಿಮ್ಮಲ್ಲಿಗೆ ಬರಬಹುದು. ಅವರಿಗೆ ಸಹಾಯ ಮಾಡುವುದಾದರೆ ವಿಳಾಸ ನೀಡಿ!


**ರುಕ್ಮಿಣಿಮಾಲಾ**
ಮನೆ ಸಂಖ್ಯೆ ೮, ಅತ್ರಿ
ಕಾಮಾಕ್ಷಿ ಆಸ್ಪತ್ರೆ, ರಸ್ತೆ
ಸರಸ್ವತೀಪುರ, ಮೈಸೂರು - ೫೭೦೦೦೯


## ಹಗ್ಗವಿಲ್ಲದ ಕುಣಿಕೆ

ಶಕ್ತಿ ತುಂಬಿದ ಸಾಧ್ಯತೆಯ
ಸ್ವಾಮ್ಯ ಸನ್ನದುದಾರ
ಸರಹದ್ದು ಗೊತ್ತಾಗದ ಶೂರ
ಹಾಡಲೆತ್ನಿಸಿ ಅಳುಕುವನು
ಅಳೆಯಲೆತ್ನಿಸಿ ಮುಗ್ಗರಿಸುವನು
ತಳಮಳದ ದಿಕ್ಕಿಂದ ಹಳವಂಡದಾಟಕೆ
ವರ್ತಮಾನ ಹೆತ್ತ ಸಂದಿಗ್ಧ ಸೆಟೆತ
ಬೆಂದ ಬದುಕಿನ ಭರವಸೆಯ ಚಿಗುರು
ಅಗೋಚರ ಬಲೆಯಲಿ ಹದ್ದು ಮೀರಿದೊದ್ದಾಟ
ಪ್ರತಿಯತ್ನವೂ ಅಪ್ರಯತ್ನದ ಫಲ
ಬೆವರ ಬೆಳೆಗೆ ಬೆಲೆ ಗಾಳಿ ಹಗುರ
ಧ್ವನಿ ಇಲ್ಲ ಗಂಟಲಿಗೆ ಶಬ್ದ ದೂರ-ದೂರ

ಬದುಕಿನ್ನುತ್ತವ ನೋಡಿ ಬೆದರಿ ಬೆಚ್ಚುವನು
ಕುಣಿಕೆ ಕುಣಿಕೆಯಲಿ ತನ್ನದೇ ರುಂಡ !
ಕೋಟಿ ಕಾಮನ ಬಿಲ್ಲು
ಮುಂದಿಡುತ ಕೇಳುತಿವೆ
ಇದಕೇನು ಉತ್ತರ ಅದಕೇನು ಉತ್ತರ ?



ಉತ್ತರಕ್ಕಾಗಿ ದಿಟ್ಟಿಸುವನುತ್ತರಕೆ
ನಮ್ಮ ಉತ್ತರೋತ್ತರಕೆ ಬೇರಿಲ್ಲ ಬುಡವಿಲ್ಲ
ಉತ್ತರ ಕುಮಾರನುತ್ತರ ಪಾರ್ಥನಾಗು

ಹಗ್ಗವಿಲ್ಲದ ಉರುಲಿಂದ
ನೆಲ-ಜಲವನಳೆವ ಪರದೇಶಿ
ಕೊರೆಕೊರೆದು ತೆಗೆಯುವನು
ಅದೇ ಎದೆ ಎದೆಗಳಲಿ ಬೋರು
ಬಸಿದ ಹನಿ ಹನಿ ಬೆವರು
ಕೆಂಟುಕಿಯ ತಣಿಗೆಗೆ ಸುರಿದು
ಬಾಯಿ ಚಪ್ಪರಿಸಿ ಉದ್ಗರಿಸುವನವನು
ಆಹಾ!!
ಯಾವ ಸಮುದ್ರದ ಉಪ್ಪು
ಸಮ ಈ ಬೆವರಿಗೆ?!


ಶಂಕ್ರಯ್ಯಾ ಆರ್. ಘಂಟಿ
ಗುಲಬರ್ಗಾ ವಿಶ್ವವಿದ್ಯಾಲಯ
ಗುಲಬರ್ಗಾ

# ಆಗಸದ ಮೀನುಗಳು



ನಕ್ಷತ್ರ ಪುಂಜಗಳ ಹೆಸರುಗಳನ್ನು ಗಮನಿಸಿದಾಗ ಜಲಚರಗಳ ಅನೇಕ ಹೆಸರುಗಳು ಕಂಡು ಬರುತ್ತವೆ. ಅವುಗಳಲ್ಲಿ ಅತ್ಯಂತ ಸರಳ ಹಾಗೂ ಸಾಮಾನ್ಯ ಎನ್ನಿಸುವುದು ಮೀನ. ಆದರೆ ಈ ರಾಶಿಯ ಜೋಡಿ ಮೀನುಗಳನ್ನು ಹುಡುಕುವುದಂತೂ ಪ್ರಯಾಸವೇ.

ನೆತ್ತಿಯ ಮೇಲೆ ಕಾಣುವ ಪೆಗಸಸ್ ಚೌಕದ ಆಕಾರದ ಸಹಾಯದಿಂದ ಈ ಮೀನುಗಳನ್ನು ಗುರುತಿಸಬಹುದು. ಯಾವುದೇ ಪ್ರಕಾಶಮಾನವಾದ ನಕ್ಷತ್ರವೂ ಇಲ್ಲವಾದ ಕಾರಣ, ಹಿಂದೆ ನಕ್ಷತ್ರಗಳಿಂದ ದಿನಗಳ ಲೆಕ್ಕ ಮಾಡುತ್ತಿದ್ದಾಗ, ಪೆಗಸಸ್(ನಕುಲ)ನ ನಾಲ್ಕು ಮೂಲೆಯ ನಕ್ಷತ್ರಗಳನ್ನೇ ಪೂರ್ವಭಾದ್ರ ಮತ್ತು ಉತ್ತರಭಾದ್ರ ಎಂದು ಕರೆದಿದ್ದರು.

ಅಲ್-ಸೂಫಿ ಎಂಬ (ಪರ್ಷಿಯಾದ) ಖಗೋಳ ವಿಜ್ಞಾನಿ ಈ ಎರಡು ಮೀನುಗಳ ಬಗ್ಗೆ ಪ್ರಚಲಿತವಿದ್ದ ಕಥೆಯನ್ನು ಬರೆದಿಟ್ಟಿದ್ದಾನೆ. ವೀನಸ್ (ಪ್ರೇಮದೇವತೆ) ಹಾಗೂ ಕ್ಯುಪಿಡ್(ಕಾಮದೇವ) ಇಬ್ಬರೂ ಯುಫ್ರಟೀಸ್ ನದಿಯಲ್ಲಿ ಈಜುವಾಗ, ಕತ್ತಲೆಯಲ್ಲಿ ಒಬ್ಬರಿಂದೊಬ್ಬರು ಅಗಲದಂತೆ ಹಗ್ಗದಿಂದ ಬಂಧಿಸಿಕೊಂಡಿದ್ದರಂತೆ. ಈ ಮೀನುಗಳು ಅವನ್ನೇ ಸೂಚಿಸುತ್ತವೆ.

ಕ್ರಿ. ಪೂ. ೭ನೆಯ ಶತಮಾನದಲ್ಲಿ ಗುರು ಮತ್ತು ಶನಿ ಎರಡೂ ಗ್ರಹಗಳು ಮೀನರಾಶಿಯಲ್ಲಿದ್ದವು. ಇದು ಏಸುಕ್ರಿಸ್ತನ ಜನ್ಮವನ್ನು ಸೂಚಿಸುವ ಮುಹೂರ್ತ ಎಂದು ಹಲವರು ನಂಬುತ್ತಾರೆ. ''ಮೀನು'' ಎಂಬ ಪದವನ್ನು ಗ್ರೀಕ್ ಭಾಷೆಯಲ್ಲಿ ಬರೆದರೆ, ಅದು ''ಪುನರುತ್ಥಾನಕ್ಕಾಗಿ ಬಂದ ದೇವ ಪುತ್ರ ಏಸುಕ್ರಿಸ್ತ'' ಎಂಬ ವಾಕ್ಯದ ಪದಗಳ ಮೊದಲ ಅಕ್ಷರಗಳನ್ನು ಸೂಚಿಸುತ್ತದೆ ಎಂದು ಅವರು ತಮ್ಮ ವಾದವನ್ನು ಸಮರ್ಥಿಸಿಕೊಳ್ಳುತ್ತಾರೆ. ಈ ಅಪೂರ್ವ ಸನ್ನಿವೇಶವೇ ಬೆತ್ಲೆಹೇಮ್‌ನ ನಕ್ಷತ್ರ ಎಂದು ವಾದಿಸುವವರೂ ಇದ್ದಾರೆ.

ಏಸುಕ್ರಿಸ್ತನ ಜನ್ಮ ದಿನಾಂಕದ ಬಗ್ಗೆ ದೊಡ್ಡ ಜಿಜ್ಞಾಸೆಯೇ ಇದೆ. ಆದ್ದರಿಂದ ಈ ವಾದವನ್ನು ಇಲ್ಲಿಗೇ ಮೊಟಕು ಮಾಡೋಣ. ಮೀನ ರಾಶಿಯಲ್ಲಿ ಯಾವುದೇ ಸುಂದರ ಆಕಾಶಕಾಯಗಳು – ಅಂದರೆ ಗೆಲಾಕ್ಸಿ, ನೆಬ್ಯುಲಗಳು ಇಲ್ಲ. ವಿಚಿತ್ರವೆಂದರೆ ''ಮೇಷ ರಾಶಿಯ ಪ್ರಥಮ ಬಿಂದು'' ಎಂದು ಕರೆಯಿಸಿಕೊಳ್ಳುವ ಕಾಲ್ಪನಿಕ ಬಿಂದು ಇಲ್ಲಿದೆ. ನಕ್ಷತ್ರ ಸ್ಥಾನ ನಿರ್ದೇಶಕದ ಆರಂಭದ ಬಿಂದು ಇದು. ಇನ್ನೂ ಸರಳವಾಗಿ ಹೇಳಬೇಕೆಂದರೆ ಮಾರ್ಚ್ ೨೧ರಂದು ಸೂರ್ಯನ ಸ್ಥಾನ ಈ ಬಿಂದುವಿನಲ್ಲಿ ಇರುತ್ತದೆ. ತತ್ಪರಿಣಾಮವಾಗಿ ಹಗಲು ರಾತ್ರಿಗಳು ಸಮನಾಗಿರುತ್ತವೆ.



ಡಾ॥ ಬಿ. ಎಸ್. ಶೈಲಜಾ

ರಾತ್ರಿಯ ಆಕಾಶದ ಇತರ ಪ್ರಕಾಶಮಾನ ಪುಂಜಗಳು ಅಸಂಖ್ಯ. ನೆತ್ತಿಯ ಸ್ವಲ್ಪ ಪೂರ್ವಕ್ಕೆ ವೃಷಭ, ಇನ್ನೂ ಮುಂದೆ ಒರೈಯನ್, ಆರಿಗಾ (ವಿಜಯಸಾರಥಿ), ಸಿರಿಯಸ್, ಕನೋಪಸ್‌ಗಳ ಮೂಲಕ ಹಾದು ಹೋಗುವ ಆಕಾಶ ಗಂಗೆ, ಉತ್ತರದಲ್ಲಿ ಕ್ಯಾಸಿಯೋಪಿಯಾ (ಕುಂತಿ), ಪರ್ಸಿಯುಸ್ (ಅರ್ಜುನ), ಆಂಡ್ರೊಮಿಡಾ (ದ್ರೌಪದಿ) – ಹೀಗೆ ಆಕಾಶದುದ್ದಕ್ಕೂ ಪ್ರಕಾಶಮಾನ ಪುಂಜಗಳಿವೆ. ಪಶ್ಚಿಮ ಮಂಕಾಗಿದೆ ಎನಿಸುತ್ತದೆ. ಅಲ್ಲಿ ಕ್ಷೀಣವಾದ ಮಂಗಳ ಗ್ರಹ ಕಾಣುತ್ತದೆ. ಅದು ೧೬ ರಂದು ಚಂದ್ರನ ಸಮೀಪ ಇರುತ್ತದೆ.




ವೃಷಭರಾಶಿ ಯಲ್ಲಿ ಕೆಂಪು ನಕ್ಷತ್ರ ರೋಹಿಣಿಯ ಪಕ್ಕ ಶನಿಗ್ರಹ ತಟಸ್ಥವಾಗಿದೆಯೇನೋ ಅನ್ನಿಸುತ್ತದೆ. ಶನಿಯ ''ಹಿನ್ನಡೆ''ಯ ಮುಕ್ತಾಯ ಇದು. ತಿಂಗಳ ಕೊನೆಯ ಹೊತ್ತಿಗೆ ಶನಿಯ ನೇರ ಚಲನೆ(ಮಿಥುನರಾಶಿಯ ದಿಕ್ಕಿಗೆ) ವ್ಯಕ್ತವಾಗುತ್ತದೆ.

ಸಿರಿಯಸ್‌ಗಿಂತ ಪ್ರಕಾಶಮಾನವಾಗಿ ಕಾಣುವ ಗುರುಗ್ರಹದ ಚಲನೆಯೂ ನಿಧಾನವಾಗಿಬಿಡುತ್ತದೆ. ೨೩ರ ಬೆಳಗಿನ ಝಾವ ಚಂದ್ರ, ಗುರುಗ್ರಹದ ಸಮೀಪವೇ ಕಾಣುತ್ತದೆ. ಸುಮಾರು ೭ಗಂಟೆಯ ಹೊತ್ತಿಗೆ ''ಗುರುಗ್ರಹಣ'' ಉಂಟಾಗುತ್ತದೆ. ನೋಟ ಯುರೋಪಿಯನ್ನರಿಗೆ ಲಭ್ಯ. ''ಶನಿಗ್ರಹಣ''ವೂ ೨೦ರಂದು ನಡೆಯಲಿದ್ದು ಇದರ ನೋಟ ಅಮೆರಿಕನ್ನರಿಗೆ ಲಭ್ಯವಿದೆ.

ಎರಡು ತಿಂಗಳು ಬೆಳಗಿನ ಝಾವ ಕಾಣುತ್ತಿದ್ದ ಶುಕ್ರ, ಈ ತಿಂಗಳು ಸಂಜೆ ಪಶ್ಚಿಮದಲ್ಲಿ ಕಾಣುವುದು. ತಿಂಗಳ ಕೊನೆಯ ಹೊತ್ತಿಗೆ ಸಂಜೆ ಪೂರ್ವದಲ್ಲಿ ಗುರು, ಪಶ್ಚಿಮದಲ್ಲಿ ಶುಕ್ರ, ಪಶ್ಚಿಮದಿಂದ ಸ್ವಲ್ಪ ಎತ್ತರದಲ್ಲಿ ಮಂಗಳ, ನೆತ್ತಿಯ ಸಮೀಪ ಶನಿ – ಹೀಗೆ ನಾಲ್ಕೂ ಗ್ರಹಗಳನ್ನು ಕಾಣಬಹುದು.

ಚಂದ್ರ ಹುಣ್ಣಿಮೆಯಂದು ಮಘ ನಕ್ಷತ್ರದ ಬಳಿ ಕಾಣುವುದು. ಆದ್ದರಿಂದ ಇದು ಮಾಘಮಾಸ. ಅಂದು ಭೂಮಿ-ಚಂದ್ರರ ದೂರ ಕನಿಷ್ಠ : ೩೫೬,೮೯೮ ಕಿ. ಮೀ.ಗಳು – ಆದ್ದರಿಂದ ಇದು ಅತಿ ಪ್ರಕಾಶಮಾನವಾದ ಹುಣ್ಣಿಮೆ ಎನ್ನಬಹುದು. ಅತಿ ''ದೊಡ್ಡ'' ಚಂದ್ರ ಕಾಣುವ ದಿನ ಎಂದೂ ಕರೆಯಬಹುದು. ಆದರೆ ಈ ವ್ಯತ್ಯಾಸಗಳನ್ನು ಬರಿಗಣ್ಣು ಗುರುತಿಸಲಾರದು.

ಜನಸಾಮಾನ್ಯರನ್ನು ನಿರಾಶೆಗೊಳಿಸಿದ ಧೂಮಕೇತು ಲೀನಿಯರ್ ಈಗ ಮಂಕಾಗಿ ಸೂರ್ಯನಿಂದ ದೂರ ಸರಿಯುತ್ತಿದೆ.


ಡಾ॥ ಬಿ. ಎಸ್. ಶೈಲಜಾ
ಜವಾಹರಲಾಲ್ ನೆಹರು ತಾರಾಲಯ
ಹೈಗ್ರೌಂಡ್ಸ್, ಬೆಂಗಳೂರು - ೫೬೦ ೦೦೧

# ಪರಿಹಾರವೂ ಪರಿಹರಿಸದ ಸೀಬರ್ಡ್ ನಿರಾಶ್ರಿತರ ಬವಣೆ

■

**ಸದಾನಂದ ಎಂ. ನಾಯಕ್**

*ಮುರುಕು ಮಂಟಪ*
*ಮುರಿದ ಮನೆತನ*
*ಹರುಕು ಚಪ್ಪಲಿ*
*ಹರಿದ ಜನ-ಮನ*
*ಬಿರುಕು ಬಿಟ್ಟಿಹ*
*ಗೋಡೆ-ಗುಡಿ-ಗುಂಡಾರ-ಒಂದೆ ಗತಿ*

ಬಿರು ಬಿಸಿಲಲ್ಲಿ ಬೇಯುತ್ತಾ ಅಲ್ಲಲ್ಲಿ ಡಾಂಬರು ಹಾಕಿದ್ದ ಬಣ್ಣ ಮಾಸಿದ್ದ ಹಾದಿ ಸವೆದು ಸೀಬರ್ಡ್ ನಿರಾಶ್ರಿತರ ಕಾಲೋನಿ ತಲುಪಿದಾಗ, ಬಹುಶಃ ಕಾಯ್ಕಿಣಿಯವರು ಇಲ್ಲಿನ ಜನ-ಜೀವನ ನೋಡಿಯೇ ಹಾಗೆ ಹೇಳಿರಬೇಕೆಂದೆನಿಸಿತು. ಇಲ್ಲಿನ ಬಾಳು ಆಗಲೇ ಮೂರು ವಸಂತ ಕಂಡಾಗಿದೆ. ನಾಲ್ಕನೆಯ ವಸಂತ ಹೊಸ ಸಮಸ್ಯೆಗಳನ್ನು ಮತ್ತೆ ಹೊತ್ತು ತರಲಿದೆ. ಹಿಂದೆ ಚಿಗುರೊಡೆದವೆಲ್ಲ ಹೆಮ್ಮರವಾಗಿ ಬೆಳೆದು ನಿಂತಿರುವಾಗ ಮತ್ತೆ ಸಮಸ್ಯೆಗಳ ಸವಾಲು ಇಲ್ಲಿರುವ ಯಾರಿಗೂ ಬೇಡವಾಗಿದೆ. ಈ ಜನರ ಕೂಗೋ, ಅಂಗಳ ದಾಟಿ ಯಾರನ್ನೂ ತಟ್ಟುತ್ತಿಲ್ಲ. ಕೇಳುವವರಿಗೆ ಕಿವಿಯಿಲ್ಲ. ಕೂಗುವವರಿಗೆ ದನಿಯಿಲ್ಲ...

ಹೌದು! ಇವರು ನಿರಾಶ್ರಿತರು. ಆ ಬೆಟ್ಟದಾಚೆ ಇರುವ ಜನರಿಗೂ ತಿಳಿಯದವರು. ನಾಳೆ ಈ ನೌಕಾನೆಲೆ ಯುದ್ಧದ ನೆಲೆಯಾಗಿ ಈ ಗಡಿಯೋ - ಆ ಗಡಿಯೋ ಅಥವಾ ಇನ್ನೆಲ್ಲೋ, ಮಾರಣಹೋಮ ನಡೆಸುವಾಗ ತಮ್ಮನ್ನು ರಕ್ಷಿಸುತ್ತಿರುವವರ ಗುಣಗಾನದಲ್ಲಿ ಮೈಮರೆತ ಅಖಂಡ ಭಾರತದ ಜನಸಮೂಹದ ನೆನಪಲ್ಲಿ ಮರೆಯಾಗುವವರು ಇವರೇ! ಅಂದು ಬರಮಾಡಿಕೊಂಡ ನೋವು-ಸಂಕಟಗಳೆಲ್ಲಾ ಮೇಲೆರಗಿ ಬಂದು ನೊಂದವರ ನೋವಿಗೆ ಬೆಲೆಯಿಲ್ಲಾ ಎಂದು ಇಂದು ಅಳುತ್ತಿರುವವರು ಇವರೇ! ನಾಡ ರಕ್ಷಣೆಗಾಗಿ ಜೀವ ಪಣಕ್ಕಿಟ್ಟು ಹೋರಾಡುವ ಯೋಧರಿಗಾಗಿ ತಮ್ಮ ಜೀವನವನ್ನೇ ಬಲಿಗೊಟ್ಟು ಜನತೆಯ ನೆನಪಿಂದ ಅಳಿದು ಹೋಗುತ್ತಿರುವ ಇವರೇ!

ಆ ಕಾಲೋನಿಯ ಹೆಸರು ತೋಡೂರು ಪುನರ್ವಸತಿ ಶಿಬಿರ. ಅಲ್ಲಿ ಮೈಚೆಲ್ಲಿ ನಿಂತಿರುವ ಹಸುರು ಬೆಟ್ಟಗಳಷ್ಟೇ ಬಾಡುತ್ತಿಲ್ಲ. ಎಂಟ್ಹತ್ತು ದಿನಗಳಿಗೊಮ್ಮೆ ಹರಿದುಬರುವ ಸರ್ಕಾರಿ ನೀರನ್ನು ಕುಡಿದು ಕೆಲವೇ ಗುಂಟೆಗಳಲ್ಲಿ ಅಲ್ಲಲ್ಲಿ ಬೆಳೆದು ನಿಂತಿರುವ ಬಾಳೆಯ ಗಿಡಗಳ ಹಾಗೆಯೇ, ಕೆಲಸವಿಲ್ಲದೆ ಕೈಚೆಲ್ಲಿ ಕುಳಿತಿರುವ ನೂರಾರು ಜನರ ಮುಖವೂ ಕೂಡ. ಡಾಂಬರು ಹಾಕಿರುವಂತೆ ತೋರುವ ಮಣ್ಣಿನ ರಸ್ತೆಯ ಇಕ್ಕೆಲಗಳಲ್ಲಿ ಇರುವ ಸರ್ಕಾರಿ ನಿವೇಶನಗಳಲ್ಲಿ ಎದ್ದಿರುವ ಮನೆಗಳೂ ನೂರಾರು. ಆದರೂ ಎದ್ದು ಬಿದ್ದವುಗಳು, ಏಳಲಾಗದೆ ಒದ್ದಾಡುತ್ತಿರುವಂಥವುಗಳ ಸಂಖ್ಯೆ ಅದರ ದುಪ್ಪಟ್ಟು. ಒಂದು ಅಂದಾಜಿನ ಪ್ರಕಾರ ಇಲ್ಲಿರುವ ಸುಮಾರು ೮೦೦ ಮನೆಗಳಲ್ಲಿ ಸುಸ್ಥಿತಿಯಲ್ಲಿರುವಂಥವುಗಳು ಕೇವಲ ಮೂರೋ ನಾಲ್ಕೋ. ಉಳಿದಂತೆ ಸುಮಾರು ೨೦೦-೨೫೦ ಮನೆಗಳು ಸಾಧಾರಣ ಸ್ಥಿತಿಯಲ್ಲಿದ್ದರೆ, ಮಿಕ್ಕುಳಿದವುಗಳಲ್ಲಿ ಅಡುಗೆಯ ಕೋಣೆ ಒಳಗೆ, ಊಟದ ಕೋಣೆ ಹೊರಗೆ. ೧೯೯೮ರಲ್ಲಿ ಇಲ್ಲಿಗೆ ಬರಲಾರಂಭಿಸಿದಾಗ ಬಹಳಷ್ಟು ಜನರಿಗೆ ತಿಳಿದಿರಲಿಲ್ಲ, ತಾವು ಕಳೆದುಕೊಳ್ಳುತ್ತಿರುವುದು ಬರಿಯ ಜಮೀನು – ಮನೆಯಷ್ಟೇ ಅಲ್ಲ, ಎಂದು.

ನಿಲ್ಲಲು ಪಣತೊಟ್ಟ ಸೀಬರ್ಡ್ ನೌಕಾನೆಲೆ. ೧೯೮೫ರಲ್ಲೇ ಕೇಂದ್ರ ಸರ್ಕಾರದಿಂದ ಅಂಗೀಕೃತವಾದ ಸುಮಾರು ೨೦,೦೦೦ ಕೋಟಿ ರೂಪಾಯಿಗಳಷ್ಟು ಅಂದಾಜಿನ ೮೦೦೦ ಎಕರೆಗಳಷ್ಟು ಜಾಗೆಯಲ್ಲಿ ತಳವೂರುತ್ತಿರುವ ಬೃಹತ್ ಯೋಜನೆ. ಭಾರೀ ಹಡಗುಗಳನ್ನು ಆಮಂತ್ರಿಸಲು ಈಗಾಗಲೆ ಹಡಗುಕಟ್ಟೆಗಳು ಸಿದ್ಧ. ಭರದಿಂದ ಸಾಗುತ್ತಿರುವ ಕಾಮಗಾರಿಯೊಂದಿಗೆ ಕೈಜೋಡಿಸಲು ಸಾವಿರಾರು ಸಂಖ್ಯೆಯ ಶ್ವೇತ ಸಮವಸ್ತ್ರಧಾರಿ ನೌಕಾದಳದ ಸೈನಿಕರ ಆಗಮನ ನಿರೀಕ್ಷಿತ. ರಕ್ಷಣಾ ಯೋಜನೆಯಾದ್ದರಿಂದ ಇದಕ್ಕೂ ಹೆಚ್ಚಿನ ಮಾಹಿತಿ ಅಲಭ್ಯ. ಜಲ ಅಪಾರ, ತಟ ಅನಂತ; ಕಡಲ ತೊರೆಯ ಆರ್ಭಟ. ಇದರ ನಡುವೆ ಹಗಲಿರುಳೆನ್ನದೆ ನಡೆಯುತ್ತಿರುವ ದೊಡ್ಡ ಹಡಗುಗಳ, ಪುಟ್ಟ ಲಾರಿಗಳ ಓಡಾಟ, ಓಲಾಟ. ಕಾರವಾರದ ಹೆದ್ದಾರಿಯ ಉದ್ದಕ್ಕೂ ಹರಿದು ಸಾಗುವ ಕಣ್ಣುಗಳಿಗೆ ಕಟ್ಟುವ ಬಣ್ಣ ಅವರ್ಣನೀಯ. ಅಮೇರಿಕಾದ ನೌಕಾಪಡೆಯಷ್ಟು ದೊಡ್ಡ ಹಡಗುಗಳಲ್ಲದಿದ್ದರೂ ಅಲ್ಲೇ ಬದಿಯಲ್ಲೇ ಇರುವ ಕಾರವಾರದ ಬಂದರಿನಲ್ಲಿ ಗುಂಪಾಗಿ ನಿಲ್ಲುವ ಪುಟ್ಟ ಬೋಟುಗಳು ನೂರಾರು ಸಂಖ್ಯೆಯಲ್ಲಿ ಸೇರಿದರೂ ಅದನ್ನು ಮೀರಿಸುವ ಆಕಾರ - ಆಕೃತಿಗಳಿಗೇನೂ ಅಲ್ಲಿ ಬರವಿಲ್ಲ. ಸಮರೋಪಾದಿಯಲ್ಲಿ ಕಾರ್ಯ ಚಟುವಟಿಕೆ ನಡೆಯುತ್ತಿದ್ದರೂ, ಹೊರಜಗತ್ತಿಗೆ ಒಂದಿನಿತೂ ಸುಳಿವಿಲ್ಲ.

ಈ ಬೃಹತ್ ಯೋಜನೆಗೆ ಮನೆ ಮಠಗಳನ್ನು ತ್ಯಾಗ ಮಾಡಿರುವ ಒಟ್ಟು ಕುಟುಂಬಗಳ ಸಂಖ್ಯೆ ೩೫೮೪. ಅವರನ್ನು ಈಗಾಗಲೇ ತೋಡೂರು, ಹಾರವಾಡ,



*"ಸೋರುತಿಹುದು ಮನೆಯ ಮಾಳಿಗೆ..ಬರುತಿಹುದು ನೀರು ಒಳಗೆ..." ಮಳೆಗಾಲದಲ್ಲಿ ಒಳನುಗ್ಗುವ ನೀರಿನೊಂದಿಗೇ ಸೆಣಸಾಡುತ್ತಾ ಬದುಕಿದ ಮನೆ.*

ಪಡೆಯುತ್ತಿರುವುದೂ ಕೂಡ ಕೆಲವು ಸಾವಿರ ರೂಪಾಯಿಗಳ ಪರಿಹಾರವಷ್ಟೆ. ಇಲ್ಲಿ ಎರಡು ವರ್ಷಗಳು ಕಳೆದ ಮೇಲೆ ಅರಿವಿಗೆ ಬರ್ತಾ ಇದೆ; ಪರಿಹಾರದ ಹಣ ಎಂದೋ ಖಾಲಿ... ದುಡಿಯುವ ಕೈಗಳಿಗೆ ಕೆಲಸವೂ ಖಾಲಿ ಖಾಲಿ... ಆದರೆ ಹಸಿದ ಹೊಟ್ಟೆಯ ಚೀತ್ಕಾರ ನಿನ್ನೆಯಂತೆ ಇಂದೂ ಕೇಳಿಬರ್ತಾ ಇದೆ... ಇದು ಒಂದು ಮನೆಯ ಕತೆಯಲ್ಲ, ಮುರಿದು ಬಿದ್ದಿರುವ ಎದ್ದು ನಿಂತಿರುವ ಎಲ್ಲ ಮನೆಗಳಲ್ಲೂ ಅದೇ ರಾಗ, ಅದೇ ಹಾಡು.

ಒಂದೆಡೆ ಎತ್ತರದ ಗಿರಿಕಾಡು ಮತ್ತೊಂದೆಡೆ ಕಡಲ ಓರೆಯ ಬೀಡು. ಇದರ ನಡುವೆ ಎದ್ದು ನಿಲ್ಲುತ್ತಿರುವುದು ಹೊಸ ಶತಮಾನದ ರಕ್ಷಣೆಯ ಸವಾಲುಗಳನ್ನು ಮೆಟ್ಟಿ

ಅಮದಳ್ಳಿ, ಮೂಡಗೇರಿ, ಚಿತ್ತಾಕುಳಿ, ಬೇಲಿಕೇರಿ ಹಾಗೂ ಕಟ್ಟಿಕೇರಿಗಳಲ್ಲಿ ಯೋಜಿತ ಪುನರ್ವಸತಿ ಶಿಬಿರಗಳಿಗೆ ಸ್ಥಳಾಂತರಿಸಲಾಗಿದೆ. ಕೇಂದ್ರ ಮತ್ತು ರಾಜ್ಯಸರ್ಕಾರಗಳೆರಡೂ ಪುನರ್ವಸತಿ ಕಾರ್ಯಕ್ರಮಕ್ಕೆ ತೆಗೆದಿರಿಸಿದ್ದು ಕೇವಲ ೧೪೦ ಕೋಟಿ ರೂ. ಖಂಡಿತ ಬಿಡುಗಡೆಯಾಗಿರುವ ಹಣ ಕೇವಲವಲ್ಲ. ಆದರೆ ಅಧಿಕಾರಿಗಳ ಸಮಾರಾಧನೆಯಲ್ಲಿ ಇಂಗಿ ಸೇರುವವರಿಗೆ ಸೇರುತ್ತಿರುವ ಮೊತ್ತ ಮಾತ್ರ ನಿಜಕ್ಕೂ ಅತ್ಯಲ್ಪ. ೧೯೯೮ರಷ್ಟು ಹಿಂದೆಯೇ ಸ್ಥಳಾಂತರ ಕಾರ್ಯ ಶುರುವಾಗಿದ್ದರೂ ಪುನರ್ವಸತಿ ಮತ್ತು ಪರಿಹಾರ ಹಂಚಿಕೆಯ ಕಾರ್ಯಕ್ರಮಗಳು ಆಮೆಗತಿಯಲ್ಲಿ ಸಾಗುತ್ತಿರುವುದು ನಿಜಕ್ಕೂ ಶೋಚನೀಯ

ತಲತಲಾಂತರಗಳಿಂದಲೂ ತಮ್ಮ ಭೂಮಿ ಯಲ್ಲಿ ತಮ್ಮದೇ ಜೀವನ ನಡೆಸುತ್ತಿದ್ದವರನ್ನು ಒಕ್ಕಲೆಬ್ಬಿಸಲು ತೋರಿದ ಆಸಕ್ತಿಯನ್ನು ಒಕ್ಕಲು ಮಕ್ಕಳ ಒಡಲಾಳದ ಸಮಸ್ಯೆಯನ್ನು ಪರಿಹರಿಸಲು ಸರ್ಕಾರ ತೋರದೆ ಇದ್ದದ್ದು ನಿಜಕ್ಕೂ ಪ್ರಜಾತಂತ್ರಕ್ಕೆ ಬಗೆದ ಅಪರಾಧವಾಗಿದೆ.

ಸರ್ಕಾರದ ಕಾರ್ಯಕ್ರಮದಂತೆ ಎಲ್ಲಾ ನಿರಾಶ್ರಿತ ಕುಟುಂಬಗಳಿಗೂ ಮನೆ ಕಟ್ಟಿಕೊಳ್ಳಲು ನಿವೇಶನ ಮತ್ತು ಜಮೀನು ಕಳೆದುಕೊಂಡವರಿಗೆ ಪರಿಹಾರ ನೀಡಬೇಕಿತ್ತು. ಅಲ್ಲದೇ ಪ್ರತಿ ಕುಟುಂಬದಲ್ಲಿ ಹದಿನೆಂಟು ವರ್ಷ ಮೇಲ್ಪಟ್ಟವರೆಲ್ಲರಿಗೂ ಸ್ವ-ಉದ್ಯೋಗಕ್ಕಾಗಿ ಬಂಡವಾಳ ತೊಡಗಿಸಲು ಹಣವನ್ನು ನೀಡಬೇಕಿತ್ತು. ಸರಕಾರಿ ಕಡತಗಳಲ್ಲಿ ಜಾಲಾಡಿ ನೋಡಿದರೆ ಇವೆಲ್ಲದರ ವಿವರಣೆ ಇದೆ ಮತ್ತು ಯೋಗ್ಯ ರೀತಿಯಲ್ಲಿ ವಿತರಣೆಯನ್ನು ಮಾಡಲಾಗಿದೆ ! ಆದರೆ ವಾಸ್ತವ ಚಿತ್ರಣವೇ ಬೇರೆ ಇದೆ. ನಿವೇಶನಕ್ಕೆ ನೀಡಿದ ಜಾಗ ಕೇವಲ ೬೦ X ೯೦. ಕೇವಲ ಮನೆಯಷ್ಟೆ ಕಳಕೊಂಡವರಿಗೆ ನೀಡಿದ್ದು ೧ ಗುಂಟೆಯ ಜಾಗ. ಕಳೆದುಕೊಂಡ ಜಮೀನಿಗೆ ಸರ್ಕಾರ ನೀಡಿದ್ದು ಪ್ರತಿ ಗುಂಟೆಗೆ ೧೫೦ ರೂ. ಮಾತ್ರ. ಆದರೆ ಆಗಲೇ ಆ ಪ್ರದೇಶದ ಸುತ್ತಮುತ್ತ ಭೂಮಿಯ ಬೆಲೆ ಗುಂಟೆಗೆ ೧೦,೦೦೦ ರೂಪಾಯಿಗಳಷ್ಟಿತ್ತು. ನಿರುದ್ಯೋಗಿ ನಿರಾಶ್ರಿತರೆಲ್ಲಾ ಉದ್ಯೋಗಿಗಳಾಗಿ ಸ್ವಾವಲಂಬಿಗಳಾಗಲು ಪ್ರೇರೇಪಿಸಬೇಕಾಗಿದ್ದ ಸರಕಾರ ಕೇವಲ ೧೮ ವರ್ಷ ಮೇಲ್ಪಟ್ಟವರಿಗೆ ಮಾತ್ರ ಪರಿಹಾರ ನೀಡಿ ಕೈ ತೊಳೆದುಕೊಂಡಿತಷ್ಟೆ ಅಲ್ಲದೆ ಮುಂದೊದಗಬಹುದಾದ ಸಮಸ್ಯೆಗಳ ಬಗ್ಗೆ ಯಾವುದೇ ಯೋಜನೆ ಹಾಕಿಕೊಳ್ಳದೆ ಅಂದಿನಿಂದಲೇ ನಿರಾಶ್ರಿತರ ಸಮಸ್ಯೆಗಳಿಗೆ ಅಡಿಪಾಯ ಹಾಕಿತು. ಈ ಹಣವೂ ಎಲ್ಲರಿಗೂ ಸಮಾನವಾಗಿ ಸಿಕ್ಕಿಲ್ಲ. ಹದಿನೆಂಟು ವರ್ಷಕ್ಕೆ ಒಂದು ತಿಂಗಳು ಕಡಿಮೆ ಇದ್ದವರು ಈ ಪರಿಹಾರದಿಂದ ವಂಚಿತರಾಗಿದ್ದಾರೆ. ಪರಿಹಾರ ಪಡೆದುಕೊಂಡವರು ಕೂಡ ಮುಂದಿನ ಪರಿಸ್ಥಿತಿಯ ಅರಿವಿಲ್ಲದೆ ಹಣವನ್ನು ನೀರಿನಂತೆ ಖರ್ಚು ಮಾಡಿ ಈಗ ಕೈಚೆಲ್ಲಿ ಕುಳಿತಿದ್ದಾರೆ.

ಈ ಶಿಬಿರಗಳಲ್ಲಿ ತೋರಿಬರುತ್ತಿರುವ ಬಹುದೊಡ್ಡ ಸಮಸ್ಯೆಯೆಂದರೆ ನಿರುದ್ಯೋಗದ್ದು. ಸರ್ಕಾರದ ಕಾರ್ಯಯೋಜನೆಯಂತೆ ನೌಕಾನೆಲೆಯ ಕಾಮಗಾರಿಗೆ, ಪುನರ್ವಸತಿ ಶಿಬಿರಗಳಲ್ಲಿ ನಡೆಸುವ ಕಾಮಗಾರಿಗಳಿಗೆ ಕಾರ್ಮಿಕರನ್ನಾಗಿ ನಿರಾಶ್ರಿತರನ್ನೇ ನೇಮಿಸಿಕೊಳ್ಳಬೇಕಾಗಿತ್ತು. ಆದರೆ ಗುತ್ತಿಗೆದಾರರಿಗೆ ಆಗಬಹುದಾದ 'ಅನ್ಯಾಯ'ವನ್ನು ಅರಿತು, ಒಂದು ಲಕ್ಷದ ಕಾಮಗಾರಿಗಳನ್ನು ಎರಡು ಲಕ್ಷಕ್ಕೆ ಗುತ್ತಿಗೆ ನೀಡಿ ಆಂಧ್ರಪ್ರದೇಶ, ಒರಿಸ್ಸಾದ ಕಾರ್ಮಿಕರನ್ನು ದನದಂತೆ ದುಡಿಸಿಕೊಳ್ಳುವುದನ್ನು ನೋಡುತ್ತಲೇ ಖಾಲಿ ಕೈಯಲ್ಲಿ ಕುಳಿತಿದ್ದ ನಿರಾಶ್ರಿತರ ಕಡೆಗೆ ಗಾಢ ಮೌನ ವಹಿಸಿದ್ದು ಸರಕಾರದ ಹೊಣೆಗೇಡಿತನ. ನೌಕಾನೆಲೆಯ ಕಾಮಗಾರಿಗಳಲ್ಲಿ ಕೂಲಿಕಾರರಿಗೆ, ಡಿಪ್ಲೋಮಾ ಪದವೀಧರರಿಗೆ, ಚಾಲಕರಿಗೆ ದೊರೆಯಬಹುದಾದ ಸಹಸ್ರಾರು ಸಂಖ್ಯೆಯ ಉದ್ಯೋಗಗಳಿಗೆ ನಿರಾಶ್ರಿತರನ್ನೇ ಸೂಕ್ತ ರೀತಿಯಲ್ಲಿ ತರಬೇತಿಗೊಳಿಸಿ ನೇಮಕ ಮಾಡಿಕೊಳ್ಳುವ ನಿಟ್ಟಿನಲ್ಲಿ ಸರಕಾರದ ಬಳಿ ಯಾವ ಯೋಜನೆಯಾಗಲಿ, ಕಾರ್ಯಕ್ರಮವಾಗಲಿ ಇಲ್ಲ. ಹೆಚ್ಚಿನದಾಗಿ ಅನಕ್ಷರಸ್ಥರೆ ತುಂಬಿಕೊಂಡಿರುವ ಈ ನಿರಾಶ್ರಿತರ ಶಿಬಿರಗಳಲ್ಲಿ ಈ ರೀತಿಯ ಸಮಸ್ಯೆಗಳನ್ನು ವ್ಯವಸ್ಥಿತವಾಗಿ ಪರಿಹರಿಸಿಕೊಳ್ಳುವ ಅರಿವೂ ಇಲ್ಲ. ನಿರಾಶ್ರಿತರ ಶಿಬಿರಗಳಲ್ಲಿ ಸಮಸ್ಯೆಗಳನ್ನು ಪರಿಹರಿಸುವ ನಿಟ್ಟಿನಲ್ಲಿ ಸರಕಾರವೇ ರಚಿಸಿರುವ ಗ್ರಾಮೀಣ ಅಭಿವೃದ್ಧಿ ಸಲಹಾ ಸಮಿತಿ ಈ ಬಗ್ಗೆ ಏನೇ ಹೇಳಿದರೂ ಗುತ್ತಿಗೆದಾರರ ಬೂಸಾ ತಿನ್ನುವ ಅಧಿಕಾರಿಗಳ ಕಿವಿಗೆ ಬೀಳುವುದೇ ಇಲ್ಲ. ಈ ಶಿಬಿರಗಳಲ್ಲಿ ನಿರುದ್ಯೋಗ ಕೇವಲ ಒಂದು ಸಮಸ್ಯೆಯಾಗದೆ ಬೇರೆ ಬೇರೆ ಸಮಸ್ಯೆಗಳಿಗೆ ಮೂಲವಾಗುವ ಎಲ್ಲ ಲಕ್ಷಣಗಳ ನಡುವೆ, ಆಳುವವರ ಅನಾದರ ಈ ಜನತೆಯ ತ್ಯಾಗಕ್ಕೆ ಮಾಡುತ್ತಿರುವ ಅನ್ಯಾಯವಾಗಿದೆ. ಕುಡಿಯುವ ನೀರಿನ ಅಭಾವ, ಇಡೀ ಕಾಲೋನಿಗೆ ಇರುವ ೭-೮ ಶೌಚಾಲಯಗಳು, ಹಾಳುಬಿದ್ದಿರುವ ರಸ್ತೆಗಳು ಎಲ್ಲವೂ ಸೇರಿ ನಿರಾಶ್ರಿತರನ್ನು ಹೀನಾಯಸ್ಥಿತಿಗೆ ತಳ್ಳುತ್ತಿವೆ.



*ಪೂರ್ಣಗೊಳ್ಳದ ಮನೆ. ಪೂರ್ಣಗೊಳ್ಳದ ಬದುಕು .... "ಪೂರ್ಣ"ಗೊಂಡ ಸರಕಾರಿ ಪರಿಹಾರ ?*

ಇಂದು ಈ ಶಿಬಿರಗಳಲ್ಲಿ ಹಬ್ಬ-ಹರಿದಿನಗಳ ಭರಾಟೆಯಿಲ್ಲ. ಹಸಿನೆಲದ ಕಂಪಿನ ಸೆಳೆತ, ಕನಸಲೂ ಕಾಡುವ ಕಡಲಲೆಗಳ ಮೊರೆತ ಎಲ್ಲವೂ ಈ ಜನರಿಗೆ ಈಗ ಕೇವಲ ನೆನಪು ಮಾತ್ರ. ವಾಸ್ತವ ಸಮಸ್ಯೆಗಳ ಸಾಗರವನ್ನೇ ಮುಂದಿಟ್ಟು ಈಜುವ ಸವಾಲೊಡ್ಡಿದೆ. ಆದರೆ ಇದಾವುದರ ಪರಿವೆಯಿಲ್ಲದೆ ಹಾಲುಗಲ್ಲದ ಕಂದಮ್ಮಗಳು ಇನ್ನೂ ಕನಸು ಕಾಣುತ್ತಲೇ ಇವೆ; ಕನಸು ಕಾಣುವ ಕಣ್ಗಳ ಆಗಮನವಾಗುತ್ತಲೇ ಇದೆ. ಇವರ ಬಗ್ಗೆ ನಿರೀಕ್ಷೆ ಇಡುವ ಮಂದಿ ಮಾತ್ರ ನಿರಾಶಾವಾದಿಗಳಾಗಿದ್ದಾರೆ. ಸರಕಾರ ತಾನು ಮಾಡಿದ್ದು ಹೆಚ್ಚಾಯ್ತು ಎಂದು ಕೈತೊಳೆದುಕೊಂಡರೆ, ಮಾಡಿಸಿಕೊಂಡವರು ದಿಕ್ಕು ತೋಚದೆ ಕೈಚೆಲ್ಲಿದ್ದಾರೆ.

**ತೇಪೆಯೇ ತಹದದಕೆ ತಾಳಿಕೆ**
**ಲೇಪವೇ ಆಗಮದ ಬಾಳಿಕೆ**
**ಈ ರಿಪೇರಿಯ ಹೆಸರು ಹೇಳಿಕೆ**
**.......ನವಸುಧಾರಣೆ.**

*(ಗೌರೀಶ ಕಾಯ್ಕಿಣಿ.)*

**ಸದಾನಂದ ಎಂ. ನಾಯಕ್**
ಸೀಬರ್ಡ್ ಕಾಲೋನಿ, ತೋಡೂರು, ಕಾರವಾರ - ೫೮೧೩೦೪

*ಮನೆಗಳಿಗಿಂತ ಹೆಚ್ಚಾಗಿ ಖಾಲಿ ಬಿದ್ದಿರುವ ನಿವೇಶನಗಳು ಪರಿಹಾರದ ಅಸಮರ್ಪಕ ವಿತರಣೆಗೆ ಸಾಕ್ಷಿಯಾಗಿವೆ*



# ಷೇಕ್ಸ್‌ಪಿಯರ್‌ನ ಹುಟ್ಟೂರಿನಲ್ಲಿ ಸುತ್ತಾಟ

**ಡಾ॥ ಕೆ. ಮರುಳಸಿದ್ದಪ್ಪ**

ಧಾರ್ಮಿಕ ನಿಷ್ಠೆಯುಳ್ಳವರಿಗೆ ಮೆಕ್ಕಾ, ಕಾಶಿ, ವ್ಯಾಟಿಕನ್‌ಗಳಿದ್ದಂತೆ ರಂಗಪ್ರೇಮಿಗಳಿಗೆ ಷೇಕ್ಸ್‌ಪಿಯರಿನ ಹುಟ್ಟೂರು ಸ್ಟ್ರಾಟ್‌ಫರ್ಡ್ ಆನ್ ಏವನ್. ಪ್ರತಿವರ್ಷ ಏಪ್ರಿಲ್ ೨೩ರಂದು ಜಗತ್ತಿನ ಹಲವು ಭಾಗಗಳಿಂದ ಬರುವ ನಾಟಕ ಪ್ರೇಮಿಗಳು ಅಲ್ಲಿ ಸೇರಿ ಷೇಕ್ಸ್‌ಪಿಯರ್‌ನ ಹುಟ್ಟುಹಬ್ಬವನ್ನಾಚರಿಸುತ್ತಾರೆ. ಇಂದಿಗೂ ರಕ್ಷಿಸಿಕೊಂಡು ಬಂದಿರುವ ಅವನು ಹುಟ್ಟಿದ ಮನೆಯಿಂದ ಮೆರವಣಿಗೆಯಲ್ಲಿ ಹೋಗಿ, ಆತ ವಿದ್ಯಾಭ್ಯಾಸ ಮಾಡಿದ 'ಗ್ರಾಮರ್ ಸ್ಕೂಲ್' ಮೂಲಕ ಹಾಯ್ದು ಅವನ ಸಮಾಧಿಯಿರುವ 'ಟ್ರಿನಿಟಿ ಚರ್ಚ್'ಗೆ ಬಂದು ತಮ್ಮ ಗೌರವ ಸಲ್ಲಿಸುತ್ತಾರೆ. ಬೇರೆ ದೇಶಗಳಿಂದ ಇಂಗ್ಲೆಂಡಿಗೆ ಪ್ರವಾಸಿಗಳಾಗಿ ಬಂದವರಂತೂ ಅಲ್ಲಿಗೆ ಹೋಗುವುದು ಕಡ್ಡಾಯವೆನ್ನಬಹುದಾಗಿದೆ. ನಾನು ಇಂಗ್ಲೆಂಡಿಗೆ ಪ್ರವಾಸ ಹೊರಟಾಗಲೇ ಅಲ್ಲಿಗೆ ಹೋಗಬೇಕಾದುದು ನಿಶ್ಚಿತವೆಂದು ಗೊತ್ತಿದ್ದ ಕಾರಣ, ವುಲ್ವರ್ ಹ್ಯಾಂಪ್ಟನ್ ಪಟ್ಟಣದಲ್ಲಿದ್ದ ನನ್ನ ಬಂಧುಗಳು ಒಂದು ದಿನ ಅಲ್ಲಿಗೆ ಹೋಗಿ ಬರುವ ಕಾರ್ಯಕ್ರಮ ಏರ್ಪಾಟು ಮಾಡಿದ್ದರು. ಮತ್ತೊಂದು ದಿನ 'ರಾಯಲ್ ಷೇಕ್ಸ್‌ಪಿಯರ್ ಕಂಪನಿ'ಯವರು ಪ್ರದರ್ಶಿಸಿದ 'ಹ್ಯಾಮ್ಲೆಟ್' ನಾಟಕ ನೋಡಲು ಹೋಗಿದ್ದೆ.

ವುಲ್ವರ್‌ಹ್ಯಾಂಪ್ಟನ್ ಬಿಟ್ಟು, ಬರ್ಮಿಂಗ್‌ಹ್ಯಾಮ್ ಪಕ್ಕದ ಹೆದ್ದಾರಿಯಲ್ಲಿ ಮುಂದೆ ಸಾಗಿ ಎರಡೂವರೆ ತಾಸುಗಳ ಪ್ರಯಾಣದ ಬಳಿಕ ಷೇಕ್ಸ್‌ಪಿಯರ್‌ನ ಹುಟ್ಟೂರು ಸೇರಿದಾಗ ಮಧ್ಯಾಹ್ನ ಹನ್ನೆರಡು ಗಂಟೆಯಾಗಿತ್ತು. ಏವನ್ ನದಿ ದಂಡೆಯ ಅಕ್ಕ ಪಕ್ಕ ಬೆಳೆದಿರುವ ಈ ನಗರ ಸುಂದರ ನಿಸರ್ಗ ಹಾಗೂ ಸದ್ದುಗದ್ದಲವಿರದ ಪರಿಸರದಿಂದಾಗಿ ಮನಸ್ಸಿಗೆ ಆಹ್ಲಾದವುಂಟುಮಾಡುವಂತಿದೆ. ಇದನ್ನೊಂದು ಪ್ರವಾಸಿ ಕೇಂದ್ರವಾಗಿ ಅಭಿವೃದ್ಧಿ ಪಡಿಸಿರುವುದರಿಂದ ನದಿಯಲ್ಲಿ ದೋಣಿವಿಹಾರ, ಎಲ್ಲ ಬಗೆಯ ಜನರಿಗೆ ತಕ್ಕ ಗೆಸ್ಟ್‌ಹೌಸ್‌ಗಳು, ಹೋಟೆಲ್‌ಗಳು, ಅಂಗಡಿ ಬೀದಿಗಳು, ಮಾರ್ಕೆಟ್ ಚೌಕ, ಚರ್ಚ್– ಇವೆಲ್ಲ ಇದ್ದರೂ ಇಲ್ಲಿನ ಮುಖ್ಯ ಆಕರ್ಷಣೆ ಷೇಕ್ಸ್‌ಪಿಯರನ ಬದುಕಿಗೆ ಸಂಬಂಧಿಸಿದ ಸ್ಥಳಗಳು, ಅವನು ಹುಟ್ಟಿ ಬೆಳೆದ ಮನೆ, ಸತ್ತ ಬಳಿಕ ಸಮಾಧಿಯಾಗಿರುವ ಚರ್ಚ್ ಸೇರಿದಂತೆ ಕೆಲವು ಪ್ರಮುಖ ಸ್ಥಳಗಳಲ್ಲದೆ, ಇಡೀ ಊರಿನಲ್ಲಿ ಎಲ್ಲಿ ನೋಡಿದರೂ ಷೇಕ್ಸ್‌ಪಿಯರ್ ಸ್ಮಾರಕಗಳಿವೆ. ನಾವು ಅಲ್ಲಿಗೆ ಹೋದ ದಿನ ಹಿತವಾದ ಬಿಸಿಲು ಚಳಿ ಬೆರೆತ ಹವೆಯಿದ್ದು ನಡೆಯಲು ಉತ್ಸಾಹದಾಯಕವಾಗಿತ್ತು. ವಾಹನವನ್ನು ಊರ ಮಧ್ಯೆ ನಿಲ್ದಾಣದಲ್ಲಿ ಬಿಟ್ಟು ನೇರವಾಗಿ ಏವನ್ ಹೊಳೆಯ ದಂಡೆ ಸೇರಿದೆವು. ಅದೊಂದು ಚಿಕ್ಕ ನದಿ. ಎರಡೂ ದಂಡೆಗಳಿಗೆ ಕಲ್ಲಿನ ಏರಿ ಕಟ್ಟಿದ್ದಾರೆ. ನೂರಾರು ಹಂಸ ಪಕ್ಷಿಗಳು ಅಲ್ಲಿ ಈಜಾಡುತ್ತಿರುತ್ತವೆ. ಪ್ರವಾಸಿಗಳಿಗಾಗಿ ಹಲವು ದೋಣಿಗಳು ಇವೆ. ನದಿ ದಂಡೆಯಲ್ಲಿ ಸ್ವಲ್ಪ ಸಮಯ ಸುತ್ತಾಡಿ ಪಕ್ಕದಲ್ಲಿಯೇ ಇದ್ದ 'ರಾಯಲ್ ಷೇಕ್ಸ್‌ಪಿಯರ್ ಕಂಪನಿ'ಯ ಕಾಫಿ ಹೌಸ್‌ನಲ್ಲಿ ಕಾಫಿ ಕುಡಿದು ಷೇಕ್ಸ್‌ಪಿಯರ್ ಹುಟ್ಟಿ ಬೆಳೆದ ಮನೆ ನೋಡಲು ನಡೆದೇ ಹೋದೆವು. ೧೮೪೭ರಲ್ಲಿ ಈ ಮನೆಯನ್ನು ಷೇಕ್ಸ್‌ಪಿಯರ್ ಅಭಿಮಾನಿಗಳು ಕೊಂಡು ಆತನ ಹೆಸರಿನಲ್ಲಿ ಒಂದು ಟ್ರಸ್ಟ್ ಸ್ಥಾಪಿಸಿದರು. ಷೇಕ್ಸ್‌ಪಿಯರ್ ಅಧ್ಯಯನ, ಆತನ ನಾಟಕಗಳ ಪ್ರದರ್ಶನ, ಆತನ ಬದುಕಿಗೆ ಸಂಬಂಧಿಸಿದ ಸ್ಥಳ ಹಾಗೂ ಕಟ್ಟಡಗಳ ಸಂರಕ್ಷಣೆ – ಈ ಟ್ರಸ್ಟ್‌ನ ಗುರಿ. ಸಂಪೂರ್ಣವಾಗಿ ಸ್ವಾಯತ್ತ ಸಂಸ್ಥೆಯಾಗಿರುವ ಈ ಟ್ರಸ್ಟ್‌ನ ಆರ್ಥಿಕ ಸಂಪನ್ಮೂಲಗಳೆಂದರೆ ದಿನನಿತ್ಯ ಪ್ರವಾಸಿಗಳಿಂದ ಪಡೆಯುವ ಪ್ರವೇಶ ಶುಲ್ಕ ಹಾಗೂ ಸಾರ್ವಜನಿಕ ದೇಣಿಗೆಗಳು. ಷೇಕ್ಸ್‌ಪಿಯರ್ ಮನೆ, ಆತನ ಮಡದಿ ಹಾತ್‌ವೇ ಕಾಟೇಜ್, ಆತನ ತಾಯಿಯ ಮನೆ, ಕೊನೆಗಾಲದಲ್ಲಿ ಅವನು ವಾಸವಾಗಿದ್ದ ಮನೆ, ಹಿರಿಯ ಮಗಳು ಸುಸಾನಳ ಮನೆ, – ಇಷ್ಟು ಕಟ್ಟಡಗಳನ್ನು ಟ್ರಸ್ಟ್ ತನ್ನ ವಶಕ್ಕೆ ತೆಗೆದುಕೊಂಡು ಅವುಗಳನ್ನು ಅಚ್ಚುಕಟ್ಟಾಗಿ ಸಂರಕ್ಷಿಸಿ ನಿರ್ವಹಿಸುತ್ತಿದೆ. ಪ್ರವೇಶ ಶುಲ್ಕ ತೆತ್ತು ಒಂದೊಂದು ಸ್ಥಳವನ್ನೂ ಪ್ರವಾಸಿಗಳು ನೋಡುತ್ತಾರೆ.

ನಾವು ಸ್ಟ್ರಾಟ್‌ಫರ್ಡ್ ಅಪಾನ್ ಏವನ್ ಪಟ್ಟಣವನ್ನು ಪ್ರವೇಶಿಸುವ ದಾರಿಯಲ್ಲಿಯೆ ಷೇಕ್ಸ್‌ಪಿಯರ್‌ನ ಮಡದಿಯ ತೌರುಮನೆ 'ಆನ್ ಹಾತ್‌ವೇ ಕಾಟೇಜ್' ನೋಡಿದೆವು. ಹದಿನಾರನೆ ಶತಮಾನದಲ್ಲಿ ಇದು ಷೇಕ್ಸ್‌ಪಿಯರನ ಹುಟ್ಟೂರಿನ ಪಕ್ಕದಲ್ಲಿದ್ದ ಮತ್ತೊಂದು ಬೇರೆ ಊರಾಗಿತ್ತಾದರೂ ಈಗ ಇವೆರಡೂ ಸೇರಿಹೋಗಿವೆ.

ಷೇಕ್ಸ್‌ಪಿಯರ್ ತನ್ನ ಹದಿನೆಂಟನೇ ವಯಸ್ಸಿನಲ್ಲೇ ಮದುವೆಯಾದಾಗ ಅವನ ಹೆಂಡತಿಗೆ ಇಪ್ಪತ್ತಾರು ವರ್ಷ ವಯಸ್ಸಾಗಿತ್ತು. ಮದುವೆಯ ದಿನದ ಹೊತ್ತಿಗೆ ಆನ್ ಹಾತ್‌ವೇ ಮೂರು ತಿಂಗಳ ಗರ್ಭಿಣಿಯಾಗಿದ್ದಳಂತೆ. ಮುಂದೆ ಆರು ತಿಂಗಳ ಬಳಿಕ ಷೇಕ್ಸ್‌ಪಿಯರಿನ ಅಚ್ಚುಮೆಚ್ಚಿನ ಮಗಳು ಸುಸಾನ ಹುಟ್ಟಿದಳು. ಬಳಿಕ ಮೂರು ಮಕ್ಕಳು ಪಡೆದ ಷೇಕ್ಸ್‌ಪಿಯರ್ ಲಂಡನ್ನಿಗೆ ಹೋಗಿ ನೆಲೆಸಿ, ನಾಟಕಗಳನ್ನು ಬರೆದು ಆಡಿಸಿ ಹಣ ಸಂಪಾದಿಸಿ ಶ್ರೀಮಂತನಾಗಿ ಹುಟ್ಟೂರಿಗೆ ಕೊನೆಗಾಲದಲ್ಲಿ ಹಿಂದಿರುಗಿದ. ೧೬೧೬ರಲ್ಲಿ ತನ್ನ ಐವತ್ತೆರಡನೆ ವಯಸ್ಸಿನಲ್ಲಿ ಸತ್ತಾಗ ತನ್ನ ಬಹುಪಾಲು ಆಸ್ತಿಯನ್ನು ಮೊದಲ ಮಗಳ ಹೆಸರಿಗೆ ಉಯಿಲು ಬರೆದು, ಅಲ್ಪಸ್ವಲ್ಪವನ್ನು ಉಳಿದ ಮಕ್ಕಳಿಗೆ ಹಾಗೂ ಸ್ನೇಹಿತರಿಗೆ ಬಿಟ್ಟಿದ್ದ. ಹೆಂಡತಿಗೆ ಕೇವಲ ಒಂದು ಮಂಚವನ್ನು ಉಳಿಸಿದ್ದನಂತೆ ! ಹದಿನೈದನೇ ಶತಮಾನದಲ್ಲಿ ಕಟ್ಟಿದ್ದ ಆನ್ ಹಾತ್‌ವೇ ಮನೆಯಲ್ಲಿ ಆಕೆಯ ವಂಶಸ್ಥರು ಇಪ್ಪತ್ತನೇ ಶತಮಾನದ ಆದಿಭಾಗದವರೆಗೂ ವಾಸವಾಗಿದ್ದರಂತೆ. ಮುಂದೆ ಷೇಕ್ಸ್‌ಪಿಯರ್ ಟ್ರಸ್ಟ್ ಕೊಂಡು ಈ ಮನೆಯನ್ನು ಕಾಪಾಡಿಕೊಂಡು ಬಂದಿದೆ. ಹುಲ್ಲಿನ ಚಾವಣಿ ಹಾಗೂ ನೆಲಕ್ಕೆ ಕಲ್ಲಿನ ಹಾಸು ಇರುವ ಈ ಮನೆ ಆ ಕಾಲದ ಇಂಗ್ಲೆಂಡಿನ ಕೃಷಿಕರ ಮನೆಗಳ ಒಂದು ಮಾದರಿಯಂತಿದೆ. ಈ ಮನೆಯನ್ನು ಪ್ರವೇಶಿಸಿದಂತೆ, ಮೊದಲು ಸಿಗುವುದೇ ಅಡುಗೆ ಮನೆ; ಬಳಿಕ ನಡುಮನೆ. ಎರಡೂ ಕಡೆ ದೊಡ್ಡ ದೊಡ್ಡ ಒಲೆಗಳು. ಇಂಗ್ಲೆಂಡಿನ ಚಳಿಗೆ ಹಿಂದಿನ ಕಾಲದಲ್ಲಿ ಈ ಒಲೆಗಳು ತೀರಾ ಅಗತ್ಯವಾಗಿದ್ದವು. ಈಗ ವಿದ್ಯುತ್ ಶಾಖದ ಅನುಕೂಲವಿದ್ದರೂ ಅಲಂಕಾರದಂತೆ ಬಹುಪಾಲು ಮನೆಗಳಲ್ಲಿ ಈ ಒಲೆಗಳು ಉಳಿದುಕೊಂಡು ಬಂದಿವೆ. ಮೇಲಿನ ಮಹಡಿಯಲ್ಲಿ ಮೂರು ಕೊಠಡಿಗಳು. ಮನೆಯ ಎಲ್ಲಾ ಭಾಗದಲ್ಲಿಯೂ ವಾಸ ಗೃಹದ ಲಕ್ಷಣವನ್ನು ಒಳಗೊಳ್ಳುವಂತೆ ಗೃಹೋಪಯೋಗಿ ಪರಿಕರಗಳು ಹಾಗೂ ಪೀಠೋಪಕರಣಗಳಿಂದ ಸಜ್ಜುಗೊಳಿಸಲಾಗಿದೆ. ಇಲ್ಲಿರುವ ಹಲವಾರು ವಸ್ತುಗಳು ಹಾಗೂ ಪೀಠೋಪಕರಣಗಳನ್ನು ಆನ್ ಹಾತ್‌ವೇ ಕುಟುಂಬದವರಿಂದ ಪಡೆದು ಇಲ್ಲಿಡಲಾಗಿದೆ. ಮನೆಯ ಮುಂದೆ ಒಂದು ಚಿಕ್ಕ ಕೈ ತೋಟವಿದ್ದು, ಆ ಕಾಲದ ಅಭಿರುಚಿಗೆ ತಕ್ಕಂತೆ ಅಲ್ಲಿ ಗಿಡಮರಗಳನ್ನು ಬೆಳೆಸಿದ್ದಾರೆ. ಮನೆಗೆ ಹೊಂದಿಕೊಂಡಂತೆ ಒಂದು ಚಿಕ್ಕ ಅಂಗಡಿಯಿದ್ದು ಅಲ್ಲಿ ಸ್ಮರಣಿಕೆಗಳು ಮತ್ತು ಪುಸ್ತಕಗಳು ಸಿಗುತ್ತವೆ. ಮನೆಗೆ ಪ್ರವೇಶ ಶುಲ್ಕ ಮೂರೂವರೆ ಪೌಂಡುಗಳಿದ್ದು, ಒಬ್ಬ ಮಾರ್ಗದರ್ಶಿ ಒದಗಿಸುತ್ತಾರಾದರೂ ಅದರ ಅಗತ್ಯವೇನೂ ಕಂಡುಬರುವುದಿಲ್ಲ.

ಷೇಕ್ಸ್‌ಪಿಯರನ ಹುಟ್ಟೂರಿನಲ್ಲಿರುವ ಅವನ ಮನೆ ಸ್ಥಳ

ಎಚ್ ಎಮ್ ಟಿ
ಬಹುಮಾನಿತ ಲೇಖನ





ಷೇಕ್ಸ್‌ಪಿಯರ್‌ನ ಮಡದಿ ಆನ್ ಹಾತ್‌ವೇ ಕಾಟೇಜ್

ದೊಡ್ಡದಾಗಿದ್ದು, ಅವನ ತಂದೆ ಜಾನ್ ಷೇಕ್ಸ್‌ಪಿಯರನ ಶ್ರೀಮಂತಿಕೆಗೆ ಸಾಕ್ಷಿಯಾಗುವಂತಿದೆ. ಷೇಕ್ಸ್‌ಪಿಯರ್ ತಂದೆ ವುಲ್ಲನ್ ವ್ಯಾಪಾರಿ ಮತ್ತು ಉಣ್ಣೆಯ ಉಡುಪು ತಯಾರಕನಾಗಿದ್ದು, ಕೆಲವು ಜನ ಸಹಾಯಕರೊಡನೆ ಅವುಗಳನ್ನು ಸಿದ್ಧಪಡಿಸುತ್ತಿದ್ದ ಕೊಠಡಿಯೂ ಈ ಮನೆಯ ಒಂದು ಭಾಗವಾಗಿದೆ. ಪ್ರವೇಶ ಭಾಗದಲ್ಲಿಯೇ ಅಡುಗೆ ಮನೆ, ಬಳಿಕ ನಡುಮನೆ, ಉಣ್ಣೆ ಉಡುಪು ತಯಾರಿಕಾ ಕೊಠಡಿ, ಉಗ್ರಾಣಗಳಿವೆ. ಮೇಲಿನ ಮಹಡಿಯಲ್ಲಿ ಮಲಗುವ ಕೊಠಡಿಗಳಿವೆ. ಎರಡೂ ಅಂತಸ್ತಿನ ಗೋಡೆಗಳ ಪಕ್ಕದಲ್ಲಿ ಕವಿಯ ಜೀವನ ವಿವರಗಳನ್ನು ಕುರಿತ ದೃಶ್ಯಾವಳಿಗಳ ವಿವರವಾದ ಚಿತ್ರಣವಿದೆ. ಅಲ್ಲೇ ಒಂದು ಕೊಠಡಿಯಲ್ಲಿ ಅಲ್ಲಿಗೆ ಭೇಟಿ ನೀಡಿದವರೆಲ್ಲ ತಮ್ಮ ಹೆಸರು, ವಿಳಾಸ, ಸಹಿ ಮಾಡುವ ಪುಸ್ತಕವಿದೆ. ಸುಮಾರು ಹದಿನೈದನೇ ಶತಮಾನದಲ್ಲಿ ಕಟ್ಟಿರಬಹುದೆಂದು ಹೇಳಲಾದ ಈ ಮನೆಯು ಪಟ್ಟಣದ ಕೇಂದ್ರಭಾಗದಲ್ಲಿ ಹಲವಾರು ಮನೆಗಳಿಗೆ ಹೊಂದಿಕೊಂಡು ಮುಖ್ಯ ಬೀದಿಯಲ್ಲಿತ್ತೆಂದೂ, ೧೮೫೭ರಲ್ಲಿ ಷೇಕ್ಸ್‌ಪಿಯರ್ ಟ್ರಸ್ಟ್ ಈ ಮನೆಯನ್ನು ಕೊಂಡುಕೊಂಡಾಗ ಅದನ್ನು ಉಳಿದ ಮನೆಗಳಿಂದ ಪ್ರತ್ಯೇಕಿಸಿ ಸ್ವತಂತ್ರ ಕಟ್ಟಡವಾಗಿ ಅಭಿವೃದ್ಧಿ ಪಡಿಸಿದರೆಂದೂ ಹೇಳುತ್ತಾರೆ. ಷೇಕ್ಸ್‌ಪಿಯರ್ ಜನ್ಮತಾಳಿದ ಜಾಗವೆಂದು ಮನೆಯ ಒಂದು ಸ್ಥಳವನ್ನು ತೋರಿಸುವುದುಂಟು; ಆದರೆ ಅವನ ಜೀವನದ ವಿವರಗಳು ಹೆಚ್ಚಾಗಿ ಗೊತ್ತಿಲ್ಲ. ಈ ಊರಿನಲ್ಲಿರುವ ಚರ್ಚ್‌ನ ರಿಜಿಸ್ಟರಿನಲ್ಲಿ ಅವನ ಹುಟ್ಟು ಹಾಗೂ ಮದುವೆಯ ಬಗೆಗೆ ದಾಖಲೆಯಿದೆ; ಗ್ರಾಮರ್ ಸ್ಕೂಲಿನಲ್ಲಿ ಓದಿದ ಬಗೆಗೆ ದಾಖಲೆಯಿದೆ. ಎರಡು ಅಂತಸ್ತಿನ ಈ ಮನೆಯಲ್ಲಿ ಕೇವಲ ಆರೇಳು ಕೊಠಡಿಗಳಿದ್ದರೂ ಅವೆಲ್ಲ ಸಾಕಷ್ಟು ವಿಶಾಲವಾಗಿದ್ದು ಅದರ ಎತ್ತರ, ಅಗಲ, ಉದ್ದ ಇದೆಲ್ಲ ಷೇಕ್ಸ್‌ಪಿಯರ್ ತಂದೆಯ ಶ್ರೀಮಂತಿಕೆ ಸೂಚಿಸುವಂತಿವೆ. ಊರಿನ ಪುರಸಭೆಯಲ್ಲಿ ಪ್ರತಿಷ್ಠಿತ ಅಧಿಕಾರವಿದ್ದ ವ್ಯಕ್ತಿಯಾಗಿದ್ದ ಆತ ಸಾಕಷ್ಟು ದೊಡ್ಡ ಮನೆ ಕಟ್ಟಿಸಿಕೊಂಡಿದ್ದ. ನೆಲಕ್ಕೆ ಹಾಸುಗಲ್ಲುಗಳು, ಮರದ ದಿಮ್ಮಿ ಹಾಗೂ ಮಣ್ಣಿನ ಗಚ್ಚಿನಿಂದ ಕಟ್ಟಿದ ಗೋಡೆಗಳು, ಚಾವಣಿಗೆ ಹೆಂಚಿನ

ಹೊದಿಕೆಯಿದೆ. ಮನೆಯ ಸುತ್ತ ಒಂದು ಚಿಕ್ಕ ಉದ್ಯಾನವನವಿದ್ದು, ಅಲ್ಲಿ ನನಗೊಂದು ಆಶ್ಚರ್ಯ ಎದುರಾಯಿತು. ಒಂದು ಮೂಲೆಯಲ್ಲಿ ಕವಿ ರವೀಂದ್ರನಾಥ ಠಾಕೂರರ ಪ್ರತಿಮೆಯಿದೆ. ಜಗತ್ತಿನ ಉಳಿದ ಯಾವ ಕವಿಶ್ರೇಷ್ಠರ ಪ್ರತಿಮೆಯೂ ಇರದೆ, ಠಾಕೂರರ ಪ್ರತಿಮೆ ಮಾತ್ರ ಇಲ್ಲಿರುವುದಕ್ಕೆ ಕಾರಣವೇನೆಂದು ನನಗೆ ಹೊಳೆಯದಿದ್ದರೂ ಸಂತೋಷವಾಯಿತು. ಜೊತೆಯಲ್ಲಿದ್ದವರಿಗೆಲ್ಲಾ ತೋರಿಸಿದೆ.

ಷೇಕ್ಸ್‌ಪಿಯರ್ ವಿದ್ಯಾಭ್ಯಾಸ ಮಾಡಿದ 'ಗ್ರಾಮರ್ ಸ್ಕೂಲ್', ಈಗ 'ರಾಜ ಎಡ್ವರ್ಡ್ ಶಾಲೆ' ಎಂಬ ಹೆಸರಿನಿಂದ ಕರೆಯಲಾಗುತ್ತಿದೆ. ಷೇಕ್ಸ್‌ಪಿಯರ್ ಮಕ್ಕಳು ಮತ್ತು ಮೊಮ್ಮಕ್ಕಳಿಗೆ ಸೇರಿದ ಮನೆಗಳನ್ನು ಪ್ರವಾಸಿಗಳಿಗೆ ತೋರಿಸಲಾಗುತ್ತದೆ. ಷೇಕ್ಸ್‌ಪಿಯರ್ ಕೊನೆಗಾಲದಲ್ಲಿ ವಾಸವಾಗಿದ್ದ ಮನೆ ಹಾಗೂ ಆತನ ಸಮಾಧಿಯಿರುವ 'ಟ್ರನಿಟಿ ಚರ್ಚ್' ಸಹ ಪ್ರವಾಸಿಗಳ ಯಾತ್ರಾಸ್ಥಳಗಳು. ಆತನ ಸಮಾಧಿಯ ಹತ್ತಿರವೇ ಮಡದಿ ಹಾತ್‌ವೇ ಹಾಗೂ ಹಿರಿಯ ಮಗಳು ಸುಸಾನಳ ಸಮಾಧಿಗಳಿವೆ. ಸ್ಟ್ರಾಟ್‌ಫರ್ಡ್ ಅಪಾನ್ ಏವನ್ ಸಾಕಷ್ಟು ಪ್ರಾಚೀನ ಪಟ್ಟಣ. ರೋಮನ್ ಸಾಮ್ರಾಜ್ಯದ ಕಾಲದಿಂದಲೂ ಅದರ ಚರಿತ್ರೆಯಿದೆಯಾದರೂ ಸಮಕಾಲೀನ ಜಗತ್ತಿನಲ್ಲಿ ಅದು ಪ್ರಸಿದ್ಧಿ ಹೊಂದಿರುವುದು ಷೇಕ್ಸ್‌ಪಿಯರಿನ ಹುಟ್ಟೂರು ಎಂಬ ಕಾರಣಕ್ಕೆ. ಪ್ರತಿ ವರ್ಷ ಏಪ್ರಿಲ್ ೨೩ ರಂದು ಆಚರಿಸುವ ಅವನ ಜನ್ಮ ದಿನಾಚರಣೆಯಂದು ಜಗತ್ತಿನೆಲ್ಲೆಡೆಯಿಂದ ನಾಟಕ ಪ್ರೇಮಿಗಳು ಸೇರುತ್ತಾರೆ. ಮೆರವಣಿಗೆ, ನಾಟಕ ಪ್ರದರ್ಶನ, ಅಧ್ಯಯನ ಶಿಬಿರ, ಉಪನ್ಯಾಸಗಳು ನಡೆಯುತ್ತವೆ. ಈ ದೇಶದ ಜನತೆಗೆ ಷೇಕ್ಸ್‌ಪಿಯರ್ ಬಗೆಗೆ ಎಷ್ಟೊಂದು ಹೆಮ್ಮೆ ಎಂಬುದನ್ನು ತಿಳಿಯಲು ಅವನ ಹುಟ್ಟೂರನ್ನೇ ನೋಡಬೇಕು. ಇಲ್ಲಿನ ಹೋಟೆಲ್, ಅಂಗಡಿ, ಬೀದಿಗಳಿಗೆ ಷೇಕ್ಸ್‌ಪಿಯರ್‌ಗೆ ಸಂಬಂಧಿಸಿದ ಹೆಸರುಗಳಿವೆ. ಸುಮಾರು ಒಂದು ಲಕ್ಷಕ್ಕೂ ಮಿಗಿಲಾದ ಜನಸಂಖ್ಯೆಯಿರುವ ಈ ಪಟ್ಟಣದಲ್ಲಿ ಷೇಕ್ಸ್‌ಪಿಯರನ ನೆನಪಿಗೆ ಹೊರತಾದ ಪ್ರದೇಶವೇ ಇಲ್ಲವೆನ್ನಬಹುದು. ಏವನ್ ನದಿಯ ಮೇಲೆ ಪ್ರವಾಸಿಗರಿಗಾಗಿ ನಡೆಸುವ ದೋಣಿಗಳಿಗೂ ಅವನ ನಾಟಕಗಳ ಹೆಸರಿದೆ. ಷೇಕ್ಸ್‌ಪಿಯರ್ ಟ್ರಸ್ಟ್ ನಿರ್ವಹಿಸುತ್ತಿರುವ ಸ್ಮಾರಕ ಕಟ್ಟಡಗಳೆಲ್ಲಕ್ಕೂ ಪ್ರವೇಶ ಶುಲ್ಕವಿದ್ದು, ಈ ಹಣವೇ ಅವರಿಗೆ ಸಾಕಷ್ಟು ವರಮಾನ ತರುತ್ತದೆ.

'ರಾಯಲ್ ಷೇಕ್ಸ್‌ಪಿಯರ್ ಕಂಪನಿ' ಈ ಊರಿನಲ್ಲಿ ಷೇಕ್ಸ್‌ಪಿಯರ್ ನೆನಪನ್ನು ರಂಗಭೂಮಿಯ ಮೂಲಕ ಜೀವಂತವಾಗಿಟ್ಟಿರುವ ಸಂಸ್ಥೆ. ೧೮೭೯ರಲ್ಲಿ ಈ ಊರಿನ ಮದ್ಯ ತಯಾರಕ ಉದ್ಯಮಿ ಚಾರ್ಲ್ಸ್ ಎಡ್ವರ್ಡ್ ಫ್ಲೆವರ್ ಷೇಕ್ಸ್‌ಪಿಯರ್ ಸ್ಮಾರಕ ರಂಗಮಂದಿರ ನಿರ್ಮಿಸಲು ಸಾರ್ವಜನಿಕ ದೇಣಿಗೆ ಎತ್ತಿ, ಈ ಸಂಸ್ಥೆ ಹುಟ್ಟಿಗೆ ಕಾರಣನಾದ. ಆತ ಕಟ್ಟಿದ ರಂಗಮಂದಿರ ಸುಮಾರು ಐವತ್ತು ವರ್ಷಗಳ ಕಾಲ ಷೇಕ್ಸ್‌ಪಿಯರ್ ನಾಟಕಗಳ ಪ್ರದರ್ಶನಕ್ಕೆ ಮೀಸಲಾಗಿತ್ತು. ೧೯೨೬ರಲ್ಲಿ ಸಂಭವಿಸಿದ ಅಗ್ನಿ ಅನಾಹುತದಲ್ಲಿ ಈ ರಂಗಮಂದಿರ ಸಂಪೂರ್ಣವಾಗಿ ಸುಟ್ಟು ಭಸ್ಮವಾಯಿತಾದರೂ ಜಗತ್ತಿನಾದ್ಯಂತ ಷೇಕ್ಸ್‌ಪಿಯರ್ ಪ್ರೇಮಿಗಳು ರಂಗಮಂದಿರವನ್ನು ಪುನರ್ ನಿರ್ಮಿಸಲು ಉದಾರ ನೆರವು ನೀಡಿ ೧೯೩೨ರಲ್ಲಿ ಅದು ಮತ್ತೆ ಆರಂಭವಾಯಿತು. 'ರಾಯಲ್ ಷೇಕ್ಸ್‌ಪಿಯರ್ ಕಂಪನಿ'ಯ ಮತ್ತೊಂದು ರಂಗಮಂದಿರ 'ಸ್ವಾನ್ ಥಿಯೇಟರ್', ಚಾಚಿಕೊಂಡಿರುವ ರಂಗಸ್ಥಳವಿರುವ ವಿಶೇಷ ರೀತಿಯ ರಂಗಭೂಮಿ. ಗ್ರಂಥಭಂಡಾರ ಹಾಗೂ ಕಲಾ ಗ್ಯಾಲರಿಯೂ ಈ ಸಂಕೀರ್ಣದಲ್ಲಿದೆ. ಲಂಡನ್ ನಗರದ ಬಾಬ್ರಿಕನ್ ರಂಗಮಂದಿರವೂ 'ರಾಯಲ್ ಷೇಕ್ಸ್‌ಪಿಯರ್ ಕಂಪನಿಯ'ಯ ಒಡೆತನಕ್ಕೇ ಒಳಪಟ್ಟಿದ್ದು ನಿಯತವಾಗಿ ಅಲ್ಲಿಯೂ ಪ್ರದರ್ಶನಗಳಿರುತ್ತವೆ. ನಾಟಕ ಪ್ರದರ್ಶನವಲ್ಲದೆ ಷೇಕ್ಸ್‌ಪಿಯರ್ ಅಧ್ಯಯನ, ಪ್ರಚಾರದ ಸಲುವಾಗಿ ಈ ಸಂಸ್ಥೆ ವರ್ಷದುದ್ದಕ್ಕೂ ಹಲವಾರು ಕಾರ್ಯಕ್ರಮಗಳನ್ನು ನಡೆಸುತ್ತದೆ. 'ಷೇಕ್ಸ್‌ಪಿಯರ್ ಅಧ್ಯಯನ ಸಂಸ್ಥೆ' ಅಕಡೆಮಿಕ್ ಶಿಸ್ತಿಗೆ ಒಳಪಟ್ಟು ಆತನ ನಾಟಕ ಕಾವ್ಯ ಕುರಿತು ಸಂಶೋಧನೆಗೆ ಅವಕಾಶ ಕಲ್ಪಿಸಿದೆ. ಷೇಕ್ಸ್‌ಪಿಯರ್ ಅಧ್ಯಯನವನ್ನು ಕುರಿತ ಎಂ. ಎ. ಪದವಿ ಕೋರ್ಸ್, ಆತನ ಕಾಲದ ಸಾಂಸ್ಕೃತಿಕ ಪರಿಸರ ಹಾಗೂ ಇತಿಹಾಸ ಕುರಿತ ಅಧ್ಯಯನಗಳು ಈ ಸಂಸ್ಥೆಯ ಚೌಕಟ್ಟಿನಲ್ಲಿ ಸೇರುತ್ತವೆ. ನಾಟಕ ವಾಚನ, ಕಾವ್ಯ ವಾಚನ, ಚಿಕ್ಕ ಚಿಕ್ಕ ಅಧ್ಯಯನ ಶಿಬಿರಗಳು, ವಿಶೇಷ ಉಪನ್ಯಾಸಗಳು ವರ್ಷದುದ್ದಕ್ಕೂ ನಡೆಯುವುದಲ್ಲದೆ ಬೇಸಿಗೆಯ ನಾಲ್ಕು ತಿಂಗಳಿನಲ್ಲಿ (ಜೂನ್-ಸೆಪ್ಟೆಂಬರ್) ಇಲ್ಲಿ ಚಟುವಟಿಕೆಗಳು ತೀವ್ರವಾಗಿರುತ್ತವೆ. ರೆಪರ್ಟರಿಯ ನಟರು ಮತ್ತು ತಜ್ಞರಿಂದ ರಂಗ ತರಬೇತಿ ಶಿಬಿರಗಳು ನಡೆಯುತ್ತವೆ. ಇಂಗ್ಲಿಷ್ ಉಪಭಾಷೆಗಳ ಮೂಲಕ ಷೇಕ್ಸ್‌ಪಿಯರ್ ನಾಟಕಗಳ ಅಧ್ಯಯನ ನಡೆಸಲಾಗುತ್ತದೆ. ಕಂಪನಿಯ ನಟರು ತಮಗೆ ಪ್ರಿಯವೆನಿಸಿದ ನಾಟಕ ಸಂವಾದಗಳನ್ನು ಹಗಲು ಹೊತ್ತಿನಲ್ಲಿ ಪ್ರೇಕ್ಷಕರಿಗೆ ವಾಚನ ಮಾಡುತ್ತಾರೆ. ಮಕ್ಕಳಿಗಾಗಿ ದೊಡ್ಡವರಿಗಾಗಿ ರಂಗ ತರಬೇತಿಯ ಅಂಗವಾಗಿ ದೈಹಿಕ ಕಸರತ್ತುಗಳು, ಕತ್ತಿವರಸೆ, ನೃತ್ಯ, ಸಂಗೀತ, ರಂಗಸಜ್ಜಿಕೆ, ವಸ್ತ್ರವಿನ್ಯಾಸ ಮುಂತಾದವನ್ನು ಕುರಿತು ತರಬೇತಿ ಕೊಡಲಾಗುತ್ತದೆ. ಷೇಕ್ಸ್‌ಪಿಯರ್ ನಾಟಕಗಳ ಚಲನಚಿತ್ರ ಪ್ರದರ್ಶನ, ಅವುಗಳ ಬಗೆಗೆ ಚರ್ಚೆ, ವ್ಯಂಗ್ಯ ಚಿತ್ರ ಹಾಗೂ ರೇಖಾ ಚಿತ್ರಗಳ ಮೂಲಕ ಷೇಕ್ಸ್‌ಪಿಯರ್ ನಾಟಕಗಳ ಚಿತ್ರಣ, ಆತನ ಕಾಮೆಡಿಗಳನ್ನು ಆಶ್ರಯಿಸಿ ಹಾಸ್ಯ ಪ್ರಧಾನ ಕಾರ್ಯಕ್ರಮಗಳು, ಬೀದಿ ಉತ್ಸವಗಳು, ನೃತ್ಯ ಹಾಗೂ ಸಂಗೀತ ಕೂಟಗಳು – ಹೀಗೆ ನೂರಾರು ಕಾರ್ಯಕ್ರಮಗಳು ಈ ಮೂರು ತಿಂಗಳು ನಡೆಯುತ್ತವೆಯಾದುದರಿಂದ ಇದರಲ್ಲಿ ಭಾಗವಹಿಸಲು ನೋಡಲು ದೇಶ ವಿದೇಶಗಳಿಂದ ರಂಗ ಪ್ರೇಮಿಗಳು ಬರುತ್ತಾರೆ. ಬೇಸಿಗೆಯಲ್ಲಿ ಅಲ್ಲಿನ ಎಲ್ಲ ಗೆಸ್ಟ್ ಹೌಸ್‌ಗಳು, ಹೋಟೆಲ್, ಹಾಸ್ಟೆಲ್, 'ಮನೆ-ಅತಿಥಿ' ಅನುಕೂಲಗಳೆಲ್ಲ ಸಂಪೂರ್ಣವಾಗಿ ಬುಕ್ ಆಗಿರುತ್ತವೆ. ತಾತ್ಕಾಲಿಕ ಗುಡಾರಗಳನ್ನು ಹಾಕಿ ಕಾರ್ಯಕ್ರಮ ನಡೆಸಲು ಹಾಗೂ ಅತಿಥಿಗಳನ್ನು ಉಳಿಸಲು ವ್ಯವಸ್ಥೆ ಮಾಡುತ್ತಾರೆ.



*ಷೇಕ್ಸ್‌ಪಿಯರ್ ಹುಟ್ಟಿದ ಸ್ಥಳ*

ಷೇಕ್ಸ್‌ಪಿಯರ್ ಹುಟ್ಟೂರಿಗೆ ಭೇಟಿ ನೀಡಿದ ದಿನವೇ ನಾವು 'ರಾಯಲ್ ಷೇಕ್ಸ್‌ಪಿಯರ್ ಕಂಪನಿ'ಯ ಒಂದು ನಾಟಕ ಪ್ರದರ್ಶನ ನೋಡಬೇಕೆಂಬ ಆಸೆಯಿತ್ತಾದರೂ ನಮಗೆ ಅಂದಿಗೆ ಮುಂಗಡ ಟಿಕೆಟ್ ಕಾಯ್ದಿರಿಸಲು ಸಾಧ್ಯವಾಗಿರಲಿಲ್ಲ. ಮುಂದಿನ ತಿಂಗಳು ನಾಟಕ ಪ್ರದರ್ಶನಕ್ಕಾಗಿಯೇ ಒಂದು ದಿನ ನಿರ್ಧರಿಸಿ, ಮುಂಗಡವಾಗಿ ಟಿಕೆಟ್ ಖರೀದಿಸಿ, ಸಂಜೆ ಏಳುಗಂಟೆಯ ಹೊತ್ತಿಗೆ ಮನಸ್ಸಿಲ್ಲದ ಮನಸ್ಸಿನಿಂದ ನಾವು ಹಿಂದಿರುಗಬೇಕಾಯಿತು.

ಡಾ. ಕೆ. ಮರುಳಸಿದ್ದಪ್ಪ
೧೩೭, ೧೨ನೇ ಕ್ರಾಸ್, ಜೆ.ಪಿ. ನಗರ, ೨ನೇ ಹಂತ
ಬೆಂಗಳೂರು - ೫೬೦ ೦೭೮

# ಸ್ವಚ್ಛ ಬೆಂಗಳೂರಿನ ಹಿಂದಿನ ಕಣ್ಣೀರಿನ ಕತೆ

ಬೆಂಗಳೂರು ಮಹಾನಗರಪಾಲಿಕೆಯು ಬೆಂಗಳೂರನ್ನು ಸುಂದರಗೊಳಿಸಲು ಹೊರಟಿದೆ. ಬೆಂಗಳೂರು ಏರಿಯಾ ಟಾಸ್ಕ್ ಫೋರ್ಸ್ ಬೆಂಗಳೂರನ್ನು ಆಧುನಿಕಗೊಳಿಸಲು ಸಜ್ಜಾಗಿ ನಿಂತಿದೆ. ಆದರೆ ನಗರ ಸ್ವಚ್ಛಗೊಳಿಸುವುದರ ಹಿಂದೆ ಬಡ ಗುತ್ತಿಗೆ ಪೌರಕಾರ್ಮಿಕರ ಕಣ್ಣೀರ ಕತೆ ಹೆಚ್ಚಿನ ಜನರಿಗೆ ತಿಳಿದಿಲ್ಲ. ಬೆಂಗಳೂರು ಮಹಾನಗರ ಪಾಲಿಕೆಯು ನಗರದ ಸ್ವಚ್ಛತಾ ಕಾರ್ಯವನ್ನು ಖಾಸಗೀ ಗುತ್ತಿಗೆದಾರರಿಗೆ ವಹಿಸಿ ೧೦ ವರ್ಷಗಳ ಮೇಲಾಗಿದೆ. ಈ ಗುತ್ತಿಗೆ ಮಾಲೀಕರು ಗುತ್ತಿಗೆ ಕರಾರಿನ ನಿಬಂಧನೆಗಳು, ಗುತ್ತಿಗೆ ಕಾರ್ಮಿಕರ ನಿಯಂತ್ರಣ ಹಾಗು ರದ್ದತಿ ಕಾಯ್ದೆ ೧೯೭೦ರ ನಿಯಮಾವಳಿಗಳನ್ನೆಲ್ಲ ಗಾಳಿಗೆ ತೂರಿ ಕಾರ್ಮಿಕರನ್ನು ಗುಲಾಮರಂತೆ ನಡೆಸಿಕೊಳ್ಳುತ್ತಾ ಬಂದಿದ್ದಾರೆ.

ನಗರವನ್ನು ಸ್ವಚ್ಛಗೊಳಿಸುವ ಕಾರ್ಯದಲ್ಲಿ ಸುಮಾರು ೬೦೦೦ ಗುತ್ತಿಗೆ ಪೌರಕಾರ್ಮಿಕರು ಕೆಲಸ ಮಾಡುತ್ತಿದ್ದು ಹೆಚ್ಚು ಕಡಿಮೆ ಎಲ್ಲರೂ ದಲಿತರು, ಅನಕ್ಷರಸ್ಥರು. ಅವರಲ್ಲಿ ಶೇ. ೮೦ ಕ್ಕಿಂತ ಹೆಚ್ಚಿನವರು ಮಹಿಳೆಯರು. ಕೆಲಸದ ಭದ್ರತೆ ಇಲ್ಲದೆ, ಕನಿಷ್ಠ ಕೂಲಿ, ಕನಿಷ್ಠ ಸೌಲಭ್ಯಗಳಾದ ಗಂ ಬೂಟ್ಸ್, ಗ್ಲೌಸುಗಳು, ಸಮವಸ್ತ್ರ, ಗುರುತಿನ ಚೀಟಿ, ಅಗತ್ಯ ಸಲಕರಣೆಗಳು ಯಾವುದೂ ಇಲ್ಲದೆ ಚಳಿ-ಮಳೆ-ಗಾಳಿ, ಬಿಸಿಲೆನ್ನದೆ ದುಡಿಯುವ ಕಾರ್ಮಿಕರು ಕೊಳಚೆಗೇರಿಗಳಲ್ಲಿ ದಾರುಣ ಬದುಕು ನಡೆಸುತ್ತಾರೆ. ಹತ್ತು ವರ್ಷಗಳಿಂದ ಕನಿಷ್ಠ ಕೂಲಿ ತಿಂಗಳಿಗೆ ರೂ. ೨,೧೪೬/-ಕ್ಕೆ ಬದಲಾಗಿ ಕೇವಲ ೮೦೦-೯೦೦ ಹೆಚ್ಚೆಂದರೆ ರೂ. ೧,೦೦೦/- ದಿಂದ ೧,೧೦೦/- ನೀಡಿ ಬಡಕಾರ್ಮಿಕರ ಹೊಟ್ಟೆ ಮೇಲೆ ಹೊಡೆದು ಪ್ರತಿ ತಿಂಗಳು ಲಕ್ಷಾಂತರ ರೂ.ಗಳ ಲಾಭ ದೋಚುತ್ತಿರುವ ಗುತ್ತಿಗೆ ಮಾಲೀಕರು ಬಂಗ್ಲೆಗಳಲ್ಲಿ ಐಷಾರಾಮಿ ಜೀವನ ನಡೆಸುತ್ತಿದ್ದಾರೆ.

ಶೇ. ೮೦ರಷ್ಟು ಗುತ್ತಿಗೆಯನ್ನು ಒಂದೇ ಮೇಲ್ಜಾತಿ(ರೆಡ್ಡಿ) ಕುಟುಂಬದವರು ಪಡೆದಿದ್ದಾರೆ. ಅವಾಚ್ಯ ಶಬ್ದಗಳಿಂದ ಬಯ್ದು ಪ್ರಾಣಿಗಳಿಗಿಂತಲೂ ಕೀಳಾಗಿ ಕಾಣುವ ಮಾಲೀಕರಡಿ ಕೆಲಸಗಾರರು ಕೆಲಸ ಮಾಡುತ್ತಾರೆ. Manholeಗಳನ್ನು ಸ್ವಚ್ಛಗೊಳಿಸುವಾಗ ಉಸಿರುಗಟ್ಟಿ ಸತ್ತಿರುವ ಕಾರ್ಮಿಕರ ಸಂಖ್ಯೆ ೫೦ಕ್ಕಿಂತ ಹೆಚ್ಚು. ಕಸದ ಲಾರಿಯಲ್ಲಿ ಹೋಗುವಾಗ ವಿದ್ಯುತ್ ವಯರ್ ತಗುಲಿ ಸತ್ತವರಿದ್ದಾರೆ. ಇವರ ಜೀವನಕ್ಕೆ ಮಾಲೀಕರು ಬಿಸಾಕುವ ಪರಿಹಾರ ಧನ ೨೦೦೦, ೫೦೦೦. ಕಸಕ್ಕೆ ಬೆಂಕಿ ಹಾಕುವಾಗ ಮೈಗೆ ಬೆಂಕಿ ತಗುಲಿ ಸತ್ತ ಮಹಿಳೆಯರಿದ್ದಾರೆ. ಮೇಲಿನವರಿಂದ ಲೈಂಗಿಕ ದೌರ್ಜನ್ಯಕ್ಕೂ ಮಹಿಳಾ ಕಾರ್ಮಿಕರು ಒಳಗಾಗಿದ್ದಾರೆ. ಬಸಿರಿ ಹೆಣ್ಣು ಮಕ್ಕಳು ೯ ತಿಂಗಳವರೆಗೂ ಕೆಲಸ ಮಾಡಿ, ಮಗು ಹುಟ್ಟಿದ ೨-೩ ತಿಂಗಳ ನಂತರ ಮತ್ತೆ ಕೆಲಸ ಮಾಡುತ್ತಾರೆ. ಈ ಸಮಸ್ಯೆಗಳಲ್ಲದೆ ಮಾಲೀಕರು, ಮೇಲಿನವರು, ನಾಗರಿಕರು ಇವರನ್ನು ಅಸ್ಪೃಶ್ಯರಂತೆ ಕಾಣುತ್ತಾರೆ. ಸರ್ಕಾರಿ ಸಂಸ್ಥೆಯ ಒಡೆತನದಲ್ಲಿ ಕನಿಷ್ಠ ವೇತನವೂ ಜಾರಿಗೆ ಬರದಿರುವುದು ನಾಚಿಕೆಗೇಡಿನ ವಿಷಯ.

ತಮ್ಮದೇ ಸಂಘ ಕಟ್ಟಿ ಎಡಬಿಡದೆ ಹೋರಾಟ ನಡೆಸಿದ್ದರ ಪರಿಣಾಮವಾಗಿ ಪಾಲಿಕೆಯ ಆಯುಕ್ತರು ದಿನಾಂಕ ೧೩-೮-೨೦೦೧ ರಂದು "ಗುತ್ತಿಗೆ ಕಾರ್ಮಿಕರ ನಿಯಂತ್ರಣ ಹಾಗು ರದ್ದತಿ ಆಕ್ಟ್ ೧೯೭೦ರ ಸೆಕ್ಷನ್ ೨೦ ರಂತೆ ಕೆಲಸ ನಿರ್ವಹಿಸುವ ಕಾರ್ಮಿಕರಿಗೆ ಕನಿಷ್ಠ ವೇತನ ಪಾವತಿಯಾಗುವಂತೆ ನೋಡಿಕೊಳ್ಳುವುದು ಪ್ರಧಾನ ಉದ್ಯೋಗ ನೀಡುವ ಸಂಸ್ಥೆಯ (ಅಂದರೆ ಮಹಾನಗರ ಪಾಲಿಕೆ) ಕರ್ತವ್ಯವಾಗಿರುವುದರಿಂದ, ವಾರ್ಡ್‌ವಾರು ವೇತನ ಪಾವತಿ ಮಾಡುವ ಬಗ್ಗೆ ನಿಗದಿತ ಕಾರ್ಯಕ್ರಮದ ಅನುಬಂಧವನ್ನು ತಯಾರಿಸಿ ಆದೇಶ ಹೊರಡಿಸಿ ಅದರಲ್ಲಿ ಆಗಸ್ಟ್ ತಿಂಗಳಿನಿಂದಲೇ ಜಾರಿಗೆ ಬರುವಂತೆ ನಗರಪಾಲಿಕೆ ವ್ಯಾಪ್ತಿಯಲ್ಲಿ ಗುತ್ತಿಗೆ ಪಡೆದಿರುವ ಎಲ್ಲಾ ಗುತ್ತಿಗೆದಾರರು ಅದರ ವ್ಯಾಪ್ತಿಯಲ್ಲಿ ಕೆಲಸ ನಿರ್ವಹಿಸುತ್ತಿರುವ ಕಾರ್ಮಿಕರಿಗೆ ವೇತನವನ್ನು ಕ್ರಾಸ್ ಮಾಡಿದ ಚೆಕ್‌ಗಳ ಮುಖಾಂತರ ಅವರವರ ಹೆಸರಿನಲ್ಲಿ ನೀಡಲು ಸೂಚಿಸಲಾಗಿದೆ ಹಾಗು ಈ ಪಾವತಿಯು ನಿಗದಿತ ವೇಳೆ, ದಿನಾಂಕ ಹಾಗೂ ನಿಗದಿತ ಸ್ಥಳದಲ್ಲಿ ಆಯಾ ಆರೋಗ್ಯ ವೈದ್ಯಾಧಿಕಾರಿಗಳ ಸಮ್ಮುಖದಲ್ಲಿ ಪಾವತಿಸಲು ಸೂಚಿಸಲಾಗಿದೆ" ಎಂದು ತಿಳಿಸಿದ್ದಾರೆ.

ಈ ಆದೇಶ ಹೊರಡಿಸಿದ ಮೇಲೂ ಕಾರ್ಮಿಕರಿಗೆ ಕನಿಷ್ಠ ವೇತನ ಪಾವತಿಯಾಗದಿದ್ದುದರಿಂದ ಕಾರ್ಮಿಕರು ಮತ್ತೆ ಪ್ರತಿಭಟಿಸಿದ್ದರಿಂದ ಆಯುಕ್ತರು ಮತ್ತೊಮ್ಮೆ ದಿನಾಂಕ ೧೪-೧೨-೨೦೦೧ರಂದು ಆದೇಶ ಹೊರಡಿಸಿದರು. ಈ ಆದೇಶದಲ್ಲಿ "ಎಲ್ಲಾ ಆರೋಗ್ಯಾಧಿಕಾರಿಗಳಿಗೆ, ಕಾರ್ಮಿಕರಿಗೆ ಪ್ರತಿ ತಿಂಗಳು ೧೭ನೇ ತಾರೀಖಿನ ಒಳಗೆ ನಿಗದಿಪಡಿಸಿರುವ ಕನಿಷ್ಠ ವೇತನವನ್ನು ಕಡ್ಡಾಯವಾಗಿ ನಗದು ಅಥವಾ ಚೆಕ್ ಮೂಲಕ ವಿತರಿಸುವಂತೆ ಗುತ್ತಿಗೆದಾರರಿಗೆ ಸೂಚನೆ ನೀಡುವುದು ಮತ್ತು ಈ ಬಗ್ಗೆ ಸೂಕ್ತ ಉಸ್ತುವಾರಿ ನಡೆಸಿ ವೇತನ ಪಾವತಿ ಬಗ್ಗೆ ಖಚಿತ ಪಡಿಸಿಕೊಳ್ಳುವುದು. ಪ್ರತಿವಾರ್ಡಿನ ಕಛೇರಿಯಲ್ಲಿ ನಿಗದಿತ ವೇಳೆಯಲ್ಲಿ ವೇತನ ಪಾವತಿ ಮಾಡುವುದು ಮತ್ತು ಇದನ್ನು ಆರೋಗ್ಯ ಪರಿವೀಕ್ಷಕರ/ಕಿರಿಯ ಆರೋಗ್ಯ ಪರಿವೀಕ್ಷಕರ ಸಮ್ಮುಖದಲ್ಲಿ ವಿತರಿಸುವುದು ಮತ್ತು ಹಾಗೆ ವಿತರಿಸುವುದನ್ನು ಖಚಿತ ಮಾಡಿಕೊಳ್ಳುವುದು, ಗುತ್ತಿಗೆದಾರರು ಯಾವುದೇ ಕಾರಣಕ್ಕೂ ಬಿಲ್ಲನ್ನು ಸಲ್ಲಿಸಿಲ್ಲವೆಂಬ ಆಧಾರದ ಮೇಲೆ ಯಾವುದೇ ಕಾರಣಕ್ಕೂ ತಡೆ ಹಿಡಿಯತಕ್ಕದ್ದಲ್ಲ ಅಥವಾ ಮುಂದೂಡತಕ್ಕದ್ದಲ್ಲ, ಗುತ್ತಿಗೆದಾರರು ಕಾರ್ಮಿಕರೊಂದಿಗೆ ಸೌಜನ್ಯದಿಂದ ವರ್ತಿಸಲು, ದೂರು ಬರದಂತೆ" ನೋಡಿಕೊಳ್ಳಲು ಸೂಚಿಸಿದ್ದರು.

ಈ ಆದೇಶಗಳಾದ ಮೇಲೂ ಗುತ್ತಿಗೆದಾರರು ಯಾವ ವಾರ್ಡಿನಲ್ಲೂ ಕನಿಷ್ಠ ವೇತನವನ್ನು ನೀಡಿಲ್ಲ. ಗೂಂಡಾಗಳನ್ನು ಬಳಸಿಕೊಂಡು ಕಾರ್ಮಿಕರನ್ನು ಬೆದರಿಸಿ, ಹಳೆ ಸಂಬಳವನ್ನೆ ತೆಗೆದುಕೊಳ್ಳಲು ಒತ್ತಾಯಿಸುತ್ತಿದ್ದಾರೆ. ರಸ್ತೆ ಕಸ ಗುಡಿಸುವುದು, ಮೋರಿಗಳನ್ನು ಸ್ವಚ್ಛಗೊಳಿಸುವುದು, ಮನೆ ಮನೆಗೆ ಹೋಗಿ ಸಂಗ್ರಹಿಸಿ ಲಾರಿ ಇರುವಲ್ಲಿಗೆ ತಲುಪಿಸುವುದು, ಕಳೆ ಕೀಳುವುದು, ರಸ್ತೆ ಬದಿಯ ಕಲ್ಲು ಮಣ್ಣು ಎತ್ತಿ ಹಾಕುವುದು – ಈ ಎಲ್ಲಾ ಕೆಲಸಗಳನ್ನು ಬರಿ ಪೊರಕೆ, ಮಣ್ಣು ಮಕ್ಕರಿ, ಕಸ ಬಾಚುವ ತಗಡು, ಕೈಗಾಡಿ ಇವಿಷ್ಟರಲ್ಲೇ ನಿರ್ವಹಿಸುತ್ತಾರೆ. ಗಂ ಬೂಟ್‌ಗಳು, ಗ್ಲೌಸುಗಳು, ಸಸಿಕೆ, ಮಾಸ್ಕ್, ಯೂನಿ ಫಾರಂ, ಬ್ಯಾಡ್ಜ್, ಕುಡುಗೋಲು, ಬಕೆಟ್‌ಗಳು, ಕಕ್ಕಸು ತೊಳೆಯುವ ಬ್ರಶ್‌ಗಳು, ಉದ್ದನೆ ಪೊರಕೆ, ಮಣ್ಣು ಕೆತ್ತುವ ಪರಿಕರಗಳು, ಪ್ರಥಮ ಚಿಕಿತ್ಸಾ ಸೌಲಭ್ಯ ಇವೆಲ್ಲವು ಟೆಂಡರ್ ಕರೆದಾಗ ಗುತ್ತಿಗೆದಾರರು ನೀಡುವ ಪಟ್ಟಿಯಲ್ಲಿ ಮಾತ್ರ ಇರುತ್ತವೆ.

ನಗರ ಸ್ವಚ್ಛವಾಗುವುದಿಲ್ಲವೆಂದು ಗೊಣಗುವ, ನಗರವನ್ನು ಸ್ವಚ್ಛಗೊಳಿಸಿ ಎಂದು ಓಟ ನಡೆಸುವ ನಾಗರಿಕರು, ಕಾರ್ಮಿಕರು ಎಂತಹ ಸ್ಥಿತಿಯಲ್ಲಿ ಕೆಲಸ ಮಾಡುತ್ತಾರೆಂದು ತಿಳಿದುಕೊಳ್ಳುವ ಅಗತ್ಯವಿದೆ. ತೊಟ್ಟಿಗಳಲ್ಲಿ ಕಸ ಹಾಕದೆ ಎಲ್ಲೆಂದರಲ್ಲಿ ಕಸ ಹಾಕುವ, ಕಸವನ್ನು ಬೇರೆ ಬೇರೆ ಮಾಡದೆ ಒಡೆದ ಸೀಸಗಳು, ಗಾಜುಗಳು, ಮಕ್ಕಳ ಕಕ್ಕಸು ಬಟ್ಟೆಗಳು ಎಲ್ಲವನ್ನೂ ಹೇಗೆಂದರೆ ಹಾಗೆ ಬಿಸಾಡುವ ನಾಗರಿಕರು ಬಡ ಕಾರ್ಮಿಕರ ಕಣ್ಣೀರ ಕತೆಯ ಕಡೆ ಗಮನ ಹರಿಸುವುದೊಳ್ಳೆಯದು.

ಕನಿಷ್ಠ ಕೂಲಿಯನ್ನು ನೀಡದೆ, ಮೂಲಭೂತ ಸೌಲಭ್ಯ, ಅಕ್ಷರತೆ, ಆರೋಗ್ಯ, ಕೆಲಸದ ಭದ್ರತೆಯನ್ನು ನೀಡದೆ ಬಡ ಕಾರ್ಮಿಕರನ್ನು ಶೋಷಿಸುವ ವ್ಯವಸ್ಥೆಯ ವಿರುದ್ಧ ಇನ್ನೂ ಕ್ರಮ ತೆಗೆದುಕೊಳ್ಳದಿರುವುದು ಬಹುದೊಡ್ಡ ಪ್ರಜಾಪ್ರಭುತ್ವದ ಜಾತ್ಯಾತೀತ ದೇಶಕ್ಕೆ ಅವಮಾನ.

ಸರಸ್ವತಿ . ದು
೧೧೯, ಪ.ಕಾ.ರ., ೨ನೇ ಹಂತ, ಮಹಾಲಕ್ಷ್ಮಿಪುರ
ಬೆಂಗಳೂರು - ೫೬೦ ೦೮೬



**ವಿಶ್ವ ವೀಕ್ಷಣೆ**

## ಭಾರತ ಪಾಕಿಸ್ತಾನ :

# ನೇರ ಮಾತುಕತೆಯೊಂದೇ ಸೂಕ್ತ ಮಾರ್ಗ



**ದ**ಕ್ಷಿಣ ಏಶಿಯ ರಾಷ್ಟ್ರಗಳ ಶೃಂಗಸಭೆ ಜರುಗಿದ್ದು ಭಾರತ-ಪಾಕಿಸ್ತಾನಗಳ ಮಧ್ಯೆ ಯುದ್ಧದ ಕಾರ್ಮೋಡ ಕವಿದಿದ್ದ ಹಿನ್ನೆಲೆಯಲ್ಲೇ. ಎರಡು ವರ್ಷಗಳ ನಂತರ ನಡೆದ ಈ ಸಮ್ಮೇಳನ ಅತಿಮುಖ್ಯವಾದ ಆರ್ಥಿಕ, ಸಾಂಸ್ಕೃತಿಕ ಸಹಕಾರದತ್ತ ಮುನ್ನಡೆಯುವುದರಲ್ಲಿ ಹೆಚ್ಚಿನ ಫಲಿತಾಂಶವನ್ನೇನೂ ನೀಡಲಾಗದೇ ಹೋದದ್ದು ಅದರಿಂದಾಗಿಯೇ. ಸಮ್ಮೇಳನ ಅಂಗೀಕರಿಸಿದ ಪ್ರಕಟಣೆ ಕೇವಲ ಸದಾಶಯಗಳ ಔಪಚಾರಿಕ ದಸ್ತಾವೇಜು ಆದದ್ದು ಅನಿರೀಕ್ಷಿತವೇನಲ್ಲ. ಉಪಖಂಡದ ಎರಡು ಪ್ರಮುಖ ರಾಷ್ಟ್ರಗಳ ನಡುವಣ ವೈಮನಸ್ಸು ಇಡೀ ಪ್ರದೇಶದ ಮೇಲೆ ಎಂಥ ಪರಿಣಾಮ ಉಂಟುಮಾಡಬಲ್ಲದು ಎಂಬುದನ್ನು ಅದು ಮತ್ತೊಮ್ಮೆ ಎತ್ತಿ ತೋರಿಸಿತು. ಅದೇ ಸಮಯದಲ್ಲಿ ಈ ಶೃಂಗ ಸಮಾವೇಶದಲ್ಲಿ ಎರಡೂ ರಾಷ್ಟ್ರಗಳ ವರಿಷ್ಠರ ಹಸ್ತಲಾಘವ, ಕೆಲ ನಿಮಿಷಗಳ ವಿಚಾರ ವಿನಿಮಯ, ಉದ್ರಿಕ್ತತೆಯನ್ನು ಉಪಶಮನಗೊಳಿಸುವುದಕ್ಕೆ ಎಲ್ಲ ದ್ವಾರಗಳೂ ಮುಚ್ಚಿಲ್ಲ ಎನ್ನುವುದೂ ವ್ಯಕ್ತಗೊಂಡಿತು.

ಪಾಕಿಸ್ತಾನದ ಅಧ್ಯಕ್ಷ ಜನೆರಲ್ ಮುಷಾರಫ್ ಜನವರಿ ೧೨ರಂದು ತಮ್ಮ ಭಾಷಣದಲ್ಲಿ ಮಾಡಿರುವ ಪ್ರಸ್ತಾವಗಳು ಆ ವಿಶ್ವಾಸವನ್ನು ದೃಢಪಡಿಸಿವೆ. ಅವಕ್ಕೆ ಭಾರತದ ಎಚ್ಚರದ ಪ್ರತಿಕ್ರಿಯೆಯೂ ಪೂರಕವಾಗಿದೆ. ಭಾರತ-ಪಾಕಿಸ್ತಾನಗಳ ನಡುವೆ ಇರುವ ಎಲ್ಲ ವಿವಾದಾಸ್ಪದ ವಿಷಯಗಳನ್ನೂ ನೇರವಾದ ಮಾತುಕತೆಗಳಿಂದ ಬಗೆಹರಿಸುವುದನ್ನು ಉಳಿದು ಅನ್ಯಮಾರ್ಗವಿಲ್ಲ. ಕಳೆದ ಐವತ್ತು ವರ್ಷಗಳಿಂದಲೂ ಬೆಳೆದುಬಂದಿರುವ ವಿವಾದಗಳು, ವೈಮನಸ್ಯ , ಪರಸ್ಪರ ಅವಿಶ್ವಾಸ ಇವೆಲ್ಲ ಒಮ್ಮೆಗೇ ಬಗೆಹರಿದೀತೆಂದು ಭಾವಿಸುವುದು ಸರಿಯಲ್ಲ. ಕೆಲವರು ಭಾವಿಸಿರುವಂತೆ ಯುದ್ಧ ಅದಕ್ಕೆ ಖಂಡಿತ ಮದ್ದಲ್ಲ. ಯುದ್ಧ ಹೊಸ ಸಮಸ್ಯೆಗಳನ್ನು ಹುಟ್ಟುಹಾಕೀತೇ ಹೊರತು ಇರುವುವನ್ನು ಬಗೆಹರಿಸದು. ಪಾಕಿಸ್ತಾನದೊಂದಿಗೆ ಮೂರು ಯುದ್ಧಗಳು ಈಗಾಗಲೇ ಆಗಿವೆ ಎನ್ನುವುದನ್ನು ನೆನಪಿನಲ್ಲಿರಿಸಿಕೊಳ್ಳಬೇಕು. ಅಂಥ ಯುದ್ಧದಿಂದ ಲಾಭವಾಗುವುದು ಇಂದಿನ ಪರಿಸ್ಥಿತಿಯಲ್ಲಿ ಮೂರನೆಯವರಿಗೇ. ಮತ್ತೆ ಯುದ್ಧ ಎನ್ನುವುದು ಮಕ್ಕಳಾಟಿಕೆಯಲ್ಲ, ಅದರ ಎಲ್ಲ ಪರಿಣಾಮಗಳಿಂದ ಚೇತರಿಸಿಕೊಳ್ಳಲು ತೆರಬೇಕಾಗುವ ಬೆಲೆ ದುಬಾರಿ. ದೇಶಪ್ರೇಮದ ಸೋಗಿನಲ್ಲಿ ರಣಕಹಳೆ ಊದುತ್ತಿರುವವರು ತಮ್ಮ ಸಂಕುಚಿತ ಉದ್ದೇಶಗಳ ಸಾಧನೆಗಾಗಿ ಪ್ರಯತ್ನಿಸುತ್ತಿರುವ ಫಾಸಿಸ್ಟ್ ಮನೋಭಾವದವರು ಮಾತ್ರ.

ಮುಷಾರಫ್ ಭಾಷಣದಲ್ಲಿ ಕಾಳೆಷ್ಟು ಜೊಳ್ಳೆಷ್ಟು ಎಂದು ಲೆಕ್ಕ ಹಾಕುವುದಾಗಲೀ, ಆತನ ಪ್ರಾಮಾಣಿಕತೆಯನ್ನು ಪ್ರಶ್ನಿಸುತ್ತಾ ಕೂಡುವುದಾಗಲೀ ಸರಿಯಾಗದು. ಡಿಸೆಂಬರ್ ೧೩ರಂದು ಪಾರ್ಲಿಮೆಂಟ್‌ನ ಮೇಲೆ ನಡೆದ ಭಯೋತ್ಪಾದಕ ದಾಳಿಯಿಂದಾಗಿ ಭಾರತೀಯರ ಆಕ್ರೋಶ ಸಹಜವೆ. ಅದರಿಂದಾಗಿಯೇ ಸರ್ಕಾರ ಅನಂತರ ಕೈಗೊಂಡ ಕ್ರಮಗಳಿಗೆ ಪಕ್ಷಾತೀತವಾದ ಬೆಂಬಲ ದೊರೆಯಿತು. ಇಂದು ಎರಡೂ ದೇಶಗಳ ಸೈನ್ಯಗಳು ಗಡಿಪ್ರದೇಶಗಳಲ್ಲಿ ಜಮಾಯಿಸಿವೆ. ಯಾವುದೇ ಅಚಾತುರ್ಯದಿಂದ ಪರಿಸ್ಥಿತಿ ಆಸ್ಫೋಟಗೊಳ್ಳುವ ಭೀತಿ ಇಲ್ಲದಿಲ್ಲ. ಇಂಥ ಸನ್ನಿವೇಶದಲ್ಲಿ ಪರಿಸ್ಥಿತಿಯನ್ನು ಉಪಶಮನಗೊಳಿಸಲು ಮುತ್ಸದ್ದಿತನ ತೋರದೇ ಹೋದಲ್ಲಿ ಮಧ್ಯೆ ಪ್ರವೇಶಿಸಲು ಸಮಯ ಕಾಯುತ್ತ ಕುಳಿತಿರುವ ಅಮೆರಿಕದ ಮಧ್ಯಪ್ರವೇಶಕ್ಕೆ ಅವಕಾಶ ಮಾಡಿಕೊಟ್ಟ ಹಾಗಾಗುತ್ತದೆ. ಭಯೋತ್ಪಾದಕರ ವಿರುದ್ಧವಾಗಿ ಉಗ್ರಕ್ರಮ ಕೈಗೊಳ್ಳುತ್ತಿರುವಾಗಲೇ ಭಾರತ ಸರಕಾರ ಮಾತುಕತೆಗಳಿಗೆ ಮಾರ್ಗ ತೆರೆಯುವುದೂ ಅತ್ಯಗತ್ಯ. ಯಾವುದೇ ರಾಷ್ಟ್ರವಾಗಲಿ ಅದಕ್ಕೆ ತನ್ನದೇ ಆದ ರಾಜಕೀಯ ಒತ್ತಡಗಳಿರುತ್ತವೆ. ಪಾಕಿಸ್ತಾನದ ಪರಿಸ್ಥಿತಿಯಲ್ಲಿ ಅಧಿಕಾರಾರೂಢವಾಗಿರುವ ಜನರಲ್ ಮುಷಾರಫ್ ಮೇಲೆಯೂ ದೀರ್ಘಕಾಲದಿಂದ ಬೇರೂರಿರುವ ಇಸ್ಲಾಂ ಮೂಲಭೂತವಾದಿಗಳ ಒತ್ತಡವಿದೆ. ಅದೇ ರೀತಿಯಲ್ಲಿ ಹಿಂದಿನಿಂದ ಬೆಳೆದುಬಂದಿರುವ ವಿವಾದಗಳನ್ನು ಕೈಬಿಡುವುದು ಸುಲಭವಲ್ಲ. ಇದನ್ನು ಗಮನದಲ್ಲಿರಿಸಿಕೊಂಡು ಮುಂದಿನ ಹೆಜ್ಜೆ ಇರಿಸಬೇಕು.

ಮುಷಾರಫ್ ಭಾಷಣದಲ್ಲಿನ ಪ್ರಸ್ತಾವಗಳಿಗೆ ಅಮೆರಿಕ ಮತ್ತು ಪಶ್ಚಿಮ ರಾಷ್ಟ್ರಗಳ ಒತ್ತಡವೇ ಕಾರಣ ಎನ್ನುವುದಕ್ಕೆ ಹೆಚ್ಚು ಒತ್ತು ಕೊಡುವವರಿದ್ದಾರೆ. ಭಾರತದ ಮೇಲೆ ಅಂಥ ಒತ್ತಡವಿಲ್ಲದೇಹೋಗಿದೆಯೇ ? ಬಾಯಿ ಉಪಚಾರಕ್ಕಾಗಿ ವಾಜಪೇಯಿ ಮತ್ತು ಅವರ ಸಹೋದ್ಯೋಗಿಗಳು ತಾವು ಅಮೆರಿಕದ ಒತ್ತಡಕ್ಕೆ ಮಣಿಯುವುದಿಲ್ಲ ಎಂದು ಹೇಳುತ್ತಾರೆ. ಅದು ಜನರನ್ನು ಮೋಸಗೊಳಿಸಲು ಅಷ್ಟೆ. ಜಾರ್ಜ್ ಬುಷ್ ದೂರವಾಣಿ ಮೂಲಕ ಸಂಪರ್ಕಿಸುತ್ತಿದ್ದುದು, ಅದ್ವಾನಿಯವರು ಅಮೆರಿಕಕ್ಕೆ ಧಾವಿಸಿದ್ದು, ಈಗ ಹಿಂದೆಯೇ ಜಾರ್ಜ್ ಫರ್ನಾಂಡಿಸ್ ಹೊರಟಿರುವುದು, ಅಮೆರಿಕದಿಂದ ವಿದೇಶಾಂಗ ಕಾರ್ಯದಲ್ಲಿ ಪೊವೆಲ್ ಉಪಖಂಡಕ್ಕೆ ಭೇಟಿ ನೀಡುತ್ತಿರುವುದು, ಇವೆಲ್ಲ ಸುಮ್ಮನೇ ಏನಲ್ಲ. ಭಾರತದ ಉಪಖಂಡದಲ್ಲಿ ತನ್ನ ಪ್ರತಿಷ್ಠೆಯನ್ನು ಭದ್ರವಾಗಿ ಸ್ಥಾಪಿಸಿಕೊಳ್ಳಲು ಅಮೆರಿಕ ಮೊದಲಿನಿಂದಲೂ ಪ್ರಯತ್ನಿಸಿದೆ. ಈಗ ಅದಕ್ಕೆ ಅವಕಾಶ ದೊರೆತಂತಾಗಿದೆ.

ಕಳೆದ ಸೆಪ್ಟೆಂಬರ್ ೧೧ರ ನಂತರ ಭಯೋತ್ಪಾದನೆಯ ವಿರುದ್ಧ ಅಮೆರಿಕ ನಡೆಸಿರುವ ಸಮರದಿಂದ ಅಂತರರಾಷ್ಟ್ರೀಯ ಪರಿಸ್ಥಿತಿಯಲ್ಲಿ ಹೊಸ ಬದಲಾವಣೆ ಉಂಟಾಗಿದೆ. ಹತ್ತು ವರ್ಷಗಳ ಹಿಂದೆ ಜಗತ್ತಿನ ಏಕೈಕ ಬಲಿಷ್ಠ ರಾಷ್ಟ್ರವಾಗಿ ಉಳಿದ ಅಮೆರಿಕ ತನ್ನ ಆಣತಿ ಮೀರುವ ಯಾವುದೇ ರಾಷ್ಟ್ರವನ್ನು ಮಣಿಸಲು ಶಕ್ತವಾಗಿದೆ. ಅದು ನಡೆಸಿರುವ ದೌರ್ಜನ್ಯವನ್ನು ವಿರೋಧಿಸುವವರೇ ಇಲ್ಲದಂತಾಗಿದೆ. ಇರಾಕಿನ ಮೇಲಿನ ದಾಳಿಯ ನಂತರ ಆಫ್ಘಾನಿಸ್ತಾನದ ಮೇಲೆ ನಡೆಸಿದ ದಾಳಿ ಅದಕ್ಕೆ ನಿದರ್ಶನ. ಭಾರತ ಉಪಖಂಡದ ಮಟ್ಟಿಗೆ ಹೇಳುವುದಾದರೆ ಅಮೆರಿಕದ ಸೇನೆಗಳು ಇಲ್ಲಿ ಮೊದಲಬಾರಿಗೆ ಬಂದು ನೆಲೆ ಊರುತ್ತಿವೆ. ಆಫ್ಘಾನಿಸ್ತಾನದಲ್ಲಿ, ಪಾಕಿಸ್ತಾನದಲ್ಲಿ ಅಮೆರಿಕದ ಸೇನೆಗಳ ಇರುವಿಕೆ ಹೊಸ ಪರಿಸ್ಥಿತಿ ಉಂಟುಮಾಡಿದೆ. ಭಾರತ-ಪಾಕಿಸ್ತಾನಗಳ ವೈಮನಸ್ಯದ ಸಂದರ್ಭದಲ್ಲಿ, ಮುಖ್ಯವಾಗಿ ಕಾಶ್ಮೀರ ವಿವಾದಕ್ಕೆ ಸಂಬಂಧಪಟ್ಟಂತೆ, ಇದನ್ನು ಗಮನಿಸಬೇಕಾದ್ದು ಅಗತ್ಯ. ಕಾಶ್ಮೀರ ವಿವಾದ ಆರಂಭವಾದಾಗಿನಿಂದ ಅಮೆರಿಕ ತನ್ನ ತಲೆ ತೂರಿಸಲು ಪ್ರಯತ್ನಿಸಿದೆ. ಮಧ್ಯಸ್ಥಿಕೆ

**ಸೀಯಾರ್ಕೆ**

ವಹಿಸುವ ಹೆಸರಿನಲ್ಲಿ ತನ್ನ ಬೇಳೆ ಬೇಯಿಸಿಕೊಳ್ಳಲು ಅಪೇಕ್ಷಿಸುತ್ತಲೇ ಬಂದಿದೆ. ವ್ಯೂಹಾತ್ಮಕವಾಗಿ ಪಾಕಿಸ್ತಾನ ಮತ್ತು ಭಾರತ ಎರಡರ ಮೇಲೂ ಒತ್ತಡ ಹೇರಲು ಅಮೆರಿಕಾಗೆ ಕಾಶ್ಮೀರ ಪ್ರಶಸ್ತವಾದ ಸ್ಥಳ. ಅದಕ್ಕಾಗಿಯೇ ಎರಡೂ ರಾಷ್ಟ್ರಗಳು ಅಪೇಕ್ಷೆಪಟ್ಟಲ್ಲಿ ತಾನು ಮಧ್ಯಸ್ತಿಕೆ ವಹಿಸಲು ಸಿದ್ಧ ಎಂದು ಅಮೆರಿಕ ಹೇಳುತ್ತಿರುವುದು. ಈಗ ಪಾಕಿಸ್ತಾನದ ಅಧ್ಯಕ್ಷ ಮುಷಾರಫ್ ಅಮೆರಿಕಾದ ಮಧ್ಯಸ್ತಿಕೆಗೆ ಹೆಚ್ಚು ಒಲವು ತೋರಿದ್ದಾರೆ ತಮ್ಮ ಭಾಷಣದಲ್ಲಿ. ಭಾರತ ಎಚ್ಚರ ವಹಿಸದಿದ್ದರೆ ಅಮೆರಿಕ ಬೀಸಿರುವ ಬಲೆಯಲ್ಲಿ ಸಿಕ್ಕಿ ಬೀಳುವುದು ಖಂಡಿತ. ಅಮೆರಿಕವನ್ನು ಓಲೈಸಲು ಕಾತುರವಾಗಿರುವ ಎನ್‌ಡಿಎ ಸರಕಾರದ ಪ್ರಭೃತಿಗಳು ಇದನ್ನು ಅರಿತುಕೊಳ್ಳದಿದ್ದರೆ ಮುಖಕ್ಕೆ ಮಸಿ ಬಳಿದುಕೊಳ್ಳುತ್ತಾರೆ ಅಷ್ಟೆ. ಇಂದಿನ ಪರಿಸ್ಥಿತಿಯಲ್ಲಿ ಪಾಕಿಸ್ತಾನದೊಂದಿಗೆ ಅರ್ಥಪೂರ್ಣವಾದ ಮಾತುಕತೆ ಗಳಿಗೆ ವೇದಿಕೆ ನಿರ್ಮಿಸುವುದು ಅತ್ಯಗತ್ಯ. ಉಪಖಂಡ ದಲ್ಲಿ ದೊಡ್ಡ ರಾಷ್ಟ್ರವಾಗಿರುವ ಭಾರತ ಈ ಇಡೀ ಪ್ರದೇಶದ ಹಿತಾಸಕ್ತಿಯಿಂದ, ಅಮೆರಿಕದ ಹಸ್ತಕ್ಷೇಪವನ್ನು ದೂರವಿರಿಸುವ ದೃಷ್ಟಿಯಿಂದ, ಮೊಂಡು ವಾದಗಳನ್ನು ಹೂಡಿ, ಕ್ಷುಲ್ಲಕ ರಾಜಕೀಯ ಗಳಿಕೆಗಳಿಗೆ ಮಾರು ಹೋಗದೆ ಹೊಸ ಉಪಕ್ರಮ ಕೈಗೊಳ್ಳಬೇಕಾದ್ದು ಮುತ್ಸದ್ದಿತನ. ಜನರಲ್ ಮುಷಾರಫ್ ಕೈಗೊಂಡಿರುವ ಕ್ರಮಗಳನ್ನು, ಚಾಚಿರುವ ಸ್ನೇಹ ಹಸ್ತವನ್ನು ಗಂಭೀರವಾಗಿ ಪರಿಗಣಿಸಿ ಸೂಕ್ತ ಕ್ರಮ ಕೈಗೊಳ್ಳಬೇಕಾದ್ದು ಈಗ ಭಾರತದ ಸರದಿಯಾಗಿದೆ. ■

## ನೆತ್ತರ ರುಚಿ ಹತ್ತಿ

ನಾಲಗೆ ಚಪ್ಪರಿಸುತ್ತ ಹೊರ
ಬೀಳುತ್ತದೆ ಪತ್ರಿಕೆ ನಿತ್ಯ
ರಕ್ತ ಎಂದರೆ ಎಂಥ
ತೆವಲು ಇದಕ್ಕೆ !

ವರ್ತಮಾನದ ತುಂಬೆಲ್ಲಾ
ನೆತ್ತರಲ್ಲದ್ದಿದ ಭೂತ
ನರ್ತನದ ನಂತರ ನೆಲ
ಕ್ಕುರುಳಿದ ಜೀವ ರೋದನ

ಮುಖಪುಟಕ್ಕೆ ಮುಖ
ಕೊಟ್ಟರೆ ಸುಪ್ರಭಾತ
ಮುಂಜಾನೆಯಂಗಳದಲ್ಲಿ
ನಿನ್ನೆ ಉದುರಿದ್ದ ಹೂ ಎಲೆ ರೆಂಬೆ

ಜೀವ ತಣ್ಣಗಾಗಿಸುವ ಸಾವು
ಬಿಸಿ ಬಿಸಿ ಸುದ್ದಿಯಾಗಿ
ಕೊಲೆ ಲೂಟಿ ಅತ್ಯಾಚಾರ
ಪರಿವಿಡಿಯ ಅಂದವಾಗಿ

* * *



''ಛೇ ! ಇಡೀ ಪತ್ರಿಕೆ ಬೋರ್
ಒಂದೇ ಒಂದು ಒಂದು
ಕೊಲೆ ಇಲ್ಲ ಸಾವಿಲ್ಲ ರಕ್ತ
ವಾಸನೆ ಇಲ್ಲ''
ನಿದ್ರೆ ಮೈಥುನ ಆಹಾರದಷ್ಟೇ
ಸಲೀಸು ಈ ಇಂಥ ಓದು.

ಮತ್ತೆ ನಾಲಗೆ ಚಪ್ಪರಿಸುವ ಪತ್ರಿಕೆ
ಕಣ್ಣಗಲಿಸಿ ಕಾಯುವ ಜನ
ಮೂಲೆ ಇರುವುದೇ ಸುಭಾಷಿತಕ್ಕೆ
''ಅಹಿಂಸಾ ಪರಮೋ ಧರ್ಮ:''

ವಾಸುದೇವ ನಾಡಿಗ್
ಜವಹರ್ ನವೋದಯ ವಿದ್ಯಾಲಯ
ಮನ ಕ್ಯಾಂಪ್
ರಾಯಚೂರು - ೫೮೪ ೧೦೧.

# ಹೊಯ್ಸಳರ ಕಾಲದ 'ಗರುಡರು'



ಡಾ|| ಎಚ್. ಎಸ್. ಗೋಪಾಲ ರಾವ್

**ಪ್ರಾ**ಚೀನ ಕರ್ನಾಟಕದ 'ಮನೆಮಕ್ಕಳು' ಇತಿಹಾಸದಲ್ಲಿ ವಿಶೇಷ ಮಹತ್ವ ಪಡೆದಿದ್ದಾರೆ; ಆದರೆ ರಾಜ, ಮಹಾರಾಜರ ನಡುವೆ ಅವರು ಅಮುಖ್ಯರು. ಪ್ರತಿಯೊಬ್ಬ ನಾಯಕನಿಗೂ ಎಲ್ಲಾ ಕಾಲದಲ್ಲೂ, ರಕ್ಷಣೆಗಾಗಿ 'ರಕ್ಷಣಾ ದಳ' ಇರುತ್ತಿತ್ತು. ಈಗಲೂ ಇರುತ್ತಾರೆ. ಈಗಿರುವ ರಕ್ಷಣಾ ದಳದವರಿಗೂ ಬೇರೆ ಬೇರೆ ಹೆಸರುಗಳಿರುತ್ತವೆ. ಹಿಂದೆ ಇದ್ದ ರಕ್ಷಣಾದಳಗಳಿಗೂ ಪ್ರತ್ಯೇಕ ಹೆಸರುಗಳಿದ್ದುದನ್ನು ಅನೇಕ ಶಾಸನಗಳ ಮೂಲಕ ತಿಳಿಯಬಹುದು. ಇಂತಹ ಒಂದು ರಕ್ಷಣಾ ದಳವೇ 'ಗರುಡರು'.

ಕರ್ನಾಟಕದಲ್ಲಿ 'ಗರುಡರು' ವಿಶೇಷವಾಗಿ ಕಾಣುವುದು ಹೊಯ್ಸಳರ ಕಾಲದಲ್ಲಿ. ಸಾಮಾನ್ಯವಾಗಿ ಗರುಡರು ಸಾಮಾಜಿಕ ಕಾರಣಗಳಿಗಾಗಿ ಆತ್ಮಬಲಿ ಆದವರು; ಆದರೆ ಈ ಸಾಮಾಜಿಕ ಎನ್ನುವ ಕಾರಣವು, ಆಳುವ ಒಡೆಯನಿಗೆ ಸಂಬಂಧಿಸಿಯೇ ಇತ್ತು ಎನ್ನುವುದು ಬಹಿರಂಗ ಸತ್ಯ. ಈವರೆಗೆ ದೊರೆತಿರುವ ಯಾವುದೇ ಗರುಡರಿಗೆ ಸಂಬಂಧಿಸಿದ ಶಾಸನ ಅಥವಾ ವೀರಗಲ್ಲು, ಒಡೆಯನ ಪ್ರಾಣ ರಕ್ಷಣೆಯ ಸಂದರ್ಭದಲ್ಲಿ ಆದ ವೀರನ ಸಾವನ್ನು ಮಾತ್ರ ಪ್ರಸ್ತಾಪಿಸಿವೆ. ಜೋಳವಾಳಿ, ವೇಳೆವಾಳಿ, ಲೆಂಕವಾಳಿ, ಮನೆಮಗ ಇವೆಲ್ಲವೂ ಒಂದಲ್ಲ ಒಂದು ರೀತಿ ಆತ್ಮಬಲಿಯಾದವರನ್ನು ಸಂಬೋಧಿಸುವ ಪದಗಳು. ಹೀಗೆ ಒಡೆಯನ ಪ್ರಾಣ ರಕ್ಷಣೆಗಾಗಿ ತನ್ನ ಪ್ರಾಣವನ್ನು ಕಳೆದುಕೊಂಡ ವೀರರನ್ನು ವಿಷ್ಣುವಿನ ವಾಹನವಾದ ಗರುಡನಿಗೆ ಹೋಲಿಸಲಾಗುತ್ತದೆ. ಗರುಡನು ಶೂರ, ವಿಷ್ಣುವಿನ ಆಪ್ತಸೇವಕ ಮತ್ತು ವಾಹನ ಹಾಗೂ ಸರ್ಪಗಳ ಶತ್ರು. ಇಂತಹ ಗರುಡನನ್ನು ಆತ್ಮಬಲಿಯಾದವರನ್ನು ನೆನಪು ಮಾಡಿಕೊಳ್ಳಲು ಏಕೆ ಬಳಸಿಕೊಂಡರು ಎಂಬ ಪ್ರಶ್ನೆ ಎದುರಾಗುತ್ತದೆ. ಕೆಲವು ಶಾಸನಗಳು ವೀರರನ್ನು ಸ್ಮರಿಸುವಾಗ 'ಸಿಂಗನ ಗರುಡ', 'ಸಾಮಂತ ಗರುಡ', 'ಸಂಗ್ರಾಮ ಗರುಡ', 'ನೊಳಂಬ ಗರುಡ' ಇತ್ಯಾದಿ ಪಾರಿಭಾಷಿಕ ಪದಗಳನ್ನು ಬಳಸಿವೆ. ಇಲ್ಲಿ ಗರುಡ ಪದದ ಬಳಕೆಯು ಅರ್ಥಪೂರ್ಣವಾಗಿಯೇ ಆಗಿದೆ. ಆದರೆ, ಪ್ರಸ್ತುತ ಪ್ರಸ್ತಾಪಿಸುತ್ತಿರುವ ಗರುಡರು ಯಾರ ವೈರಿಗಳೂ ಅಲ್ಲ. ಒಡೆಯನ ರಕ್ಷಣೆಗೆ ನೇಮಕಗೊಂಡ ಅಥವಾ ಒಡೆಯನ ಪ್ರಾಣ ರಕ್ಷಣೆಯಲ್ಲಿ ಪ್ರಾಣಾರ್ಪಣೆ ಮಾಡುವುದಾಗಿ ಸ್ವ-ಇಚ್ಛೆಯಿಂದ ಪ್ರತಿಜ್ಞೆ ಮಾಡಿದ ವೀರರೇ ಗರುಡರು. ವಿಷ್ಣುವಿಗೆ ಆಪ್ತಸೇವಕನಾಗಿ ಗರುಡ ಇದ್ದಂತೆ ಈ ವೀರರು ಒಡೆಯನಿಗೆ ಆಪ್ತಸೇವಕರು. ಆಪ್ತಸೇವಕರಾದ್ದರಿಂದ, ಒಡೆಯನ ರಕ್ಷಣೆ ಮಾಡಲಾಗದ ಸಮಯದಲ್ಲಿ ತಮ್ಮ ಪ್ರಾಣವನ್ನು ಅರ್ಪಿಸಬೇಕಾಗುತ್ತಿತ್ತು. ಆಧುನಿಕ ಸಮಾಜದಲ್ಲಿ ಇದು ಅತ್ಯಂತ ಹೀನವಾದ ಕೆಲಸ. ಯಾವ ನಾಗರಿಕ ಸಮಾಜವೂ ಇಂತಹ ಪದ್ಧತಿಯನ್ನು ಒಪ್ಪಲು ಸಾಧ್ಯವಿಲ್ಲ; ಇದು ವೀರರೆನಿಸಿಕೊಂಡವರು ತಮ್ಮ ಒಡೆಯನನ್ನು ರಕ್ಷಿಸಲು ಸಾಧ್ಯವಾಗದೆ ಇದ್ದುದಕ್ಕಾಗಿ, ತಾವೇ ವಿಧಿಸಿಕೊಂಡ ಅತ್ಯಂತ ಕಠಿಣ ಶಿಕ್ಷೆ. ಇಂತಹ ಆತ್ಮಬಲಿಯನ್ನೂ ಸಹ ಶಾಸನಗಳು ಹೊಗಳಿವೆ. ಉತ್ಪ್ರೇಕ್ಷೆಯೂ ಸಹ ಹೆಚ್ಚಾಯಿತು ಎನಿಸುತ್ತದೆ. ಈಗ ನಾವು 'ಗರುಡ' ಪದ್ಧತಿಯನ್ನು ಪುಷ್ಟೀಕರಿಸಲು ಸಾಧ್ಯವಿಲ್ಲ; ಆದರೆ ಇಂತಹ ಒಂದು ಪದ್ಧತಿ ಇತ್ತು ಮತ್ತು ಸತ್ಯವನ್ನು ಒಪ್ಪದಿರಲೂ ಸಾಧ್ಯವಿಲ್ಲ. ಆತ್ಮಬಲಿ ಆದ ವೀರರನ್ನು ಈಗ ನಾವು ಹೆಮ್ಮೆಯಿಂದ ಸ್ಮರಿಸಿಕೊಳ್ಳಬಹುದು. ಅವರಿಗೆ ಸ್ಮಾರಕವಾಗಿ ಹಾಕಿರುವ ವೀರಗಲ್ಲುಗಳನ್ನು ಹೆಮ್ಮೆಯಿಂದ ನೋಡಿ ಮೈ ಉಬ್ಬಿಸಿಕೊಳ್ಳಬಹುದು. ಗರುಡರನ್ನು ಕುರಿತ ಶಾಸನ ಪಾಠ ಅಥವಾ ಕಾವ್ಯ ಭಾಗಗಳನ್ನು ಓದಿ, ಅಲ್ಲಿನ ವೀರರಸ, ಅದಕ್ಕೆ ತಕ್ಕ ಛಂದಸ್ಸು, ಶಬ್ದ ಪ್ರಯೋಗ ಇತ್ಯಾದಿಗಳಿಂದ ಸಂತೋಷಪಡಬಹುದು. ಆದರೆ, ಅವನ ಪ್ರಾಣಾರ್ಪಣೆಯ ಸಂದರ್ಭದ ಊಹೆಯೇ ಕಠಿಣ.

ಗರುಡನಾಗಬಯಸುವ ವೀರನು ತನ್ನ ಒಡೆಯನ ಮುಂದೆ, ಅವನ ಪ್ರಾಣರಕ್ಷಣೆಗಾಗಿ ತನ್ನ ಪ್ರಾಣವನ್ನು ಒಪ್ಪಿಸುವ ಪ್ರತಿಜ್ಞೆ ಮಾಡಿ, ತಾನು ಗರುಡನಾದುದರ ಗುರುತಾಗಿ ಎಡಗಾಲಿಗೆ 'ಗಂಡಪೆಂಡೇರ'ವನ್ನು ಕಟ್ಟಿಕೊಳ್ಳುತ್ತಿದ್ದನು. ಚಿನ್ನದ ಎಳೆಗಳಿಗೆ ಮುತ್ತನ್ನು ಜೋಡಿಸಿ ಆ ಗಂಡಪೆಂಡೇರವನ್ನು ಸಿದ್ಧಪಡಿಸುತ್ತಿದ್ದರು. ವೀರನು ಓಡಾಡುವಾಗ ಗಂಡಪೆಂಡೇರವು ಝಣ ಝಣ ಶಬ್ದ ಮಾಡುತ್ತಿತ್ತು. ಗರುಡನಾದ ವೀರನ ಜೊತೆಗೆ ಅವನ ಸಹಚರರೂ ಗರುಡರಾಗುತ್ತಿದ್ದರು. ಈ ಸಹಚರರಲ್ಲಿ ಹೆಂಡತಿಗೂ ಸ್ಥಾನವಿತ್ತು. ಗರುಡರನ್ನು ಕೆಲವು ಶಾಸನಗಳು ಲೆಂಕರು ಎಂದೂ ಕರೆದಿವೆ. ಲೆಂಕ ಎಂದರೆ ಶೂರ. ಕೆಲವು ಕುಟುಂಬಗಳು ವಂಶಪಾರಂಪರ್ಯವಾಗಿ ಲೆಂಕರಾಗುತ್ತಿದ್ದ ಉದಾಹರಣೆಗಳಿವೆ.

ವಿಷ್ಣು ದೇವಾಲಯಗಳ ಮುಂದೆ ಗರುಡಗಂಭ ಇರುತ್ತದೆ. ಶಿವನ ಮುಂದೆ ನಂದಿ ಇರುವಂತೆ ವಿಷ್ಣುವಿನ ಮುಂದೆ ಗರುಡ ಇರುತ್ತಾನೆ. 'ಗರುಡ'ರಾದ ವೀರರ ಸ್ಮಾರಕವಾಗಿಯೂ 'ಗರುಡ ಸ್ತಂಭ'ಗಳು ಇರುತ್ತವೆ. ಈ ಗರುಡ ಸ್ಮಾರಕಗಳಲ್ಲಿ, ಆತ್ಮಬಲಿಯಾದ ವೀರರ ಶಿಲ್ಪಗಳಿರುತ್ತವೆ. ಇಂತಹ 'ಗರುಡ ಸ್ತಂಭ' ಗಳನ್ನು ಹಳೇಬೀಡು, ಅಗ್ರಹಾರ ಬಾಚಹಳ್ಳಿ, ಬಸರಾಳು ಇತ್ಯಾದಿ ಊರುಗಳಲ್ಲಿ ಕಾಣಬಹುದು. ಹಳೇಬೀಡಿನ ಗರುಡ ಸ್ಮಾರಕದ ಮೇಲ್ಭಾಗ ಮುರಿದಿದೆ ಎನಿಸುತ್ತದೆ. ಆದರೆ ಉಳಿದಿರುವ ಭಾಗದಲ್ಲಿನ ಶಿಲ್ಪನಿರೂಪಗಳು ವಿವರಣಾತ್ಮಕವಾಗಿವೆ.

ಕೆಲವು ಕುಟುಂಬಗಳು ವಂಶಪಾರಂಪರ್ಯವಾಗಿ 'ಗರುಡ'ರೆಂದು ಕಾರ್ಯನಿರ್ವಹಿಸುತ್ತಿದ್ದವು ಎಂಬ ಅಭಿಪ್ರಾಯಕ್ಕೆ ಅಗ್ರಹಾರ ಬಾಚಹಳ್ಳಿಯ ಒಂದು ಶಾಸನವು ಉದಾಹರಣೆಯಾಗಿದೆ. ಗಂಡನಾರಾಯಣ ಸೆಟ್ಟಿಯ ವಂಶದಲ್ಲಿ ಹುಟ್ಟಿದ ಸಿವನೆಯ ನಾಯಕ ತನ್ನ ಐವರು ಲೆಂಕರ ಜೊತೆಗೂ, ಅವನ ತಮ್ಮ ಲಖ್ಖೆಯ ನಾಯಕನು ತನ್ನ ಹೆಂಡತಿ ಮತ್ತು ಮೂವರು ಲೆಂಕರ ಜೊತೆಗೂ 'ಭಾಸೆಯ ಪೂರಯಿಸಿದ' ವಿಷಯವು ಅಗ್ರಹಾರ ಬಾಚಹಳ್ಳಿಯ ಶಾಸನದಲ್ಲಿದೆ.

ಕರ್ನಾಟಕದ ಸಾಂಸ್ಕೃತಿಕ ಇತಿಹಾಸದ ವಿದ್ಯಾರ್ಥಿಗಳಿಗೆ ಸಾಮಾನ್ಯವಾಗಿ 'ಗರುಡ' ಎಂದ ತಕ್ಷಣ ನೆನಪಾಗುವುದು ಹೊಯ್ಸಳ ವೀರಬಲ್ಲಾಳ 'ಪೊರೆದ ಮಗ' ಕುವರಲಕ್ಷ್ಮ. ಹಳೇಬೀಡಿಗೆ ಹೋದ ಪ್ರವಾಸಿಗರನ್ನು ಅಲ್ಲಿಯ ಜೋಡಿ ದೇವಾಲಯ ಮರುಳು ಮಾಡುತ್ತದೆ. ಅಲ್ಲಿಯ ವಾಸ್ತು ವಿಶೇಷಕ್ಕಿಂತ, ಹೊರಭಿತ್ತಿಯ ಶಿಲ್ಪಗಳು ಹೆಚ್ಚು ಆಕರ್ಷಕ ಮತ್ತು ವಿಶೇಷ ಎನಿಸುತ್ತದೆ. ಪ್ರವಾಸಿಗರಿಗೆ ವಿಶೇಷ ಎನಿಸದ, ಆದರೆ ಸಾಂಸ್ಕೃತಿಕ ಇತಿಹಾಸಾಸಕ್ತರಿಗೆ ಬಹು ವಿಶೇಷ ಆಕರ್ಷಣೆಯ ಕಂಬವೊಂದು ಹೊಯ್ಸಳೇಶ್ವರ ದೇವಾಲಯದ ಪಶ್ಚಿಮ ಭಾಗದಲ್ಲಿದೆ. ಈ ಕಂಬದ ಮೇಲ್ಭಾಗ ಮುರಿದಿದೆ. ಕಂಬದ ಕೆಳಗೆ ನಾಲ್ಕೂ ಭಾಗಗಳಲ್ಲಿ ಕುವರಲಕ್ಷ್ಮನ ಉಲ್ಲೇಖವಿರುವ ಶಾಸನವಿದೆ. ಶಾಸನ ಪಾಠವಿರುವ ಭಾಗದ ಮೇಲೆ ಸುತ್ತಲೂ ಆತ್ಮಬಲಿ ಮಾಡಿಕೊಳ್ಳುತ್ತಿರುವ ವೀರರ ವಿವಿಧ ಭಂಗಿಗಳಿವೆ.

ದಂಡಾಧೀಶನೂ, ಸಚಿವನೂ ಆಗಿದ್ದ ಕುವರ ಲಕ್ಷ್ಮನನ್ನು ಶಾಸನವು 'ಅನಿಂದಿತ ವೀರ' ಎಂದು ವರ್ಣಿಸಿದೆ. ಇವನು ವೀರಬಲ್ಲಾಳ 'ಪೊರೆದ ಮಗ'.

**ಅರಮನೆ ತೊಟ್ಟಿಲೆ ನೆಗಳ್ವ**
**ದರ ಮದುಬಾಯೆಣ್ಣೆ ದಾದಿಯತ್ತ್ರಂನಂತಃ।**
**ಪುರಮೆನೆ ಬಲ್ಲಾಳ ನೃಪಂ**
**ಪೊರೆದ ಮಗಂ ಕುವರ ಲಕ್ಷ್ಮ ದಂಡಾಧೀಶಂ॥**

ಕುವರಲಕ್ಷ್ಮನನ್ನು ವರ್ಣಿಸುವ ಶಾಸನವು ಅವನ ಹೆಂಡತಿ ಸುಗ್ಗಲದೇವಿಯನ್ನೂ ಹೊಗಳಿದೆ. ಕುವರಲಕ್ಷ್ಮ ಮತ್ತು ವೀರಬಲ್ಲಾಳರ ನಡುವಿನ ಸಂಬಂಧವು ಆಳು, ಅರಸ ಎಂಬ ಭೇದಕ್ಕೆ ಎಡೆ ನೀಡಿರಲಿಲ್ಲ. ಇಂತಹ ಆತ್ಮೀಯ ಸಂಬಂಧವಿದ್ದ ಕುವರಲಕ್ಷ್ಮನು ತನ್ನ

ಸರ್ವಸ್ವವನ್ನೂ ವೀರಬಲ್ಲಾಳನ ಉನ್ನತಿಗೆ ಮುಡುಪಿಟ್ಟಿದ್ದ. ಇದನ್ನು ಶಾಸನವು ಹೀಗೆ ವಿವರಿಸಿದೆ.

**ಧನಮುಂ ಪ್ರಾಣಮುಮೆಂಬಿವಂ ಕುವರಲಕ್ಷ್ಮಂ**
**ವೀರಬಲ್ಲಾಳದೇ**
**ವನ ದಾಸೋನ್ನತಿಗಂ ಜಯೋನ್ನತಿಗಮೀಯಲ್ ಪೊಣ್ದು**
**ಮುಂದಿಟ್ಟುರಾ ।**
**ಮನ ಬೀಡಿಂಗಣುವಂ ಯಮಾತ್ಮಜನ ಬೀಡಿಂಗಜ್ಜನಂ**
**ಚಂದ್ರಜೂ**
**ಟನ ಬೀಡಿಂಗೆ ಕುಮಾರನಿರ್ಪ ತೆಱದಿಂದಿರ್ದಪನೇಂ**
**ಧೀರನೋ॥**

ಇಂತಹ ಕುವರಲಕ್ಷ್ಮ ಆಡಿದ ಮಾತು 'ಕಲ್ಲೊಳಿಟ್ಟಕ್ಕರದಂತೆ'. ಇವನು ಎಡಗಾಲಿಗೆ ಧರಿಸಿದ್ದ ಗಂಡಪೆಂಡೇರವನ್ನು ಶಾಸನ ಕವಿ ಹೀಗೆ ವರ್ಣಿಸಿದ್ದಾನೆ. ಕುವರಲಕ್ಷ್ಮ ಧರಿಸಿದ್ದ ಗಂಡಪೆಂಡೇರವು ಅನ್ಯರಿಗೆ ಒಪ್ಪುತ್ತಿರಲಿಲ್ಲವಂತೆ.

**ತಾರಗೆಯಂತೆ ತಳೆಸೆವ ಮುತ್ತಿನ ಮೊತ್ತದಿನಾದ ಗಂಡಪೆಂ**
**ಡಾರಮುಮಿಕ್ಕೆ ಚಂಪಕನವೋದ್ಗಮದಾಮದ**
**ಚೆಲ್ವನಾಳ್ದು ವಾ।**
**ಮಾರುಣಪಾದದೊಳ್ ಪೊಳೆವ ಪೊಂದೊಡರುಂ**
**ಪತಿಭಕ್ತಿಯುಕ್ತ ವಿ**
**ಸ್ತಾರಕುಮಾರಲಕ್ಷರಥಿನೀಪತಿಗೊಪ್ಪುಗುಮೊಪ್ಪವನ್ಯರೊಳ್॥**

ಕುವರಲಕ್ಷ್ಮನೊಡನೆ, ಅವನ ಹೆಂಡತಿ ಸುಗ್ಗಲದೇವಿ ಮತ್ತು ಒಂದು ಸಾವಿರ ಭಟರು ವೀರಬಲ್ಲಾಳನ ಆತ್ಮರಕ್ಷಣೆಯ ಹೊಣೆ ಹೊತ್ತಿರುತ್ತಾರೆ. ವೀರಬಲ್ಲಾಳ




ಸ್ವತ್ತಾಗ ಅವರೊಡನೆ ಕುವರಲಕ್ಷ್ಮ, ಕುವರಲಕ್ಷ್ಮನೊಡನೆ ಸುಗ್ಗಲದೇವಿ ಮತ್ತು ಅವರನ್ನನುಸರಿಸಿ ಕುವರ ಲಕ್ಷ್ಮನ ಒಂದು ಸಾವಿರ ಭಟರು ಪ್ರಾಣಾರ್ಪಣೆ ಮಾಡುವ ಪ್ರತಿಜ್ಞೆ ಮಾಡಿರುತ್ತಾರೆ. ಶಾಸನ ಪಾಠವು ಈ ವಿವರಗಳನ್ನು ನೀಡಿದರೆ ಶಾಸನ ಶಿಲ್ಪವು ಕುವರಲಕ್ಷ್ಮ ಮತ್ತು ಅವನ ಸಂಗಡಿಗರ ಆತ್ಮಾರ್ಪಣೆಯನ್ನು ದಾಖಲಿಸಿವೆ.

**ತನ್ನೊಡನೆ ತೋಱಿದ ಸುಭಟರ। ತನ್ನ ಮನಃಪ್ರಿಯೆಯ ತನ್ನ**
**ಪರಮಾಯುಷ್ಯಂ।**
**ತನ್ನಾಳ್ದಂಗಾಯ್ತೆನಿಸಿದ । ನೇನ್ನೆಟ್ಟನೆ ಕಲಿಯೊ ಕುವರಲಕ್ಷ್ಮ**
**ಚಮೂಪಂ॥**

ಇಂತಹ ವೀರರು ಪ್ರಾಚೀನ ಕರ್ನಾಟಕದಲ್ಲಿ ಇದ್ದರು. ಅವರ ಶೌರ್ಯ, ಸಾಹಸಗಳು ಆಳುವವರ ಬೆನ್ನಿಗಿದ್ದು ರಕ್ಷಣೆ ನೀಡುತ್ತಿದ್ದವು. ನಮಗೆ ರಾಜ ಮಹಾರಾಜರ ಹೆಸರು ಮತ್ತು ಅವರ ಸಾಧನೆಗಳು ಮಾತ್ರ ಪ್ರಮುಖವಾಗಿ ತಿಳಿಯುತ್ತವೆ. ಅಂತಹ ಸಾಧನೆಗೆ ಕಾರಣರಾದ ಕೆಲವು ವೀರರು, ಅವರ ಕುಟುಂಬ ಮತ್ತು ಜೊತೆಗಾರರ ಬಗ್ಗೆ ಕೆಲವು ಶಾಸನಗಳಾದರೂ ತಿಳಿಸುತ್ತವೆ. ಈ ಸೂಕ್ಷ್ಮ ವಿಚಾರಗಳು ಗೌಣವಾದರೆ ಇತಿಹಾಸದ ಅರಿವು ಪೂರ್ಣವಾಗುವುದಿಲ್ಲ.

ಆಳುವ ವರ್ಗಕ್ಕೆ ಈಗ ರಕ್ಷಣಾ ವ್ಯವಸ್ಥೆ ಇರುವಂತೆ ಹಿಂದೆಯೂ ಇತ್ತು. ಈಗಿನ ರಕ್ಷಣಾ ಬಲಕ್ಕೆ ಒಡೆಯನೊಡನೆ ಪ್ರಾಣಾರ್ಪಣೆ ಮಾಡಬೇಕೆಂಬ ನಿರ್ಬಂಧ ಇಲ್ಲದಿರ ಬಹುದು. ಹಿಂದೆ ಇಂತಹ ಆತ್ಮಾರ್ಪಣೆಯು ವಂಶಪಾರಂಪರ್ಯವಾಗಿತ್ತು ಎಂಬ ವಿಚಾರದ ಜೊತೆಗೆ 'ಅಯ್ಯೋ' ಎನ್ನುವವರ ನೆಮ್ಮದಿಗೆಂಬಂತೆ ಸ್ವ-ಇಚ್ಛೆಯಿಂದ ಇತ್ತು ಎಂದು ತಿಳಿಯಲಾಗಿದೆ.

**ಡಾ|| ಎಚ್. ಎಸ್. ಗೋಪಾಲ ರಾವ್**
'ಸ್ವಸ್ತಿಶ್ರೀಸ್ಕಂದ', ಅರಸಿನಕುಂಟೆ,ನೆಲಮಂಗಲ ತಾಲ್ಲೂಕು
ಬೆಂಗಳೂರು ಗ್ರಾಮಾಂತರ ಜಿಲ್ಲೆ - ೫೬೨ ೧೨೩

# ಕಾಶ್ಮೀರ : ವಿವಾದ ಪರಂಪರೆ

■

**''ಕಾಶ್ಮೀರ ಸರ್ಕಾರ ಮತ್ತು ನ್ಯಾಷನಲ್ ಕಾನ್‌ಫರೆನ್ಸ್‌ಗಳೆರಡೂ ಸೇರ್ಪಡೆಯನ್ನು ಒಪ್ಪಿಕೊಂಡು ಭಾರತವು ವಾಯುಪಡೆಯನ್ನು ಕಳಿಸುವಂತೆ ನಮ್ಮನ್ನು ಒತ್ತಾಯಿಸಿದವು; ಆದರೆ, ಕಾಶ್ಮೀರದಲ್ಲಿ ಶಾಂತಿ ಮತ್ತು ಕಾನೂನು ವ್ಯವಸ್ಥೆಗಳು ಸ್ಥಾಪನೆಯಾದ ನಂತರ ಸೇರ್ಪಡೆಯ ಒಪ್ಪಂದವನ್ನು ಕಾಶ್ಮೀರ ಜನತೆಯು ಅನುಮೋದಿಸಬೇಕೆಂಬ ಷರತ್ತು ಹಾಕಿದವು''**

■

**ಡಾ॥ ಕೆ. ಎಲ್. ಗೋಪಾಲಕೃಷ್ಣಯ್ಯ**

'**ಭೂ**ಮಿಯ ಮೇಲಿನ ಸ್ವರ್ಗ', 'ಪೌರ್ವಾತ್ಯ ಸ್ವಿಡ್ಜರ್ಲೆಂಡ್' ಎಂದೆಲ್ಲ ವರ್ಣಿತವಾಗುತ್ತಿದ್ದ ಕಾಶ್ಮೀರವು ಇಂದು 'ದಕ್ಷಿಣ ಏಷ್ಯಾದ ಜ್ವಾಲಾಮುಖಿ' ಎಂಬ ಅಪಪ್ರಥೆಗೆ ಗುರಿಯಾಗಿದೆ. ಮೂರು ವರ್ಷಗಳ ಹಿಂದೆ (೧೯೯೮) ಭಾರತ ಪಾಕಿಸ್ತಾನಗಳೆರಡೂ ನಡೆಸಿದ ಪರಮಾಣು ಸ್ಫೋಟವು ಪರಿಸ್ಥಿತಿಯನ್ನು ಸಾಕಷ್ಟು ಹದಗೆಡಿಸಿದೆ. ಕವಿದಿರುವ ಕಾರ್ಮೋಡದ ಛಾಯೆಯನ್ನು ನೋಡಿದರೆ ಕಾಶ್ಮೀರ ವಿವಾದದಿಂದಾಗಿ ಒಂದು ಸಣ್ಣ ಪ್ರಮಾಣದ (?) ಅಣು ಸಮರದ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲ. ಅಂಥ ಅಣು ಸಂಘರ್ಷವು, ಅದು ಎಷ್ಟೇ ಸಣ್ಣ ಪ್ರಮಾಣದ್ದಾಗಿದ್ದರೂ, ಎರಡೂ ದೇಶಗಳನ್ನು ವಿನಾಶದ ಅಂಚಿಗೆ ತಳ್ಳುತ್ತದೆ; 'ಎರಡೂ ದೇಶಗಳ ನಾಗರಿಕತೆಯನ್ನು ಶತಮಾನಗಳಷ್ಟು ಹಿಂದಕ್ಕೆ ಕೊಂಡೊಯ್ಯುತ್ತದೆ ಎಂಬುದನ್ನು ಸುಲಭವಾಗಿ ಊಹಿಸಬಹುದು. (ಬಹುಶಃ ಇದರಿಂದ ಎರಡೂ ದೇಶಗಳ ಮೂಲಭೂತವಾದಿ ಕೋಮುವಾದಿಗಳ ಅಪೇಕ್ಷೆಯು ಈಡೇರಲೂಬಹುದೇನೊ !). ಕಾರ್ಗಿಲ್ ವಲಯದಲ್ಲಿ ಶಸ್ತ್ರಾಸ್ತ್ರ ಘರ್ಷಣೆಗಳು ನಡೆಯುತ್ತಿದ್ದಾಗ ಎರಡೂ ಬದಿಯ ದುರಭಿಮಾನಿಗಳು ಅಣ್ವಸ್ತ್ರ ಬಳಕೆಯ ಪರವಾಗಿ ವಾದಿಸಿದ್ದೂ ಉಂಟು.

ಭಾರತ ಉಪಖಂಡದ ವಾಯವ್ಯಕ್ಕಿರುವ ಕಾಶ್ಮೀರವು ವರ್ಣರಂಜಿತವಾದ ಒಂದು ಕಣಿವೆ. ಇದರ ಒಂದು ಭಾಗವು ಪಾಕಿಸ್ತಾನದ ವಶದಲ್ಲಿದ್ದು ಉಳಿದ ಭಾಗವು ಜಮ್ಮು ಮತ್ತು ಕಾಶ್ಮೀರವೆಂಬ ಭಾರತೀಯ ರಾಜ್ಯವಾಗಿದೆ. ಭಾರತ-ಪಾಕಿಸ್ತಾನಗಳ ಗಡಿ ಪ್ರದೇಶವು ದೀರ್ಘ ಕಾಲದಿಂದ ಉದ್ವಿಗ್ನವಾಗಿದೆ. ಭಾರತ ಉಪಖಂಡವು ಬ್ರಿಟಿಷ್ ಆಡಳಿತದಿಂದ ಸ್ವತಂತ್ರವಾದೊಡನೆಯೇ ನಡೆದ ಸಶಸ್ತ್ರ ಹೋರಾಟದ ಪರಿಣಾಮವಾಗಿ ಕಾಶ್ಮೀರವು ಒಡೆದು ಭಾಗಶಃ ಎರಡೂ ದೇಶಗಳ ಅಧೀನಕ್ಕೆ ಬಂದಿತು. ೧೯೪೯ರಲ್ಲಿ ಒಪ್ಪಿಕೊಂಡ ಮತ್ತು ೧೯೭೧ರ ಭಾರತ-ಪಾಕ್ ಯುದ್ಧದ ಅನಂತರ ಸ್ವಲ್ಪಮಟ್ಟಿಗೆ ಮಾರ್ಪಡಿಸಿದ ವಿಭಜನಾ ರೇಖೆಯು ಯುದ್ಧ ನಿಯಂತ್ರಣ ರೇಖೆಯಾಗಿದ್ದು ಈಗ ಇದನ್ನು 'ವಾಸ್ತವ ಯುದ್ಧ ಹತೋಟಿ ರೇಖೆ' ಎನ್ನಲಾಗುತ್ತದೆ. ಭಾರತಕ್ಕೆ ಸೇರಿದ ಪ್ರದೇಶವು ಲಡಾಖ್ ಮತ್ತು ಜಮ್ಮುಗಳನ್ನೂ ಒಳಗೊಳ್ಳುತ್ತದೆ.

ಜಮ್ಮು ಮತ್ತು ಕಾಶ್ಮೀರವು ಬಹುಜನಾಂಗೀಯ, ಬಹು ಸಾಂಸ್ಕೃತಿಕ, ಬಹು ಮತಧಾರ್ಮಿಕ ಭೂಭಾಗವಾಗಿದ್ದು ಭಾರತ ಸ್ವಾತಂತ್ರ್ಯದೊಡನೆಯೇ ನಡೆದ ವಿಭಜನೆಯ ದಿನಗಳಿಂದಲೂ ಅಶಾಂತಿ ಮತ್ತು ಸಂಘರ್ಷಗಳನ್ನು ಅನುಭವಿಸುತ್ತ ಬಂದಿದೆ. ಅದರಲ್ಲೂ ಕಳೆದ ಒಂದೆರಡು ದಶಕಗಳಿಂದ ಹೋರಾಟವು ದಂಗೆಯ, ಭಯೋತ್ಪಾದನೆಯ ಸ್ವರೂಪ ತಾಳಿದೆ. ಹೋರಾಟಕ್ಕೆ ಪಾಕಿಸ್ತಾನದಿಂದ ಪ್ರತ್ಯಕ್ಷ, ಪರೋಕ್ಷ ಬೆಂಬಲ ದೊರೆಯುತ್ತಿದ್ದು ಇದು ನಮ್ಮೆರಡು ಸಾರ್ವಭೌಮ ರಾಷ್ಟ್ರಗಳ ನಡುವಿನ ವಿವಾದವಾಗಿದೆ. ಪರಸ್ಪರ ಹೋರಾಟದಲ್ಲಿ ತೊಡಗಿರುವ ಈ ಎರಡು ದೇಶಗಳಲ್ಲಿ ಮಾತ್ರವಲ್ಲದೆ, ಪ್ರಪಂಚದ ಇನ್ನಿತರ ದೇಶಗಳಲ್ಲಿ ಸಹ ಇದು ಭಾರತ-ಪಾಕಿಸ್ತಾನಗಳ ನಡುವಿನ ಪ್ರಾದೇಶಿಕ ವಿವಾದವೆಂದೇ ಪರಿಗಣಿಸಲ್ಪಟ್ಟಿದೆ. ಅಂತಾರಾಷ್ಟ್ರೀಯ ಚರ್ಚೆಯಲ್ಲಿ 'ಕಾಶ್ಮೀರ ವಿವಾದ'ವೇ ಪ್ರಾಮುಖ್ಯ ಪಡೆದು ಕಾಶ್ಮೀರಿ ನಾಗರಿಕರ ಅನನ್ಯತೆ, ಅವರ ಕಷ್ಟ ಕಾರ್ಪಣ್ಯಗಳು, ಅವರ ಆಸೆ ಆಕಾಂಕ್ಷೆಗಳು ಮೊದಲಾದ ಅಂಶಗಳು ಮರೆಯಾಗಿಬಿಡುತ್ತವೆ.

ಕಾಶ್ಮೀರ ವಿಷಯವನ್ನು ಚರ್ಚಿಸುವುದೆಂದರೆ, ಈ ಭೂಭಾಗವು ಬ್ರಿಟಿಷ್ ವಸಾಹತುಶಾಹಿಯಿಂದ ಸ್ವತಂತ್ರವಾದ ಸಂದರ್ಭ, ಆಗ ದೊರೆತ ಸ್ವಾತಂತ್ರ್ಯದ ಸ್ವರೂಪ, ಆ ಸ್ವಾತಂತ್ರ್ಯವು ಇಡೀ ದೇಶದ ಮೇಲೆ ಸಾಮಾನ್ಯವಾಗಿಯೂ, ಕಾಶ್ಮೀರದ ಮೇಲೆ ವಿಶಿಷ್ಟವಾಗಿಯೂ ಬೀರಿದ ಪರಿಣಾಮಗಳನ್ನು ಗಣನೆಗೆ ತೆಗೆದುಕೊಳ್ಳುವುದು ಅವಶ್ಯ. ಭಾರತದೊಡನೆ ಕಾಶ್ಮೀರದ ಸೇರ್ಪಡೆಯ ವಿಷಯವು ತುಂಬ ಸಂಕೀರ್ಣವಾದುದು. ಭವಿಷ್ಯದಲ್ಲಿ ಕಾಶ್ಮೀರದ ಸ್ಥಾನಮಾನಗಳನ್ನು ನಿರ್ಣಯಿಸುವುದಕ್ಕೆ ಆಧಾರವಾದ ಸಂವೈಧಾನಿಕ ಸಾಧನವೆಂದರೆ, ೧೯೪೭ರ ಭಾರತ ಸ್ವಾತಂತ್ರ್ಯ ಕಾಯ್ದೆ ವಿಭಾಗ ೭(೧)(ಬಿ) ಆಗಿದೆ.

ಹಿಂದೂಸ್ತಾನದ ದೇಶೀಯ ರಾಜರುಗಳು ಬ್ರಿಟಿಷ್ ಸರ್ಕಾರದೊಡನೆ ಮಾಡಿಕೊಂಡಿದ್ದ ಸಂಧಾನ ಮತ್ತು ಒಪ್ಪಂದಗಳು ರದ್ದಾದ ಒಡನೆಯೇ ಅವರವರ ಆಧಿಪತ್ಯದ ಸಾರ್ವಭೌಮಾಧಿಕಾರವು ದೇಶೀಯ ರಾಜರುಗಳಿಗೆ ಮರಳಿತು. ಆನಂತರ ಭಾರತ ಅಥವಾ ಪಾಕಿಸ್ತಾನ ಪ್ರಭುತ್ವದೊಂದಿಗೆ ಸೇರ್ಪಡೆಯಾಗಲು, ಮಿಳಿತಗೊಳ್ಳಲು, ಐಕ್ಯವಾಗಲು (ಅಥವಾ ಸ್ವತಂತ್ರವಾಗಿಯೇ ಉಳಿಯಲು ಕೂಡ) ದೇಶೀಯ ರಾಜರು ಅಧಿಕಾರ ಹೊಂದಿದ್ದರು.

ಸ್ವಾತಂತ್ರ್ಯ ದೊರೆತ ದಿನಗಳಲ್ಲಿ ಜಮ್ಮು ಮತ್ತು ಕಾಶ್ಮೀರವನ್ನು ಆಳುತ್ತಿದ್ದವರು ಹಿಂದು ರಾಜರು; ಆಗ ಅಧಿಕಾರದಲ್ಲಿದ್ದವನು ಡೋಗ್ರಾ ವಂಶಕ್ಕೆ ಸೇರಿದ ಹರಿಸಿಂಗ್ ಎಂಬಾತ. ಕಾಶ್ಮೀರ ಕಣಿವೆಯ ಬಹುಸಂಖ್ಯಾತ ನಿವಾಸಿಗಳು ಮುಸಲ್ಮಾನರು. ಹೀಗಾಗಿ ಸೇರ್ಪಡೆಯ ವಿಚಾರದಲ್ಲಿ ನಿರ್ಧಾರಕ್ಕೆ ಬರುವುದು ರಾಜನಿಗೆ ಸುಲಭ ಸಾಧ್ಯವಾಗಿರಲಿಲ್ಲ. ಆತ ಸ್ವತಂತ್ರವಾಗಿಯೇ ರಾಜ್ಯಭಾರ ನಡೆಸುವ ಕನಸು ಕಾಣುತ್ತಿದ್ದಿರಬಹುದು. 'ಮಂತ್ರಿಮಂಡಲ ನಿಯೋಗ ಯೋಜನೆ' (cabinet mission plan)ಯ ಪ್ರಕಾರ ರಾಜನು ಪ್ರಜಾಪ್ರತಿನಿಧಿ ಸಭೆಯನ್ನು ಸೇರಲು ನಿರಾಕರಿಸಿದ. ಜಮ್ಮುವಿನ ಹಿಂದು ನೇತಾರರು - ಈಗಿನ ಭಾ.ಜ.ಪ.ದ ಮಾತೃ ಸಂಸ್ಥೆ ಜನಸಂಘದ ಪೂರ್ವ ರೂಪವಾದ 'ಹಿಂದೂ ಸಭಾ'ದವರು – ಮಹಾರಾಜನನ್ನು ಬೆಂಬಲಿಸಿದರು. ಹಿಂದು ರಾಜ್ಯವಾದ ಜಮ್ಮು-ಕಾಶ್ಮೀರವು ತನ್ನ ಅನನ್ಯತೆಯನ್ನು ಉಳಿಸಿಕೊಳ್ಳುವ ಸಲುವಾಗಿ, ಮತಧರ್ಮ ನಿರಪೇಕ್ಷವಾದ ಭಾರತದೊಡನೆ ಸೇರ್ಪಡೆಯಾಗಕೂಡದೆಂದು ಪಟ್ಟು ಹಿಡಿದರು; ರಾಜ ಪ್ರಭುತ್ವವನ್ನು ಸಮರ್ಥಿಸಿದರು. ಮುಂದೆ ಅವರು ತಮ್ಮ ನಿಲುವನ್ನು ಬದಲಾಯಿಸಿದರೆಂಬುದು ಬೇರೆಯೇ ವಿಚಾರ.

ಜಮ್ಮು ಮತ್ತು ಕಾಶ್ಮೀರದ ಸರ್ವ ಮುಸ್ಲಿಂ ಸಂಘಟನೆಯು ಸಹ ಕಾಶ್ಮೀರವು ಹೊಸ ಸಂವಿಧಾನದೊಡನೆ ಸ್ವತಂತ್ರವಾಗಿಯೇ ಉಳಿಯಬೇಕೆಂದು ಇಚ್ಛೈಸಿತು. ಇದಕ್ಕೆ ವಿರುದ್ಧವಾಗಿ, ಪ್ರತಿಯೊಂದು ರಾಜ್ಯವೂ ಭಾರತ ಅಥವಾ ಪಾಕಿಸ್ತಾನ ರಾಷ್ಟ್ರಗಳ ಪೈಕಿ ಒಂದರೊಡನೆ ಸೇರಬೇಕೆಂಬುದು ಕಾಂಗ್ರೆಸ್ ಪಕ್ಷದ ನಿಲುವಾಗಿತ್ತು. ಮೌಂಟ್‌ಬೇಟನ್ ಕೂಡ ಎಲ್ಲ ದೇಶೀಯ ರಾಜ್ಯಗಳು ಇಂಡಿಯಾ ಅಥವಾ ಪಾಕಿಸ್ತಾನದೊಡನೆ ಸೇರಿಕೊಳ್ಳಬೇಕೆಂದು ಸಲಹೆ ಮಾಡಿದ್ದುದುಂಟು. ಜಿನ್ನಾ ಮಾತ್ರ ಈ ರಾಜ್ಯಗಳು, ಹಾಗೆ ಇಚ್ಛೈಸಿದರೆ, ಸ್ವತಂತ್ರವಾಗಿ ಉಳಿಯಬಹುದು ಎಂದರು.

ಮಹಾರಾಜ ಹರಿಸಿಂಗ್‌ನದು ಭಾರತ ಪಾಕಿಸ್ತಾನಗಳೆರಡರಿಂದಲೂ ದೂರ ಉಳಿಯುವ ತಟಸ್ಥ ನಿಲುವಾಗಿತ್ತು. ಆದರೆ ಭಾರತವು ಈ ಧೋರಣೆಯನ್ನು ತಿರಸ್ಕರಿಸಿದರೂ ಪಾಕಿಸ್ತಾನವು ಅಂಗೀಕರಿಸಿತು. ಅದರಂತೆ ಪಾಕಿಸ್ತಾನದ ವ್ಯಾಪ್ತಿಯಲ್ಲಿ ಬರಲಿದ್ದ ಲಾಹೋರ್ ವೃತ್ತಕ್ಕೆ ಸೇರಿದ ಅಂಚೆ ಮತ್ತು ತಂತಿ ಕಛೇರಿಗಳ ಮೇಲೆ ಪಾಕಿಸ್ತಾನದ ಧ್ವಜವನ್ನು ಹಾರಿಸಲಾಯಿತು. ಭಾರತವು ಪೂರ್ವಭಾವಿ ಸಂಧಾನವನ್ನು ಒತ್ತಾಯಿಸಿದ್ದರಿಂದ ಯಾವುದೇ ಒಪ್ಪಂದಕ್ಕೆ ಬರಲಾಗಲಿಲ್ಲ. ಕಾಶ್ಮೀರಕ್ಕೆ ಒಂದು ಹೊಸ ಸಂವಿಧಾನವನ್ನು ರಚಿಸುವ ಸಲುವಾಗಿ ರಾಜನು ಬಕ್ಷಿ ಟೇಕ್‌ಚಂದ್ ಆಯೋಗವನ್ನು ರಚಿಸಿದ. ಭಾರತ-ಪಾಕಿಸ್ತಾನಗಳ ಪೈಕಿ ಯಾವ ಕಡೆಗೆ ಸೇರಬೇಕೆಂಬ ನಿರ್ಧಾರ ತೆಗೆದುಕೊಳ್ಳುವುದರಲ್ಲಿ ರಾಜನ ಹಿಂಜರಿಕೆಯು ಪಾಕಿಸ್ತಾನಕ್ಕೆ ಒಳ್ಳೆಯ ಅವಕಾಶವನ್ನು ಒದಗಿಸಿತು. ''ಸ್ವತಂತ್ರ ಕಾಶ್ಮೀರ ಸೇನಾ ಪಡೆ'' ಎಂಬ ಹೆಸರಿನಲ್ಲಿ ಪಾಕಿಸ್ತಾನದ ಅಧಿಕೃತ ಸೈನಿಕರು ಮತ್ತು ಅನಧಿಕೃತ ಸ್ವಯಂಸೇವಕರು ಜಮ್ಮು-ಕಾಶ್ಮೀರ ಪ್ರದೇಶದ ಮೇಲೆ ಧಾಳಿ ಮಾಡಿದರು. ಇದರ ಪರಿಣಾಮವಾಗಿ ರಾಜನು ಭಾರತದಿಂದ ಸೇನಾ ಸಹಾಯವನ್ನು ಕೇಳಿಕೊಂಡಾಗ ಭಾರತ ಪಡೆಯು ಮಧ್ಯೆ ಪ್ರವೇಶಿಸಿ ಪಾಕಿಸ್ತಾನ ಸೈನ್ಯದ ಮುನ್ನಡೆಯನ್ನು ತಡೆಗಟ್ಟಿತು.

ಸ್ವಾತಂತ್ರ್ಯಪ್ರಾಪ್ತಿ ಹಾಗೂ ದೇಶ ವಿಭಜನೆಯ ಅನಂತರ ೧೯೪೭ರ ಅಕ್ಟೋಬರ್‌ನಲ್ಲಿ ನಡೆದ ಮತೀಯ ಗಲಭೆಯನ್ನು ನಿಯಂತ್ರಿಸಲು ಕಾಶ್ಮೀರ ರಾಜ್ಯ ಸರ್ಕಾರವು ಸಮರ್ಥವಾಗಿರಲಿಲ್ಲ. ಇದೇ ಸಮಯದಲ್ಲಿ ಶ್ರೀನಗರವನ್ನು ಆಕ್ರಮಿಸಿಕೊಳ್ಳುವುದಕ್ಕಾಗಿ ಪಠಾಣ್ ಬುಡಕಟ್ಟಿನ ಧಾಳಿಕೋರರನ್ನು ಪಾಕಿಸ್ತಾನವು ಹರಿಬಿಟ್ಟಿತು. ಕಾಶ್ಮೀರ ರಕ್ಷಣೆಯ ಭಾರವನ್ನು ನ್ಯಾಷನಲ್ ಕಾನ್‌ಫರೆನ್ಸ್ ನೇತಾರರಾದ ಶೇಕ್ ಅಬ್ದುಲ್ಲಾಗೆ ವಹಿಸಿ ರಾಜನು ಪ್ರಾಣ ಉಳಿಸಿಕೊಳ್ಳಲು ಕಾಶ್ಮೀರದಿಂದ ಪಲಾಯನ ಮಾಡಿದನು. ಅಂದಿನ ಕಾಶ್ಮೀರದಲ್ಲಿ ಮತಾಂಧತೆಯ ಅತಿರೇಕವಿರಲಿಲ್ಲವಾಗಿ ಪಠಾಣ್ ಅಥವಾ ಪಾಕಿಸ್ತಾನಿ ಧಾಳಿಕೋರರಿಗೆ ಅಲ್ಲಿ ಸ್ವಾಗತವೇನೂ ದೊರೆಯಲಿಲ್ಲ. ಅಲ್ಲಿನ ಜನರಲ್ಲಿ ತಾವೆಲ್ಲ ಕಾಶ್ಮೀರಿಗಳೆಂಬ ಭಾವನೆಯು – ಕಾಶ್ಮೀರತ್ವವು – ಆಳವಾಗಿ ಬೇರೂರಿದ್ದುದರಿಂದ ರಾಜಕೀಯ ಆಗುಹೋಗುಗಳಲ್ಲಿ ಮತಧರ್ಮಕ್ಕೆ ಪ್ರಾಧಾನ್ಯ ಕೊಡಲು ಅವರು ನಿರಾಕರಿಸಿದರು.




ಕಾಶ್ಮೀರದ ವೈಶಿಷ್ಟ್ಯವಿರುವುದೇ ಇಲ್ಲಿ. ಅದು ಹಲವು ಮತಧರ್ಮಗಳ ಮತ್ತು ಸಂಸ್ಕೃತಿಗಳ ಸಂಯೋಜನೆಯಾಗಿದೆ. ತನ್ನ ಪ್ರಾಚೀನ ಪರಂಪರೆಯನ್ನು ಬೀದಿಗೆಸೆಯದೆ, ಸಾರಾಸಾರ ವಿವೇಚನೆಯಿಂದ ಹೊಸ ಪಂಥಗಳನ್ನು ತನ್ನಲ್ಲಿಗೆ ಬರಮಾಡಿಕೊಂಡಿದೆ. ಜೆ.ಎಂ.ಸಿ. ಸೂಫಿ ತಮ್ಮ ಚಿರಸ್ಥಾಯಿ ಗ್ರಂಥದಲ್ಲಿ ಹೇಳುತ್ತಾರೆ: ''ಬೌದ್ಧಪಂಥ, ವೇದಾಂತ ಬೋಧನೆ, ಇಸ್ಲಾಂ ಧರ್ಮದ ಅನುಭಾವ ಇಲ್ಲಿ ಹಿತಕರ ಸಂಬಂಧವನ್ನೂ, ಸಾಮರಸ್ಯವನ್ನೂ ಕಂಡುಕೊಂಡಿವೆ'' ಎಂದು. ದೂರದೇಶಗಳಿಂದ ವಲಸೆ ಬಂದ ಜನರು ಕಾಶ್ಮೀರದ ಸಂಸ್ಕೃತಿ, ನಾಗರಿಕತೆ, ಆಚಾರ ವಿಚಾರಗಳನ್ನು ತಮ್ಮಲ್ಲಿ ಅಳವಡಿಸಿಕೊಂಡದ್ದರಿಂದ, ಅಲ್ಲಿನ ಜನರೊಡನೆ ವೈವಾಹಿಕ ಸಂಬಂಧಗಳನ್ನು ಬೆಳೆಸಿದ್ದರಿಂದ 'ಕಾಶ್ಮೀರೇತರ' ಎನ್ನಬಹುದಾದ ಗುಣಲಕ್ಷಣಗಳು ಮರೆಗೆ ಸರಿದುಬಿಟ್ಟವು.

ಅಕ್ಬರನು ಕಾಶ್ಮೀರವನ್ನು ಸ್ವಾಧೀನಪಡಿಸಿಕೊಂಡು ಈ ದೇಶದ ಮೇಲೆ ಪರಕೀಯ ಆಡಳಿತದ ಯುಗವನ್ನು ಆರಂಭಿಸಿದನು. ಹಲವು ತಲೆಮಾರುಗಳ ನಂತರ ಡೋಗ್ರಾ ರಾಜರು ಅಧಿಕಾರಕ್ಕೆ ಬಂದರು. ಹೀಗಾಗಿ ಭಾರತ ಸ್ವಾತಂತ್ರ್ಯ ಸಂಗ್ರಾಮದ ಕಾಲದಲ್ಲಿ ಮುಸಲ್ಮಾನನಲ್ಲದ, ಕಾಶ್ಮೀರಿಯೂ ಅಲ್ಲದ ಡೋಗ್ರಾ ವಂಶಸ್ಥನು ರಾಜನಾಗಿದ್ದನು. ವಿದೇಶೀ ಆಳ್ವಿಕೆಯ ವಿರುದ್ಧ ಭಾರತದಲ್ಲಿ ಚಳುವಳಿ ನಡೆಯುವಾಗ 'ಭಾರತ ರಾಷ್ಟ್ರೀಯ ಕಾಂಗ್ರೆಸ್'ಗೆ ಸಮಾನಾಂತರವಾಗಿ 'ನ್ಯಾಷನಲ್ ಕಾನ್‌ಫರೆನ್ಸ್' ಜನ್ಮತಾಳಿ ಮುಂದೆ ''ಕಾಶ್ಮೀರ ಬಿಟ್ಟುತೊಲಗಿ'' ಚಳುವಳಿಯನ್ನು ನಡೆಸಿತು.

ಸ್ವಾತಂತ್ರ್ಯಾನಂತರ ಸಾರ್ವಭೌಮಾಧಿಕಾರವು ರಾಜನಿಗೆ ಸೇರಿದುದು ಎಂದು ಜಿನ್ನಾ ಅಭಿಪ್ರಾಯಪಟ್ಟರೆ ಅದಕ್ಕೆ ವಿರುದ್ಧವಾಗಿ ಸಾರ್ವಭೌಮಾಧಿಕಾರವು ಜನರಿಗೆ ಸೇರಿದುದೆಂದು ಗಾಂಧಿ ಮತ್ತು ನೆಹರೂ ಪ್ರತಿಪಾದಿಸಿದರು. ಜಿನ್ನಾರ ನಿಲುವು ಮತ್ತು ಪಾಕಿಸ್ತಾನದ ಕಾರ್ಯವಿಧಾನಗಳಿಗೂ ಗಾಂಧಿ, ನೆಹರೂ ಮೊದಲಾದವರ ಮತಧರ್ಮ ನಿರಪೇಕ್ಷ, ಪ್ರಜಾಪ್ರಭುತ್ವವಾದಿ ನಿಲುವಿಗೂ ಧ್ರುವಗಳಷ್ಟು ಅಂತರ. ಶೇಕ್ ಅಬ್ದುಲ್ಲಾ ನೇತೃತ್ವದ ನ್ಯಾಷನಲ್ ಕಾನ್‌ಫರೆನ್ಸಿನ ನಿಲುವು ಹಾಗೂ ಕಾಶ್ಮೀರಿ ಜನರ ಆಸೆ ಆಕಾಂಕ್ಷೆಗಳು ಭಾರತದ ನಾಯಕರ ನಿಲುವಿನೊಂದಿಗೆ ಹೊಂದಿಕೊಂಡುದರಲ್ಲಿ ಆಶ್ಚರ್ಯವಿಲ್ಲ. ಕಾಶ್ಮೀರವನ್ನು ರಕ್ಷಿಸಲು ತನ್ನ ಅಸಾಮರ್ಥ್ಯ ಹಾಗೂ ತನ್ನ ಮೇಲಿದ್ದ ಒತ್ತಡಗಳಿಂದಾಗಿ ರಾಜಾ ಹರಿಸಿಂಗ್ ತನ್ನನ್ನು ರಕ್ಷಿಸಿ ಮುಗ್ಗಟ್ಟಿನಿಂದ ಬಿಡಿಸಬೇಕೆಂದು ಭಾರತ ಸರ್ಕಾರವನ್ನು ಕೇಳಿಕೊಂಡನು. ಇದಕ್ಕೆ ಪ್ರತಿಯಾಗಿ ಪಾಕಿಸ್ತಾನದ ಧಾಳಿಯನ್ನು ಹಿಮ್ಮೆಟ್ಟಿಸಲು ತನ್ನ ಸೈನ್ಯವನ್ನು ಕಳಿಸುವ ಮುಂಚೆ ಕಾಶ್ಮೀರವು ಸೇರ್ಪಡೆಯಾಗಬೇಕೆಂದು ಭಾರತವು ನಿರೀಕ್ಷಿಸಿತು. ಆಗ ಭಾರತ ಸಂವಿಧಾನದ ೩೭೦ನೇ ವಿಧಿಯ ಷರತ್ತಿನೊಡನೆ ಸೇರ್ಪಡೆಯ ಒಪ್ಪಂದವು ಜಾರಿಗೆ ಬಂದಿತು. ಇದು, ಕಾಶ್ಮೀರವು ಭಾರತದೊಡನೆ ಅಂತರ್ಗತವಾಗುವಿಕೆ ಅಥವಾ ಐಕ್ಯವಾಗುವಿಕೆಯಲ್ಲ. ರಾಜ್ಯ ರಕ್ಷಣೆ, ಹಣ ಚಲಾವಣೆ (ಕರೆನ್ಸಿ), ವಿದೇಶ ವ್ಯವಹಾರ, ಸಂಪರ್ಕ ಸಾಧನಗಳನ್ನು ಭಾರತ ಸರ್ಕಾರವು ನೋಡಿಕೊಳ್ಳಬೇಕು. ಕಾಶ್ಮೀರವು ತನ್ನದೇ ಆದ ಸಂವಿಧಾನ, ಧ್ವಜ, 'ಸದರ್-ಇ-ರಿಯಾಸತ್' ಮತ್ತು ಪ್ರಧಾನ ಮಂತ್ರಿಯನ್ನು ಹೊಂದಿರಬಹುದು. ಇದೇ ಭಾರತ ಸಂವಿಧಾನದ ೩೭೦ನೇ ವಿಧಿಯ ಸಾರಾಂಶ.

ಸೇರ್ಪಡೆಯ ಪ್ರಕ್ರಿಯೆಯನ್ನು ಸಮರ್ಥಿಸುತ್ತ ಪಂಡಿತ್ ನೆಹರು ೧೯೪೭ರ ನವೆಂಬರ್ ೨ರಂದು ರಾಷ್ಟ್ರವನ್ನುದ್ದೇಶಿಸಿ ಮಾಡಿದ ಭಾಷಣದಲ್ಲಿ ''ಕಾಶ್ಮೀರ ಸರ್ಕಾರ ಮತ್ತು ನ್ಯಾಷನಲ್ ಕಾನ್‌ಫರೆನ್ಸ್‌ಗಳೆರಡೂ ಸೇರ್ಪಡೆಯನ್ನು ಒಪ್ಪಿಕೊಂಡು ಭಾರತವು ವಾಯು ಪಡೆಯನ್ನು ಕಳಿಸುವಂತೆ ನಮ್ಮನ್ನು ಒತ್ತಾಯಿಸಿದವು; ಆದರೆ, ಕಾಶ್ಮೀರದಲ್ಲಿ ಶಾಂತಿ ಮತ್ತು ಕಾನೂನು ವ್ಯವಸ್ಥೆಗಳು ಸ್ಥಾಪನೆಯಾದ ನಂತರ ಸೇರ್ಪಡೆಯ ಒಪ್ಪಂದವನ್ನು ಕಾಶ್ಮೀರ ಜನತೆಯು ಅನುಮೋದಿಸಬೇಕೆಂಬ ಷರತ್ತು ಹಾಕಿದವು'' ಎಂದು ಹೇಳಿದರು.

ಪಾಕಿಸ್ತಾನದ ಆಕ್ರಮಣವನ್ನು ತೆರವುಗೊಳಿಸಬೇಕು ಮತ್ತು ಕಾಶ್ಮೀರ ಪ್ರದೇಶದಲ್ಲಿ ಜನಾಭಿಪ್ರಾಯ ಸಂಗ್ರಹದ ಮೇಲ್ವಿಚಾರಣೆ ವಹಿಸಬೇಕೆಂದು ಭಾರತವು ವಿಶ್ವಸಂಸ್ಥೆಯನ್ನು ಕೇಳಿಕೊಂಡಿತು. ಈ ಬೇಡಿಕೆಯಿಂದಾಗಿ 'ಕಾಶ್ಮೀರ ಸಮಸ್ಯೆ'ಯು ವಿಶ್ವ ರಾಷ್ಟ್ರ ಸಂಸ್ಥೆಯನ್ನು ಪ್ರವೇಶಿಸಿತು. ಶಾಂತಿಯುತ ಪರಿಹಾರವೊಂದನ್ನು ಕಂಡುಹಿಡಿಯುವುದಕ್ಕಾಗಿ ಈ ವಿಷಯವು ವಿಶ್ವಸಂಸ್ಥೆಯ ಭದ್ರತಾ ಮಂಡಲಿಗೆ ಹೋಯಿತು. ಭಾರತದ ಗೌರ್ನರ್ ಜನರಲ್ ಆಗಿದ್ದ ಮೌಂಟ್‌ಬೇಟನ್ ''ಸೇರ್ಪಡೆಯು ವಿವಾದಾಸ್ಪದವಾಗಿರುವುದರಿಂದ ಈ ಪ್ರಶ್ನೆಯು ರಾಜ್ಯದ ಜನತೆಯ ಇಷ್ಟದ ಪ್ರಕಾರವೇ ನಿರ್ಧಾರವಾಗಬೇಕು; ಕಾಶ್ಮೀರದ ಮೇಲಿನ ಆಕ್ರಮಣವು ತೆರವಾಗಿ, ಕಾನೂನು ವ್ಯವಸ್ಥೆಯು ಸಹಜ ಸ್ಥಿತಿಗೆ ಮರಳಿದ ಅನಂತರ ಜನಮತ ಗಣನೆಯ ಮೂಲಕ ಆ ರಾಜ್ಯದ ಆಡಳಿತ ವ್ಯವಸ್ಥೆಯನ್ನು ನಿರ್ಧರಿಸಬೇಕು'' ಎಂಬುದು ನಮ್ಮ ಸರ್ಕಾರದ ಅಪೇಕ್ಷೆಯಾಗಿದೆಯೆಂದು ವಿಶ್ವಸಂಸ್ಥೆಗೆ ಬರೆದರು. ಹೀಗೆ ಎರಡು ವಿಷಯಗಳನ್ನು ಲಗತ್ತಿಸಿದ್ದರಿಂದಾಗಿ ಸಮಸ್ಯೆಯು ಮತ್ತಷ್ಟು ಜಟಿಲವಾಯಿತು. ಪಾಕಿಸ್ತಾನದ ಆಕ್ರಮಣವು ತೆರವಾಗಲೇ ಇಲ್ಲವಾಗಿ ಜನಮತಗಣನೆಯನ್ನು ಅನಿರ್ದಿಷ್ಟಕಾಲ ಮುಂದೂಡಬೇಕಾಯಿತು. ಹೀಗಾಗಿ ಕಾಶ್ಮೀರ ಜನತೆಯ ಸ್ವಯಂ ನಿರ್ಧಾರದ ಬಗೆಗೆ ಜನಮತಗಣನೆ ನಡೆಸಬೇಕೆಂದು ವಿಶ್ವಸಂಸ್ಥೆಯು ಪ್ರಾಯೋಜಿಸಿದ ನಿರ್ಣಯವು ರಾಜಕೀಯ ಇಚ್ಛಾಶಕ್ತಿಯ ಅಭಾವದಿಂದಾಗಿ ಜಾರಿಗೆ ಬರದೆಯೇ ಉಳಿದಿದೆ.

ಸೇರ್ಪಡೆಯ ಒಪ್ಪಂದದ ಅನಂತರ ಶೇಕ್ ಅಬ್ದುಲ್ಲಾ ನೇತೃತ್ವದಲ್ಲಿ ತುರ್ತು ಸರ್ಕಾರವೊಂದು ಅಸ್ತಿತ್ವಕ್ಕೆ ಬಂದಿತು. ೧೯೫೧ರಲ್ಲಿ ಭಾರತಕ್ಕೆ ಸೇರಿದ ಕಾಶ್ಮೀರದ ಭಾಗದಲ್ಲಿ ಚುನಾವಣೆಗಳು ನಡೆದು ನ್ಯಾಷನಲ್ ಕಾನ್‌ಫರೆನ್ಸ್ ಪಕ್ಷವು ಅಧಿಕಾರ ವಹಿಸಿಕೊಂಡಿತು. ಈ ಮೊದಲೇ ಹೇಳಿದಂತೆ ಜಮ್ಮು-ಕಾಶ್ಮೀರ ಸೇರ್ಪಡೆಯ ಒಪ್ಪಂದದಲ್ಲಿ ಹೇಳಿದ್ದಂತೆ, ಸಂವಿಧಾನದ ೩೭೦ನೇ ವಿಧಿಯ ಪ್ರಕಾರ ಶೇಕ್ ಅಬ್ದುಲ್ಲಾ ಕಾಶ್ಮೀರದ ಪ್ರಧಾನ ಮಂತ್ರಿಯಾದರು. ೧೯೫೨ರಲ್ಲಿ ನೆಹರೂ ಮತ್ತು ಶೇಕ್ ಅಬ್ದುಲ್ಲಾ ನಡುವೆ ನಡೆದ ಮಾತುಕತೆಯ ಪ್ರಕಾರ ಕಾಶ್ಮೀರದ ಬೇರೆ ಬೇರೆ ಪ್ರದೇಶಗಳಿಗೆ ಸ್ವಾಯತ್ತತೆ ನೀಡಬೇಕಾಗಿತ್ತು; ಆದರೆ ಇದು ಜಾರಿಗೆ ಬರಲಿಲ್ಲ. ಈ ವೇಳೆಗೆ ಇಂದಿನ ಭಾಜಪದ ಪೂರ್ವರೂಪವಾಗಿದ್ದ ಜನಸಂಘದ ಪರಮಮಿತ್ರ ಪಕ್ಷ 'ಪ್ರಜಾಪರಿಷತ್' ಎಂಬುದು ಕಾಶ್ಮೀರವು ಸಂಪೂರ್ಣವಾಗಿ ಭಾರತದೊಡನೆ ಐಕ್ಯವಾಗಬೇಕೆಂದು ಒತ್ತಾಯಿಸತೊಡಗಿತು.

**ಕಾಶ್ಮೀರವು ಭಾರತದಿಂದ ಹೊರಚ್ಚಾಗಿದೆ ಎಂಬಂಥ ವಿಚಾರಕ್ಕೆ ಸ್ಪಷ್ಟರೂಪ ಬರತೊಡಗಿದುದು ಅದು ಭಾರತದೊಡನೆ ಸಂಪೂರ್ಣವಾಗಿ ವಿಲೀನವಾಗಬೇಕೆಂಬ ಒತ್ತಾಯವು ಹೆಚ್ಚಿದಾಗ.** ಈ ಪ್ರಶ್ನೆಯು ಒಂದು ನಿರ್ಣಾಯಕ ಘಟ್ಟವನ್ನು ಮುಟ್ಟಿದುದು ಜನಸಂಘದ ಪ್ರಮುಖ ನಾಯಕರಲ್ಲೊಬ್ಬರಾಗಿದ್ದ ಶ್ಯಾಮ ಪ್ರಸಾದ ಮುಖರ್ಜಿಯವರ ನೇತೃತ್ವದಲ್ಲಿ ಜನಸಂಘದವರು ನೇರವಾಗಿಯೂ, ಕಾಂಗ್ರೆಸ್ ಪಕ್ಷದ ಕೆಲವು ಗಣ್ಯರು ಪರೋಕ್ಷವಾಗಿಯೂ ಸಂಪೂರ್ಣವಿಲೀನವನ್ನು ಪ್ರತಿಪಾದಿಸತೊಡಗಿದಾಗ. ಪಂಡಿತ್ ನೆಹರೂ ಅವರು ಹೊರಗಿನಿಂದ ಜನಸಂಘದ ಮತ್ತು ಒಳಗಿನಿಂದ ತಮ್ಮ ಮಂತ್ರಿ ಮಂಡಲದ ಕೆಲವು ಸದಸ್ಯರ ಒತ್ತಾಯಕ್ಕೆ ಒಳಗಾದರು. ಆದರೂ ಸಹ ನೆಹರೂ ಜಾಣ್ಮೆಯಿಂದ ''ನಿಜವಾಗಿ ಐಕ್ಯವಾಗಬೇಕಾದರೆ ನಾವು ಉದಾರ ಬುದ್ಧಿಯಿಂದ ವಾಸ್ತವತೆಯನ್ನು ಅರ್ಥಮಾಡಿಕೊಳ್ಳುವ, ಸ್ವೀಕರಿಸುವ ದೂರದೃಷ್ಟಿಯುಳ್ಳವರಾಗಿರಬೇಕು; ನಿಜವಾದ ಐಕ್ಯತೆಯೆಂಬುದು ಕೆಲವು ಕಾಯ್ದೆ ಕಾನೂನುಗಳ ಮೂಲಕ ನಮ್ಮ

ಅಭಿಪ್ರಾಯವನ್ನು ಇತರರ ಮೇಲೆ ಹೇರುವುದರಿಂದ ಬರುವುದಿಲ್ಲ. ಅದು ಮನಸ್ಸು ಮತ್ತು ಹೃದಯಗಳು ಒಂದಾಗುವ ವಿಚಾರ'' ಎಂದು ಯುಕ್ತಿಯುಕ್ತವಾದ ಮಾತು ಹೇಳಿದರು. ತಮ್ಮ ವೈಯಕ್ತಿಕ ಅಭಿಪ್ರಾಯಗಳು, ನಂಬಿಕೆಗಳು ಏನೇ ಇರಲಿ; ಕಾಶ್ಮೀರದ ನಾಯಕತ್ವದ ಮೇಲೆ ಸಂಪೂರ್ಣ ಭರವಸೆ ಇಡುವುದು ನೆಹರೂ ಅವರಿಗೂ ಸಾಧ್ಯವಾಗಲಿಲ್ಲ. ಆನಂತರ ಒಬ್ಬರಾದ ಮೇಲೆ ಒಬ್ಬರು ಬಂದ ಭಾರತದ ಪ್ರಧಾನ ಮಂತ್ರಿಗಳಿಂದಲೂ ಇದೇ ತಪ್ಪು ಮುಂದುವರಿಯಿತು. ಕಾಲಕ್ರಮದಲ್ಲಿ ಕಾಶ್ಮೀರ ಜನತೆಯಲ್ಲಿ ಮಾತ್ರ, ತಾವು ಪರಕೀಯರು, ಆಕ್ರಮಣಕ್ಕೊಳಗಾದವರು ಎಂಬ ಭಾವನೆ ಬಲಿಯಿತು.

ಕಾಶ್ಮೀರದ ಜನತೆಯಲ್ಲಿ ಪರಕೀಯತೆಯ ಭಾವನೆಯು ಅಂಕುರಿಸಿ ಬೆಳೆದುಬಂದ ಬಗೆಯನ್ನು ಅಸ್ಗರ್ ಆಲಿ ಇಂಜಿನಿಯರ್ ಬಹು ಸಮರ್ಥವಾಗಿ ಸಂಗ್ರಹಿಸಿದ್ದಾರೆ: ''ಮೊದಲ ತಪ್ಪು ನಡೆದದ್ದು ಜವಹರಲಾಲ್ ನೆಹರೂ ಪ್ರಧಾನ ಮಂತ್ರಿಯಾಗಿದ್ದಾಗ, ಕಾಂಗ್ರೆಸ್ ಸರ್ಕಾರದಿಂದ. ನೆಹರೂ ಕಾಶ್ಮೀರದೊಂದಿಗೆ ಭಾವನಾತ್ಮಕ ಸಂಬಂಧ ಹೊಂದಿದ್ದರು; ಹೀಗಾಗಿ ೩೭೦ನೇ ವಿಧಿಯ ಪ್ರಕಾರ ಕಾಶ್ಮೀರಕ್ಕೆ ಸ್ವಾಯತ್ತತೆ ಕೊಡುವುದರಲ್ಲಿ ಅವರು ಪ್ರಾಮಾಣಿಕವಾಗಿ ಆಸಕ್ತರಾಗಿದ್ದರೇ ಎಂಬುದನ್ನು ಹೇಳುವುದು ಕಷ್ಟ. ಸ್ವಾಯತ್ತತೆಗಾಗಿ ಪಟ್ಟು ಹಿಡಿದ ಶೇಕ್ ಅಬ್ದುಲ್ಲಾರನ್ನು ಬಂಧನದಲ್ಲಿಟ್ಟಮೇಲೆ, ಕೇಂದ್ರ ಸರ್ಕಾರವು ಕಾಶ್ಮೀರದ ಸ್ವಾಯತ್ತತೆಯನ್ನು ಲಘುವಾಗಿ ಕಂಡು ಆ ರಾಜ್ಯದ ಮೇಲೆ ತನ್ನ ಹಿಡಿತವನ್ನು ಬಿಗಿಗೊಳಿಸಲು ಕಾತುರವಾಗಿತ್ತು. ಶೇಕ್ ಅಬ್ದುಲ್ಲಾ ಆನಂತರ ಅಧಿಕಾರಕ್ಕೆ ಬಂದ ಮುಖ್ಯಮಂತ್ರಿಗಳು ಕೇಂದ್ರ ಸರ್ಕಾರಕ್ಕೆ ತಲೆಬಾಗುವವರಾಗಿದ್ದುದರಿಂದ ಇದೇನೂ ಕಷ್ಟವಾಗಲಿಲ್ಲ. ಕಾಶ್ಮೀರ ವಿಧಾನಸಭೆಯು ನಿಧಾನವಾಗಿ ತನ್ನ ಸ್ವಾಯತ್ತತೆಯನ್ನು ಕೇಂದ್ರ ಸರ್ಕಾರಕ್ಕೆ ಒಪ್ಪಿಸುವ ನಿರ್ಣಯ ಮಾಡಿತು. ಮೊದಲ ಹೆಜ್ಜೆಯಾಗಿ 'ಸದರ್-ಇ-ರಿಯಾಸತ್' ಮತ್ತು ಪ್ರಧಾನ ಮಂತ್ರಿ ಹುದ್ದೆಗಳನ್ನು ಕ್ರಮವಾಗಿ ರಾಜ್ಯಪಾಲ ಮತ್ತು ಮುಖ್ಯಮಂತ್ರಿಗಳಿಗೆ ಪರಿವರ್ತಿಸಿತು. ಆನಂತರ ಸರ್ವೋಚ್ಚ ನ್ಯಾಯಾಲಯದ ವ್ಯಾಪ್ತಿಯನ್ನು ಕಾಶ್ಮೀರಕ್ಕೂ ವಿಸ್ತರಿಸುವಂತೆ ಕೇಂದ್ರ ಸರ್ಕಾರವನ್ನು ಕೇಳಿಕೊಂಡಿತು. ಶೇಕ್ ಅಬ್ದುಲ್ಲಾ ಬಂಧಮುಕ್ತರಾಗುವ ವೇಳೆಗೆ ಕಾಶ್ಮೀರ ವಿಧಾನಸಭೆಯು ಈ ಎಲ್ಲ ಸ್ವಾಯತ್ತ ಅಧಿಕಾರಗಳನ್ನು ಸ್ವ-ಇಚ್ಛೆಯಿಂದ ಕೇಂದ್ರ ಸರ್ಕಾರಕ್ಕೆ ಒಪ್ಪಿಸಿಕೊಟ್ಟಿತ್ತು.''

ಶ್ಯಾಮ ಪ್ರಸಾದ ಮುಖರ್ಜಿಯವರ ಮರಣಾನಂತರ ಜನಸಂಘೀಯ ಶಕ್ತಿಗಳು ಕೇಂದ್ರ ಮತ್ತು ಕಾಶ್ಮೀರ ರಾಜ್ಯ ಸಂಬಂಧದ ಬಗೆಗೆ ಅಸಹಕಾರದ ನಿಲುವನ್ನು ಗಟ್ಟಿಗೊಳಿಸಿಕೊಂಡವು. ಈವರೆಗೂ ಭಾರತದ ಭಕ್ತನಂತೆ ಚಿತ್ರಿಸಲ್ಪಟ್ಟಿದ್ದ ಶೇಕ್ ಅಬ್ದುಲ್ಲಾ ಇದ್ದಕ್ಕಿದ್ದಂತೆ ವಿದ್ರೋಹಿಯೂ ಮತೀಯವಾದಿಯೂ ಆಗಿಬಿಟ್ಟರು ! ಇತ್ತ ಶೇಕ್ ಅಬ್ದುಲ್ಲಾ ಮನೋಭಾವವೂ ಬದಲಾಯಿತು. ಈವರೆಗೂ ಕಾಶ್ಮೀರದ ಅನನ್ಯತೆಗೆ ಅಪಾಯವಿರುವುದು ಪಾಕಿಸ್ತಾನದಿಂದ ಎಂದು ಭಾವಿಸಿದ್ದ ಶೇಕ್ ಅಬ್ದುಲ್ಲಾ ಮತ್ತು ಕಾಶ್ಮೀರದ ಜನತೆ, ಕಾಶ್ಮೀರದ ಅನನ್ಯತೆಯನ್ನು ದಮನ ಮಾಡುತ್ತಿರುವುದು ಭಾರತವೇ ಸರಿ ಎಂದು ಭಾವಿಸತೊಡಗಿದರು. ಸೇರ್ಪಡೆಯ ಬಗೆಗೆ ಶೇಕ್ ಅಬ್ದುಲ್ಲಾ ಇಬ್ಬಗೆಯ ಮಾತಾಡತೊಡಗಿದರು. ಇನ್ನೂ ಕೆಲವು ಸಂಗತಿಗಳು ಕೂಡಿಕೊಂಡು ಕಾಶ್ಮೀರದ ಪರಿಸ್ಥಿತಿಯನ್ನು ಮತ್ತಷ್ಟು ಗೊಂದಲಗೊಳಿಸಿದವು. ಅಂತಿಮವಾಗಿ, ೧೯೫೩ರ ಆಗಸ್ಟ್ ೯ರಂದು ಆತನನ್ನು ಅಧಿಕಾರದಿಂದ ಕಿತ್ತುಹಾಕಿ ಬಂಧನದಲ್ಲಿಡಲಾಯಿತು. ಹೀಗೆ, ೧೯೫೩ನೇ ವರ್ಷವು ಕಾಶ್ಮೀರವನ್ನು ಭಾರತದ ಇತರ ಭಾಗಗಳಿಂದ ಭಾವನಾತ್ಮಕವಾಗಿ ಪ್ರತ್ಯೇಕಿಸಿದ ವರ್ಷವೆಂದು ಹೇಳಬಹುದು.

ಕಾಶ್ಮೀರವನ್ನು ಭಾರತಕ್ಕೆ ಸೇರ್ಪಡೆ ಮಾಡಲು ಶೇಕ್ ಅಬ್ದುಲ್ಲಾನೇ ಕಾರಣವೆಂಬ ಸಂಶಯ ಕಾಶ್ಮೀರದ ಕೆಲವು ಪಂಗಡಗಳಲ್ಲಾದರೂ ಮೊದಲಿನಿಂದ ಇತ್ತು. ಈಗ ಸಮುದಾಯದ ಬಹುತೇಕ ಗುಂಪುಗಳಲ್ಲಿ ತಾವು ಪರಕೀಯರಾದೆವೆಂಬ ಭಾವನೆ ಹೆಮ್ಮರವಾಗಿ ಬೆಳೆಯಿತು. ನೆಹರೂ ಅನಂತರದ ಕಾಲದಲ್ಲಿ ಭಾರತ ಸಂವಿಧಾನದ ಹಲವಾರು ಅಂಶಗಳನ್ನು ಕಾಶ್ಮೀರಕ್ಕೂ ಅನ್ವಯಿಸುತ್ತ ಹೋದದ್ದರಿಂದ, ತಮ್ಮ ಅನನ್ಯತೆಗೆ ಧಕ್ಕೆಯುಂಟಾಯಿತೆಂದು ಅಲ್ಲಿನ ಜನ ಸಿಟ್ಟಿಗೆದ್ದರು. ಜನರ ಈ ಅತೃಪ್ತಿಯನ್ನೇ ನೆಪ ಮಾಡಿಕೊಂಡು ಪಾಕಿಸ್ತಾನವು ತನ್ನ ಸಶಸ್ತ್ರ ಯೋಧರನ್ನು ಭಾರತದೊಳಕ್ಕೆ ನುಸುಳಿಸತೊಡಗಿತು. ಇಷ್ಟಾದರೂ ಪಾಕಿಸ್ತಾನಿ ಹೋರಾಟಗಾರರಿಗೆ ಕಾಶ್ಮೀರದಲ್ಲಿ ಸ್ವಾಗತವೇನೂ ದೊರೆಯಲಿಲ್ಲ. ಕಾಶ್ಮೀರಿ ಜನ ಭಾರತದ ಬಗೆಗೆ ಅಸಮಾಧಾನ ತಾಳಿದ್ದರೂ, ಪಾಕಿಸ್ತಾನ ಯೋಧರು ತಮ್ಮನ್ನು ಮುಕ್ತಗೊಳಿಸಲು ಬಂದವರೆಂದೇನೂ ಭಾವಿಸಿದಂತೆ ತೋರುವುದಿಲ್ಲ.

ಸಂಬಂಧಿಸಿದ ಪಕ್ಷಗಳ ಅಸಹಕಾರದಿಂದಾಗಿ, ಕಾಶ್ಮೀರ ಕಣಿವೆಯಲ್ಲಿ ಜನಮತ ಸಂಗ್ರಹ ನಡೆಸಬೇಕೆಂಬ ವಿಶ್ವಸಂಸ್ಥೆಯ ನಿರ್ಣಯವು ಜಾರಿಗೆ ಬರಲಿಲ್ಲವೆಂಬುದನ್ನು ನೋಡಿದೆವು. ಅದಕ್ಕೆ ಪಾಕಿಸ್ತಾನ ಮತ್ತು ಭಾರತ ತಮ್ಮ ಅಧೀನದಲ್ಲಿದ್ದ ಪ್ರದೇಶಗಳಿಂದ ಸೈನ್ಯವನ್ನು ಹಿಂತೆಗೆದುಕೊಳ್ಳಬೇಕೆಂಬ ಷರತ್ತೂ ಇದ್ದಿತು. ಯಾರೂ ಅದನ್ನು ಪಾಲಿಸುವ ಸ್ಥಿತಿಯಲ್ಲಿರಲಿಲ್ಲ. ಈ ಮಧ್ಯೆ ೧೯೬೫ರಲ್ಲಿ ಭಾರತ ಪಾಕಿಸ್ತಾನಗಳ ನಡುವೆ ನಡೆದ ಯುದ್ಧದ ಸಂಧಾನದಲ್ಲಿ ಮುಕ್ತಾಯಗೊಂಡಿತೆಂಬುದು ನಿಜ. ಶಾಂತಿ ಒಪ್ಪಂದಗಳು ಏರ್ಪಟ್ಟರೂ ಗಡಿ ಪರಿಸ್ಥಿತಿಯು ಬಿಗುವಿನಿಂದಲೇ ಮುಂದುವರಿಯಿತು. ೧೯೭೧ರಲ್ಲಿ ನಡೆದ ಎರಡನೇ ಯುದ್ಧದಿಂದ ಬಂಗ್ಲಾದೇಶದ ಉದಯವಾಯಿತು. ೧೯೭೨ರಲ್ಲಿ ಎರಡು ದೇಶಗಳ ನಡುವೆ ಏರ್ಪಟ್ಟ ಸಿಮ್ಲಾ ಒಪ್ಪಂದದ ಪ್ರಕಾರ, ಯುದ್ಧ ನಿಯಂತ್ರಣ ರೇಖೆಯನ್ನು ವಾಸ್ತವವಾದ ಅಂತಾರಾಷ್ಟ್ರೀಯ ಗಡಿರೇಖೆಯಾಗಿ ಇಟ್ಟುಕೊಂಡು ಕಾಶ್ಮೀರ ಸಮಸ್ಯೆಯನ್ನು ಬಗೆಹರಿಸಿಕೊಳ್ಳುವುದಾಗಿ ನಿರ್ಧರಿಸಿದವು. ಆದರೆ, ಸಿಮ್ಲಾ ಒಪ್ಪಂದವನ್ನು ತನ್ನ ಮೇಲೆ

ಬಲಾತ್ಕಾರವಾಗಿ ಹೇರಲಾಯಿತೆಂದು ಪ್ರಾಯಶಃ ಪಾಕಿಸ್ತಾನವು ಭಾವಿಸಿದೆ. ಆಗಿನ ಪಾಕಿಸ್ತಾನಿ ಪ್ರಧಾನಿ ಜುಲ್‌ಫಿಕರ್ ಆಲಿ ಭುಟ್ಟೋ ವಿರೋಧಿಗಳ ನಿಲುವಂತೂ ಇದೇ ಆಗಿದೆ. ಭುಟ್ಟೋ ಅನಂತರ ಅವರ ವಿರೋಧಿಗಳೇ ಪಾಕಿಸ್ತಾನದಲ್ಲಿ ಅಧಿಕಾರಕ್ಕೆ ಬಂದು ಭಾರತದೊಡನೆ ದ್ವೇಷ ಸಾಧನೆಯನ್ನು ಮುಂದುವರಿಸಿದ್ದಾರೆ. ಆದರೆ ತಮ್ಮೆರಡು ದೇಶಗಳ ನಡುವಿನ ಮಾತುಕತೆಗೆ ಸಿಮ್ಲಾ ಒಪ್ಪಂದವೇ ಆಧಾರವಾಗಿರಬೇಕೆಂದು ಭಾರತ ಪ್ರತಿಪಾದಿಸುತ್ತಾ ಬಂದಿದೆ.

ಬಾಂಗ್ಲಾ ವಿಭಜನೆಯು ಶೇಕ್ ಅಬ್ದುಲ್ಲಾ ಮತ್ತು ಭಾರತಗಳ ನಡುವೆ ಹೊಸದಾದ ಸಂಧಾನಕ್ಕೆ ಅವಕಾಶ ಮಾಡಿಕೊಟ್ಟಿತು. ೧೯೫೩ರ ಪೂರ್ವದ ಸ್ಥಾನಮಾನಗಳು ಕಾಶ್ಮೀರಕ್ಕೆ ದೊರೆಯಬೇಕೆಂಬ ಶೇಕ್ ಅಬ್ದುಲ್ಲಾ ಹಕ್ಕೊತ್ತಾಯವನ್ನು ಭಾರತವು ಒಪ್ಪಿದ ಮೇಲೆ ಅದಕ್ಕೆ ಪ್ರತಿಯಾಗಿ, ಪ್ರಾದೇಶಿಕ ಸ್ವಾಯತ್ತತೆಗೆ ಅವಕಾಶ ಮಾಡಿಕೊಡುವುದಾಗಿ ಹೇಳಿ ಶೇಕ್ ಅಬ್ದುಲ್ಲಾ ಮತ್ತೆ ಅಧಿಕಾರಕ್ಕೆ ಬಂದರು. ಕಾಶ್ಮೀರದಲ್ಲಿ ನಡೆದ ಎಲ್ಲ ಚುನಾವಣೆಗಳ ಪೈಕಿ ಅತ್ಯಂತ ನ್ಯಾಯಸಮ್ಮತವಾಗಿ, ಕಾನೂನು ಬದ್ಧವಾಗಿ ನಡೆದ ಮತದಾನದಲ್ಲಿ ಶೇಕ್ ಅಬ್ದುಲ್ಲಾ ಬಿರುಗಾಳಿಯಾಗಿ ಬೀಸಿದರು, ತಮ್ಮ ಅಮೋಘ ಜನಪ್ರಿಯತೆಯನ್ನು ಸಾಬೀತುಗೊಳಿಸಿದರು. ೧೯೮೩ರ ಚುನಾವಣೆಯಲ್ಲಿ ನ್ಯಾಷನಲ್ ಕಾನ್‌ಫರೆನ್ಸ್ ನಾಯಕತ್ವವನ್ನು ವಂಶಾನುಗತವಾಗಿ ಪಡೆದ ಶೇಕ್ ಅಬ್ದುಲ್ಲಾ ಮಗ ಫರೂಕ್ ಅಬ್ದುಲ್ಲಾ ಮತಗಳಿಕೆಯಲ್ಲಿ ಗೆದ್ದುದೇನೋ ನಿಜ. ಆದರೆ, ರಾಜೀವ್ ಗಾಂಧಿ ಸರ್ಕಾರವು ಕಾನೂನಿಗೆ ವಿರೋಧವಾಗಿ ರಾಜ್ಯ ಸರ್ಕಾರವನ್ನು ವಜಾ ಮಾಡಿತು. ಕಾಂಗ್ರೆಸ್‌ನೊಡನೆ ಅಧಿಕಾರ ಹಂಚಿಕೊಳ್ಳಲು ಸಮ್ಮತಿಸಿದಾಗ ಮಾತ್ರ ೧೯೮೬ರಲ್ಲಿ ಫರೂಕ್ ಅಬ್ದುಲ್ಲಾರನ್ನು ಮುಖ್ಯಮಂತ್ರಿಯಾಗಿ ಪುನಃ ಅಧಿಕಾರಕ್ಕೆ ತರಲಾಯಿತು. ಈ ಪ್ರಕ್ರಿಯೆಯಿಂದ ತೆರವಾದ ವಿರೋಧ ಪಕ್ಷದ ಸ್ಥಾನವನ್ನು ತುಂಬಲು ಬಂದುದು 'ಮುಸ್ಲಿಂ ಯುನೈಟೆಡ್ ಫ್ರಂಟ್'. ತನ್ನನ್ನು ತುಚ್ಛವಾಗಿ ಕಂಡು ಅಧಿಕಾರದಿಂದ ಕಿತ್ತುಹಾಕಿದ ಕಾಂಗ್ರೆಸ್‌ನೊಡನೆ ಫರೂಕ್ ಅಬ್ದುಲ್ಲಾ ಹೊಂದಾಣಿಕೆ ಮಾಡಿಕೊಂಡುದು ಮುಸ್ಲಿಂ ಬಾಂಧವರನ್ನು ತೀವ್ರವಾಗಿ ಕೆರಳಿಸಿತು. ತಮಗಾದ ಅವಮಾನವನ್ನೇ ಬಂಡವಾಳ ಮಾಡಿಕೊಂಡ ಮತಾಭಿಮಾನಿಗಳ ಗುಂಪು 'ಮುಸ್ಲಿಂ ಯುನೈಟೆಡ್ ಫ್ರಂಟ್' ಹೆಸರಿನಲ್ಲಿ ಚುನಾವಣೆಗಳನ್ನು ಬಹಿಷ್ಕರಿಸಿತು. ಇದರಿಂದ, ಜನರು ತಮ್ಮ ಅಭಿಪ್ರಾಯಗಳನ್ನು – ಅತೃಪ್ತಿ, ಅಸಮಾಧಾನಗಳನ್ನು ಕೂಡ – ಮತ ಧರ್ಮನಿರಪೇಕ್ಷ, ಪ್ರಜಾಪ್ರಭುತ್ವ ವಿಧಾನದಲ್ಲಿ ವ್ಯಕ್ತಪಡಿಸುವ ಅವಕಾಶಗಳಿಗೆ ತಡೆಯೊಡ್ಡಿದಂತಾಯಿತು. ಇಂತಹ ಪರಿಸ್ಥಿತಿಯಲ್ಲಿ ಹತಾಶೆಗೊಂಡ ಅಭ್ಯರ್ಥಿಗಳು, ಅವರ ಬೆಂಬಲಿಗರೂ ಸೇರಿದಂತೆ ಹಲವು ಯುವಜನರ ಗುಂಪುಗಳು ಮದ್ದು ಗುಂಡುಗಳನ್ನು ಹಿಡಿದು ಹೋರಾಟಕ್ಕೆ ಇಳಿದರು.

ಕಾಶ್ಮೀರವನ್ನು ಸ್ವತಂತ್ರಗೊಳಿಸುವ ನೆಪವೊಡ್ಡಿ, 'ಜಮ್ಮು ಮತ್ತು ಕಾಶ್ಮೀರ ವಿಮೋಚನಾ ರಂಗ' ವೆಂಬ ಹೆಸರಿನಲ್ಲಿ ತರಬೇತು ಪಡೆದ, ಶಸ್ತ್ರಸಜ್ಜಿತ ಹೋರಾಟಗಾರರನ್ನು ಭಾರತದ ಗಡಿಯೊಳಗೆ ನುಗ್ಗಿಸಲು ಪಾಕಿಸ್ತಾನವು ಈ ಅವಕಾಶವನ್ನು ಬಳಸಿಕೊಂಡಿತು. ಕಾಶ್ಮೀರ ಜನತೆಯಲ್ಲಿ ಉಂಟಾಗಿರುವ ಅತೃಪ್ತಿಯನ್ನು, ಭಾರತ ವಿರೋಧೀ ಭಾವನೆಯನ್ನು ಪಾಕಿಸ್ತಾನದ ಪರ ಬಲವಾಗಿ ಪರಿವರ್ತಿಸಲು ಆ ದೇಶವು ತನ್ನ ಪ್ರಯತ್ನವನ್ನು ಮುಂದುವರಿಸಿದೆ. ಅಕ್ಕಪಕ್ಕದ ದೇಶಗಳಿಂದ ಬಂದು, ಪಾಕಿಸ್ತಾನದಲ್ಲಿ ತರಬೇತಿ ಪಡೆದ ಯೋಧರು ನಾನಾ ರೂಪಗಳಲ್ಲಿ ನುಸುಳಿ ಬಂದು ಕಾಶ್ಮೀರದಲ್ಲಿ ಹಿಂದುಗಳನ್ನು, ಮುಸಲ್ಮಾನರನ್ನು ನಿರ್ದಯದಿಂದ ಕೊಲ್ಲುವುದರಲ್ಲಿ, ಆಸ್ತಿಪಾಸ್ತಿಗಳನ್ನು ಲೂಟಿ ಮಾಡುವುದರಲ್ಲಿ ನಿರತರಾಗಿದ್ದಾರೆ.

ಕಾಶ್ಮೀರಿಗಳ ದುರಾದೃಷ್ಟವೆಂದರೆ ''ಒಂದು ಎಸಳು ಹುಲ್ಲು ಕೂಡ ಬೆಳೆಯಲಾರದೆನಿಸಿರುವ'' ಈ ರಾಜ್ಯದ ಬಹು ಭಾಗವು ನೇರವಾಗಿ ಪಾಕಿಸ್ತಾನ, ಚೀನ ಮತ್ತು ಭಾರತಗಳಿಗೆ ರಾಜಕೀಯವಾಗಿ ತುಂಬ ಆಯಕಟ್ಟಿನ ಭೂಭಾಗವಾಗಿರು ವುದು. ಪರೋಕ್ಷವಾಗಿ, ದಕ್ಷಿಣ ಏಷ್ಯಾದ ಆಗುಹೋಗು ಗಳಲ್ಲಿ ಆಸಕ್ತವಾಗಿರುವ ಎಲ್ಲ ಬಲಾಢ್ಯ ದೇಶಗಳಿಗೂ ಕಾಶ್ಮೀರವು 'ಬೇಕಾಗಿದೆ'. ೮೦ರ ದಶಕದಿಂದೀಚೆಗೆ ಕಾಶ್ಮೀರದಲ್ಲಿ ಬಹಿರಂಗವಾಗಿಯೇ ಉಗ್ರಗಾಮಿ ಚಟುವಟಿಕೆಗಳು ನಡೆಯುತ್ತಿವೆ; ಪರಿಸ್ಥಿತಿಯು ದಿನದಿಂದ ದಿನಕ್ಕೆ ಹದಗೆಡುತ್ತಿದೆ. ಹೊರದೇಶಗಳಲ್ಲಿನ ಘಟನೆಗಳು ಕೂಡ ಸನ್ನಿವೇಶದ ಮೇಲೆ ಪ್ರಭಾವ ಬೀರಿವೆ. ಅಫ್ಘಾನಿಸ್ತಾನದಲ್ಲಿ ತಾಲಿಬಾನ್ ಉಗ್ರಗಾಮಿಗಳ ಮುನ್ನಡೆ, ಮಾಜಿ ರಷ್ಯಾ ವಿರೋಧಿ ಗೆರಿಲ್ಲಾ ಪಡೆಗಳು ಹೋರಾಟಕ್ಕೆ ಲಭ್ಯವಿರುವುದು, ಸೋವಿಯತ್ ಒಕ್ಕೂಟದ ವಿಘಟನೆಯ ಪರಿಣಾಮವಾಗಿ ಕೇಂದ್ರ ಏಷ್ಯಾದ ಬಾಡಿಗೆ ಹಂತಕರು ಸುಲಭವಾಗಿ ದೊರೆಯುವುದು - ಇವೆಲ್ಲ ಒಟ್ಟುಗೂಡಿ ಹಿಂಸಾಚಾರದ ತೀವ್ರತೆಯನ್ನು ಹೆಚ್ಚಿಸಿವೆ. ಹಿಂದೆಂದೂ ಇಲ್ಲದ ರೀತಿಯಲ್ಲಿ ಇಸ್ಲಾಂ ಮೂಲಭೂತವಾದವು 'ಪವಿತ್ರ ಯುದ್ಧ'ದ ವೇಷ ಹಾಕಿಕೊಂಡು ರುದ್ರತಾಂಡವವಾಡುತ್ತಿದೆ.

ಕಾಶ್ಮೀರದಲ್ಲಿ ನಡೆಯುತ್ತಿರುವ ಹಿಂಸಾಚಾರ ಮತ್ತು ಅದಕ್ಕೆ ಕೇಂದ್ರ ಸರ್ಕಾರವು ತೋರುತ್ತಿರುವ ಪ್ರತಿಕ್ರಿಯೆಯಿಂದಾಗಿ ಭಾರತದ ಪ್ರತಿಷ್ಠೆಯು ಗೊಂದಲಮಯವಾಗಿದೆ. ಅದು ಆಡಳಿತಾತ್ಮಕ (ಅಥವಾ ಸೈನಿಕ) ಪರಿಹಾರವನ್ನು ಒದಗಿಸುತ್ತ ರಾಜಕೀಯ ಘೋಷಣೆಗಳನ್ನು ಹೊರಡಿಸುವುದರಲ್ಲಿ ನಿರತವಾಗಿದೆ. ಸೈನ್ಯ ಶಕ್ತಿಯ ಮೂಲಕ ರಾಜ್ಯವನ್ನಾಳುವ ಪ್ರಯತ್ನಗಳು ಭಾರತಕ್ಕೆ ಆಕ್ರಮಣಶೀಲ ಆಡಳಿತವೆಂಬ ಕೆಟ್ಟ ಹೆಸರನ್ನು ತಂದಿವೆ. ಸತತವಾಗಿ ನಡೆಯುತ್ತಿರುವ ಸೈನಿಕ ಕಾರ್ಯಾಚರಣೆಗಳಿಂದಾಗಿ ಕಾಶ್ಮೀರದ ನಾಗರಿಕರು ಸ್ವಸ್ಥಳದಲ್ಲಿಯೇ ಸೆರೆಯಾಳುಗಳಾಗಿದ್ದಾರೆ. ಮಾನವ ಹಕ್ಕುಗಳ ಉಲ್ಲಂಘನೆಯ ಆರೋಪಗಳು ಮತ್ತೆ ಮತ್ತೆ ಕೇಳಿಬರುತ್ತಿವೆ. ಭಾರತ ಸರ್ಕಾರಕ್ಕೆ ಕಾಶ್ಮೀರಿಗಳ ಬೆಂಬಲ, ಸಹಾನುಭೂತಿಗಳು ಸಂಪೂರ್ಣ ನಷ್ಟವಾದಂತಿದೆ. ಅಷ್ಟೇ ಮಟ್ಟಿಗೆ ಅವರು ದಂಗೆಕೋರರ ದಾಳಿಗಳಿಂದಲೂ ರೋಸಿಹೋಗಿದ್ದಾರೆಂಬುದು ನಿಜ. ಕಾಶ್ಮೀರದ ಗಲಭೆಗೆ ಪಾಕಿಸ್ತಾನವು ನಿರಂತರವಾಗಿ ಹಣ ಮತ್ತು ನುರಿತ ಶಸ್ತ್ರಸನ್ನದ್ಧ ಹೋರಾಟಗಾರರನ್ನು ಸರಬರಾಜು ಮಾಡುತ್ತಿರುವುದರಿಂದ ವಾಸ್ತವವಾಗಿ ಸೈನಿಕ ಕಾರ್ಯಾಚರಣೆಗಳು ಈ ಎರಡು ದೇಶಗಳ ನಡುವಿನ ಪ್ರಚ್ಛನ್ನ ಯುದ್ಧದ ಸ್ವರೂಪವನ್ನೇ ತಾಳಿವೆ. ಶಸ್ತ್ರಸಜ್ಜಿತ ಸೈನ್ಯದ ಮುನ್ನಡೆಯನ್ನು ತಡೆಗಟ್ಟಿ ಸಂಧಾನಕ್ಕೆ ಬರುವಂತೆ ಕರೆಕೊಡುವ 'ಯುದ್ಧ ನಿಲುಗಡೆ'ಯ ಇತ್ತೀಚಿನ ಪ್ರಯತ್ನವೂ ಸೇರಿದಂತೆ ಕಾಶ್ಮೀರ ಸಮಸ್ಯೆಯನ್ನು ಬಗೆಹರಿಸುವ ಯಾವ ಪ್ರಯತ್ನವೂ ಯಶಸ್ವಿಯಾಗಿಲ್ಲ.

**ಮಾರ್ಚ್ ಸಂಚಿಕೆಯಲ್ಲಿ ಮುಂದುವರೆಯುತ್ತದೆ.**

*(ಆಧಾರ : ವಿಕಾಸ ಅಧ್ಯಯನ ಕೇಂದ್ರ, ಮುಂಬಯಿ, ಇವರ ಪ್ರಕಟಣೆ 'ಫ್ಯಾಕ್ಟ್ಸ್ ಎಗೆನೆಸ್ಟ್ ಮಿಥ್ಸ್' (ಸಂ. ೬ ಮತ್ತು ೭) ಎಂಬುದರಲ್ಲಿ ರಾಮ್ ಪುನಿಯಾನಿ ಲೇಖನ).*

**ಡಾ|| ಕೆ. ಎಲ್. ಗೋಪಾಲಕೃಷ್ಣಯ್ಯ**
ನಂ. ೨೨೬೩, ೨೨ನೇ ಅಡ್ಡರಸ್ತೆ, ಬನಶಂಕರಿ ೨ನೇ ಹಂತ
ಬೆಂಗಳೂರು- ೫೬೦ ೦೭೦




*ಕನ್ನಡ ಲೇಖಕರಾದ ಶ್ರೀ ಮಿತ್ತೂರು ಅವರ ಜೀವನ ಮತ್ತು ಸಾಹಿತ್ಯಾನುಭವವನ್ನೊಳಗೊಂಡ ಆತ್ಮಕಥನ 'ನೆನಪಿನ ಬಿಂಬಗಳು' ಇತ್ತೀಚೆಗೆ ಬೆಂಗಳೂರಿನಲ್ಲಿ ಬಿಡುಗಡೆಯಾಯಿತು.*




**ಡಾ.** ಬಂಜಗೆರೆ ಜಯಪ್ರಕಾಶ್ ಅವರು ಕನ್ನಡ ರಾಷ್ಟ್ರೀಯತೆ ಎನ್ನುವ ಪ್ರೌಢ ಪ್ರಬಂಧದಲ್ಲಿ ಸಾಮಾಜಿಕ, ಸಾಂಸ್ಕೃತಿಕ ಬೇರುಗಳ ರಾಜಕೀಯಾರ್ಥಿಕ ಅಧ್ಯಯನವನ್ನು ನಡೆಸಿದ್ದಾರೆ. ಈ ಕೃತಿಗೆ ಹಂಪಿಯ ಕನ್ನಡ ವಿಶ್ವವಿದ್ಯಾಲಯ ಡಾಕ್ಟರ್ ಆಫ್ ಲಿಟರೇಚರ್ ಪದವಿಯನ್ನು ನೀಡಿ ಗೌರವಿಸಿದೆ. 'ಕನ್ನಡ ರಾಷ್ಟ್ರೀಯತೆ' ಎನ್ನುವ ಈ ಶೀರ್ಷಿಕೆಯೇ ಸುಮಾರು ದಿನಗಳು ನನ್ನ ತಲೆಯೊಳಕ್ಕೆ ಹೋಗಲಿಲ್ಲ. ಕನ್ನಡ ರಾಷ್ಟ್ರೀಯತೆ ಎಂದರೆ ಏನು ? ಕನ್ನಡ ಭಾಷೆಯು ಸಾಮಾಜಿಕ, ಸಾಂಸ್ಕೃತಿಕ ಮತ್ತು ಆರ್ಥಿಕ ವಿಶ್ಲೇಷಣೆಗೆ ಮಾತ್ರ ಸೀಮಿತವೆ ? ಕನ್ನಡಕ್ಕೂ ಇತರ ದ್ರಾವಿಡ ಭಾಷೆಗಳಿಗೂ ಮತ್ತು ದ್ರಾವಿಡ ಸಮುದಾಯಗಳಿಗೂ, ಅಂತೆಯೇ ಅನಂತರ ಇದೇ ನೆಲದಲ್ಲಿ ಹುಟ್ಟಿದ ಅನೇಕ ದೇಶೀಯ ಸಾಂಸ್ಕೃತಿಕ, ಸಾಮಾಜಿಕ ನೆಲೆಗಳಿಗೂ ಸಂಬಂಧವಿಲ್ಲವೆ ? ಇದ್ದರೆ, ಕನ್ನಡವನ್ನು ಇವುಗಳಿಂದ ಬೇರ್ಪಡಿಸಲು ಹೇಗೆ ಸಾಧ್ಯ ? ಬಂಜಗೆರೆ ಅವರು ನಡೆಸಿರುವ ವಿಶ್ಲೇಷಣೆಗೂ ಮೀರಿದ ರಾಷ್ಟ್ರೀಯತೆ ಒಂದು ಇರಬಹುದೇ ? ಹಲವು ಧರ್ಮ, ಜಾತಿ, ವರ್ಗಗಳ ಸಂಗಮವಾಗಿರುವ ಈ ನೆಲದಲ್ಲಿ ಎಲ್ಲದಕ್ಕೂ ಮೀರಿದ ಒಂದು ಒಗ್ಗಟ್ಟು 'ರಾಷ್ಟ್ರೀಯತೆ' ಎಂಬ ಪರಿಕಲ್ಪನೆಯನ್ನು ಗಟ್ಟಿಯಾಗಿಸಬಹುದೆ ? ಚರಿತ್ರೆಯಲ್ಲಿ ಅಂತಹ ಪ್ರಯತ್ನಗಳು ಆಗಾಗ ಕಂಡುಬಂದರೂ ಅವುಗಳನ್ನು ಪಟ್ಟಭದ್ರಹಿತಾಸಕ್ತಿಗಳು ಕಾಲಕಾಲಕ್ಕೆ ಬೇರೆ ಬೇರೆ ದಿಕ್ಕುಗಳಿಗೆ ಕಟ್ಟಿನಿಲ್ಲಿಸಿದ್ದೆ ಹೆಚ್ಚು. ರಾಷ್ಟ್ರೀಯತೆ ಕೇವಲ ಒಂದು ಭಾವನಾತ್ಮಕ ಪರಿಕಲ್ಪನೆ ಆಗಬಾರದು. ಭೌತಿಕ ಮತ್ತು ಮಾನವೀಯ ನೆಲೆಯಿಂದ ಗಟ್ಟಿಗೊಂಡರೆ ಮಾತ್ರ ಒಂದು ರಾಷ್ಟ್ರ ಒಗ್ಗಟ್ಟಾಗಿ ಬಲಗೊಳ್ಳಬಹುದು.

ಭಾರತದಂತಹ ದೇಶದಲ್ಲಿ ಹಲವು ಧರ್ಮ, ವರ್ಗ, ಭಾಷೆ ಮತ್ತು ಸಾಂಸ್ಕೃತಿಕತೆಗಳ ನಡುವೆ ಕನ್ನಡ ರಾಷ್ಟ್ರೀಯತೆ ಎಂಬ ಆಲೋಚನೆ ಏನನ್ನು ತೋರ್ಪಡಿಸಬಹುದು ? ಇದನ್ನು ನಿಜವಾಗಿಯೂ ಬೇರ್ಪಡಿಸಲು ಸಾಧ್ಯವೇ? ಅಥವಾ ಜಯಪ್ರಕಾಶ್ ಅವರು ೨೦ ಅಧ್ಯಾಯಗಳಲ್ಲಿ ಗುರುತಿಸಿರುವ ಕಾಲಘಟ್ಟಗಳು ನಿಜವಾಗಿಯೂ ಕನ್ನಡ ರಾಷ್ಟ್ರೀಯತೆಯಾಗುತ್ತದೆಯೇ ? ದೇಶಕ್ಕೆ ಸ್ವಾತಂತ್ರ್ಯ ಬರುವುದಕ್ಕೆ ಮುಂಚಿನಿಂದಲೂ ಕಾಣಿಸಿಕೊಂಡಿದ್ದ ಭಾಷಾವಾರು ಗಡಿಗಳು ಸ್ವಾತಂತ್ರ್ಯ ಬಂದನಂತರ ಇನ್ನಷ್ಟು ಎಚ್ಚರದಿಂದ ಭಾಷೆಗಳನ್ನಾಧರಿಸಿ ರಾಜ್ಯದ ಗಡಿಗಳೆಂಬ ಬೇಲಿಗಳನ್ನು ಕಟ್ಟಿಕೊಂಡವು. ಭಾಷೆಗಳ ಹೆಸರಿನಲ್ಲಿ ಈಗಲೂ ಅದು ಮುಂದುವರಿಯುತ್ತಿರುವುದು ಧರ್ಮ, ಭಾಷೆ, ಸಂಸ್ಕೃತಿ, ರಾಷ್ಟ್ರೀಯತೆ ಎನ್ನುವ ಇಂತಹ ಗಡಿಗಳಿಂದಲೇ ಎನ್ನಬಹುದೆ ?

ಆಧುನಿಕ ರಾಷ್ಟ್ರಗಳು ಊಳಿಗಮಾನ್ಯ, ವಿಭೇದೀಕರಣ, ಮತ್ತು ಬಂಡವಾಳಶಾಹಿಯ ಉಗಮದೊಂದಿಗೆ ತಾಳಿ ಹಾಕಿಕೊಂಡಿರುವುದರ ಜೊತೆಗೆ ಇಂದಿನ ಖಾಸಗೀಕರಣ, ಉದಾರೀಕರಣ ಮತ್ತು ಜಾಗತೀಕರಣ ನೀತಿಯಿಂದ ಈ ಕಲ್ಪನೆಗಳು ಬರುವ ದಿನಗಳಲ್ಲಿ ಏನಾಗಬಹುದು ? ಈಗ ಅಂತಹ ಒಂದು ಸಂದಿಗ್ಧ ಪರಿಸ್ಥಿತಿ ಮೂರನೆ ಜಗತ್ತಿನ ರಾಷ್ಟ್ರಗಳಲ್ಲಿ ತಲೆದೋರಿದೆ. ಇಂತಹ ಹೊತ್ತಿನಲ್ಲಿ ಜಯಪ್ರಕಾಶ್ ಈ ಪ್ರಬಂಧದಲ್ಲಿ ಒಂದು ದೊಡ್ಡ ಕಸರತ್ತನ್ನೇ ಮಾಡಿದ್ದಾರೆ. ಕರ್ನಾಟಕದ ಚರಿತ್ರೆಯುದ್ದಕ್ಕೂ ಕಾಲಕಾಲಕ್ಕೆ ವಿಕಾಸಗೊಂಡಿರುವ ಕ್ರಮವನ್ನು ವಿವರಿಸಿ, ಎಲ್ಲವನ್ನೂ ಒರೆಗೆ ಹಚ್ಚಿ ಚಾರಿತ್ರಿಕವಾಗಿ, ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಮತ್ತು ರಾಜಕೀಯವಾಗಿ ವಿಶ್ಲೇಷಿಸಿರುವುದನ್ನು ಈ ಪ್ರಬಂಧದಲ್ಲಿ ನೋಡಬಹುದಾಗಿದೆ.

**ಕನ್ನಡ ರಾಷ್ಟ್ರೀಯತೆ**

ಡಾ॥ ಬಂಜಗೆರೆ ಜಯಪ್ರಕಾಶ್

**ಕ್ರಾಂತಿಸಿರಿ ಪ್ರಕಾಶನ**
ಬೆಂಗಳೂರು

*ಪುಟ. ೩೮೯ ಬೆಲೆ: ರೂ. ೧೬೦*

ಈ ಕೃತಿಯಲ್ಲಿನ ಇಪ್ಪತ್ತು ಅಧ್ಯಾಯಗಳಲ್ಲಿ ಕ್ರಿ. ಶ. ಒಂದನೆಯ ಶತಮಾನದಿಂದ ಇತ್ತೀಚಿನ ಕರ್ನಾಟಕದ ಏಕೀಕರಣದವರೆಗೆ ಇತಿಹಾಸದ ಪ್ರಮುಖ ಘಟ್ಟಗಳ ಚಾರಿತ್ರಿಕ ಹಿನ್ನೆಲೆಯನ್ನು ಗುರುತಿಸಲಾಗಿದೆ. ಕರ್ನಾಟಕ, ಕನ್ನಡ ವ್ಯಾಪ್ತಿಯಲ್ಲಿ ನಡೆದ ಉತ್ಪಾದನೆ, ಆರ್ಥಿಕ ಸ್ಥಿತಿಗತಿ ಹಾಗೂ ಹಂಚಿಕೆಯ ಸ್ವರೂಪಗಳು ಇಲ್ಲಿ ರೂಪುಗೊಂಡಿವೆ. ಜಯಪ್ರಕಾಶ್ ಅವರು ಕನ್ನಡ ರಾಷ್ಟ್ರೀಯತೆ ಅಥವಾ ಕನ್ನಡ ನೆಲೆಯ ೨೦ ಶತಮಾನಗಳ ಚಾರಿತ್ರಿಕ, ಸಾಂಸ್ಕೃತಿಕ ನೆಲೆಗಟ್ಟುಗಳನ್ನು ವಿಶ್ಲೇಷಿಸುತ್ತಾ ಅದನ್ನು ಕನ್ನಡ ರಾಷ್ಟ್ರೀಯತೆ ಎಂದು ಗುರುತಿಸಿರುವುದು ಈ ಪ್ರಬಂಧದ ವಿಶೇಷವಾದರೂ ಅದು ಸರಿಯೆ ಅಥವಾ ಇದಕ್ಕೂ ಮೀರಿದ ಯಾವುದಾದರೂ ದಾರಿಗಳು ಇವೆಯೆ ಎನ್ನುವ ಪ್ರಶ್ನೆ ಏಳುತ್ತದೆ.

ಪ್ರೊ॥ ಮಲ್ಲೇಪುರಂ ಜಿ. ವೆಂಕಟೇಶ್ ಅವರು 'ಕನ್ನಡ ರಾಷ್ಟ್ರೀಯತೆಯೆಂಬ ಸಾಂಸ್ಕೃತಿಕವಾದ ಮುಖ್ಯ ಪರಿಕಲ್ಪನೆಯನ್ನು ಕನ್ನಡದಲ್ಲಿ ಮೊಟ್ಟಮೊದಲ ಬಾರಿಗೆ ವಿಶ್ಲೇಷಣೆಗೆ ಒಡ್ಡಿದೆ... ಅದು ವರ್ತಮಾನದ ಗತಿಶೀಲತೆಯ ನೆಲೆಗೆ ಹೊಸ ಉಪಕ್ರಮವೊಂದನ್ನು ಜಯಪ್ರಕಾಶ್ ಹಾಕಿಕೊಟ್ಟಿದ್ದಾರೆ' ಎಂದರೆ ಡಾ॥ ಜಿ. ರಾಮಕೃಷ್ಣ ಅವರು 'ಬೌದ್ಧಿಕ ಶಿಸ್ತನ್ನು ಕಾಪಾಡಿಕೊಂಡು ಉದ್ವೇಗರಹಿತವಾದ ಒಂದು ಸಮಗ್ರ ವಿವೇಚನೆಯನ್ನು ಜಯಪ್ರಕಾಶ್ ಈ ಪ್ರಬಂಧದಲ್ಲಿ ಮಂಡಿಸಿದ್ದಾರೆ' ಎನ್ನುತ್ತಾರೆ. ಒಟ್ಟಿನಲ್ಲಿ ಈ ಪ್ರಬಂಧದ ಕಲ್ಪನೆಯಿಂದ ಸಾಮಾಜಿಕ, ಸಾಂಸ್ಕೃತಿಕ ಮತ್ತು ರಾಜಕೀಯಾರ್ಥಿಕ ವಿಶ್ಲೇಷಣೆಯ ಜೊತೆಗೆ ಇನ್ನೂ ಅನೇಕ ರೀತಿಯ ಅವಲೋಕನಗಳು ಹುಟ್ಟಿಕೊಳ್ಳುವುದಕ್ಕೆ ಸಾಧ್ಯ ಎನ್ನುವುದನ್ನು ಜಯಪ್ರಕಾಶ್ ತೋರಿಸಿಕೊಟ್ಟಿರುವುದು ಈ ಪ್ರಬಂಧದ ವಿಶೇಷ.

**ಎಂ. ವೆಂಕಟಸ್ವಾಮಿ**
೫೭ A, ಸಾಯಿ ಲೋಟಸ್ ಬಡಾವಣೆ, ಚನ್ನಸಂದ್ರ ಸಮೀಪ
ಸುಬ್ರಮಣ್ಯಪುರ ಅಂಚೆ, ಬೆಂಗಳೂರು - ೫೬೦ ೦೬೧

## ಸಾದರ ಸ್ವೀಕಾರ

ಮುಮ್ತಾಜಳ ಮಹಲು (ಕವನ ಸಂಕಲನ)
*ಕೆ. ಷರೀಫಾ*
ಪುಟ : ೭೨ ಬೆಲೆ : ರೂ. ೩೫

ಅಂಡಮಾನ್ ಕನಸು (ಪ್ರವಾಸ ಕಥನ)
*ಡಾ॥ ರಹಮತ್ ತರೀಕೆರೆ*
ಪುಟ : ೧೫೬ ಬೆಲೆ : ರೂ. ೬೦

*ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು*
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ., ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೧

**ಪಂಚಿಗ್ಯಾಂಗ್ ಮತ್ತು ಪಿನ್‌ಕೋಡ್**
(ಮಕ್ಕಳ ಕಥೆಗಳು) *ನೀಲಾಂಬರಿ*
**ಪುಟ : ೪೮ ಬೆಲೆ : ರೂ. ೨೦**
**ಇಂಚರ ಪ್ರಕಾಶನ**, ೧೬೭, ೧೦ನೇ ಮೈನ್, ೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ, ಬೆಂಗಳೂರು - ೫೮

**ವಾಸನ್ ಈಯರ್ ಬುಕ್**
**ಪುಟ : ೬೭೪ ಬೆಲೆ : ರೂ. ೮೫**
**ವಾಸನ್ ಪಬ್ಲಿಕೇಷನ್ಸ್**
ಡಾ॥ ಟಿ. ಎಂ. ಸಿ. ರಾಯನ್ಸ್ ರಸ್ತೆ
ಬೆಂಗಳೂರು - ೫೬೦ ೦೫೩

**ನೈಜ ಸ್ವರಾಜ್ಯದ ರೂಪುರೇಷೆ** (ಭಾರತದ ಪುನರ್ನಿರ್ಮಾಣಕ್ಕೆ ಮಾರ್ಗ ಸೂಚಿ)
*ಅನು : ದೇವಸೂರ ಗಿರೀಶ*
**ಪುಟ : ೬೦ ಬೆಲೆ : ರೂ. ೧೫**
**ಆಜಾದಿ ಬಚಾವೋ ಆಂದೋಲನ**, ನಂ. ೧೬೬, ಅಕ್ಕಿಪೇಟೆ ಮುಖ್ಯರಸ್ತೆ, ಬೆಂಗಳೂರು - ೫೩

**ಸ್ವರ್ಗ ಸಿಂಹಾಸನ** (ಪೌರಾಣಿಕ ನಾಟಕ) *ಕೆ. ಪಿ. ಸ್ವಾಮಿ*
**ಪುಟ : ೮೦ ಬೆಲೆ : ರೂ. ೩೦**
**ಭಾಗ್ಯಲಕ್ಷ್ಮಿ ಪ್ರಕಾಶನ**, ೮೭, ೩ನೇ ಕ್ರಾಸ್
೪ನೇ ಬ್ಲಾಕ್, ಬನಶಂಕರಿ ೩ನೇ ಸ್ಟೇಜ್, ೩ನೇ ಘಟ್ಟ,
ಬೆಂಗಳೂರು - ೫೬೦ ೦೮೫

**ಹಣತೆ** (ಪದ್ಯಗಳು) *ಬಿ. ಚೆನ್ನಬಸವಯ್ಯ*
**ಪುಟ : ೯೮ ಬೆಲೆ : ರೂ. ೪೦**
**ಹೊಂಬಾಳೆ ಪ್ರಕಾಶನ**, ಹುಳಿಯಾರು
ತುಮಕೂರು ಜಿಲ್ಲೆ

**ವಿಧುರನ ಒಸಗೆ** (ಕರಟಿಗಳು)
*ಹಾಲಾಡಿ ಮಾರುತಿರಾವ್*
**ಪುಟ : ೭೦ ಬೆಲೆ : ರೂ. ೪೦**
**ಹಾಲಾಡಿ ಪ್ರಕಾಶನ**, ನಂ.೩೫೧, ಮ್ಹಾಳಸಾ ನಿವಾಸ, ಅಬ್ಬಿಗೆರೆ ಬಡಾವಣೆ, ಚಿಕ್ಕಬಾಣಾವರ ರಸ್ತೆ, ಬೆಂಗಳೂರು - ೫೬೦ ೦೯೦

**ಕಾಫಿ ಬೆಳೆಗಾರರಿಂದ ಒಂದು ಶೋಕ ಪತ್ರ**
*ಪಿ. ವಿ. ಲೋಕೇಶ್*
**ಪುಟ : ೨೨ ಬೆಲೆ : ರೂ. ೫**
**ಸಿರಿವಾಸೆ ಕಾಫಿ ಬೆಳೆಗಾರರ ಸಂಘ**, ಸಿರಿವಾಸೆ ಅಂಚೆ, ಚಿಕ್ಕಮಗಳೂರು ಜಿಲ್ಲೆ.

ತಿಳಿವು

# ಪ್ರಕೃತಿ ಸಂಸ್ಕೃತಿಯ ಅಗತ್ಯ

ಸೃಷ್ಟಿಯ ಎಲ್ಲ ಜೀವಿಗಳಿಗೂ ಪೂರಕವಾಗಿರುವ ಸುಂದರ ಪ್ರಕೃತಿಯನ್ನು ಮನುಷ್ಯ ಮಲಿನಗೊಳಿಸುತ್ತಿರುವಷ್ಟು ಮತ್ತಾವ ಜೀವಿಗಳೂ ಮಾಡುತ್ತಿಲ್ಲ. ವಾಯುಮಾಲಿನ್ಯ, ಜಲಮಾಲಿನ್ಯ, ಪರಿಸರಮಾಲಿನ್ಯ, ಕಾಡುನಾಶ, ವನ್ಯಪ್ರಾಣಿಗಳ ಹತ್ಯೆ, ಅಗತ್ಯಕ್ಕಿಂತ ಹೆಚ್ಚಾಗಿ ಭೂಮಿಯನ್ನು ಬಗೆಯುವ ಗುಣ ಏನೆಲ್ಲವನ್ನೂ ಯಾವ ಎಗ್ಗೂ ಇಲ್ಲದೆ ಮನುಷ್ಯ ಧಾವಂತದಿಂದ ಮಾಡುತ್ತಿದ್ದಾನೆ ಎಂದು ನೆನೆದರೇ ಆತಂಕವಾಗುತ್ತದೆ.

ಪ್ರಪಂಚದ ಎಲ್ಲ ನದಿಗಳ ನೀರನ್ನು ಒಮ್ಮೆ ಪ್ರಯೋಗಾಲಯದಲ್ಲಿ ಪರೀಕ್ಷೆಗೆ ಒಳಪಡಿಸಲಾಯ್ತು. ಕಲುಷಿತವಾಗದೆ ದೀರ್ಘಕಾಲದವರೆಗೆ ಉಳಿದದ್ದು ಗಂಗಾ ನದಿಯ ನೀರು. ಬಹುಶಃ ಪ್ರಪಂಚದಲ್ಲೇ ಅತಿ ಎತ್ತರವಾದ ಪರ್ವತ ಶಿಖರಗಳಿಂದ ಹರಿದುಬರುವ ಆ ನದಿಯ ನೀರಿನಲ್ಲಿ ಅನೇಕ ಜೀವಸತ್ವಗಳು ಮಿಳಿತವಾಗಿರುವುದು ಸಹಜವೇ. ಆದರೆ ಅಂಥ ಸತ್ವಭರಿತ ನದಿಯ ನೀರೂ ಭಾರತೀಯರ ಕೈಲಿ ಏನಾಗಿದೆ ? ನಾಗರಿಕತೆಯ ಹುಚ್ಚಿನಲ್ಲಿ ನಾವು ವಿಸರ್ಜಿಸುವ ಎಲ್ಲ ಕಲ್ಮಷಗಳೂ ಸೇರಿ ವಿಷಮಯವಾಗಿದೆ. ಗಂಗಾನದಿಯ ನೀರಿನ ಗತಿಯೇ ಇದಾಗಿರಬೇಕಾದರೆ ಉಳಿದ ನದಿಗಳ ಚಿಂತಾಜನಕ ಸ್ಥಿತಿಯನ್ನು ಹೇಳುವುದೇ ಬೇಡ. ಮಾಲಿನ್ಯವೇ ಭಾರತೀಯರ ಬದುಕಾಗಿದೆಯೋ ಇಲ್ಲಾ ಭಾರತೀಯರ ಬದುಕೇ ಮಲಿನವಾಗಿದೆಯೋ ಎಂಬುದು ಒಂದು ಚಿದಂಬರ ರಹಸ್ಯ.

'ಬ್ರಹ್ಮ ಸತ್ಯಂ-ಜಗನ್ಮಿಥ್ಯಾ' ಎಂದು ಹೇಳಿದ ಶಂಕರಮುಂತಾದವರ ಪರಂಪರೆ ಪ್ರಕೃತಿಯನ್ನು, ಪ್ರಾಣಿಗಳನ್ನು ಸಂರಕ್ಷಿಸುವ ಬದಲು ಅದನ್ನು ಮಿಥ್ಯೆ ಎಂದು ಕಡೆಗಣಿಸಿತು. ಹೀಗೆ ಅದು ಉತ್ಪಾದನೆಗೆ ಕಾರಣವಾದವುಗಳನ್ನು ಸಂರಕ್ಷಿಸುವ ಸಂಸ್ಕೃತಿಗೆ ಬೆನ್ನು ಮಾಡಿತು. ತಾನು ಮಾತ್ರ "ಶ್ರೇಷ್ಠ, ಮುಕ್ತಿಗೆ ಅರ್ಹ" ಎಂದು ಮಿಕ್ಕ ಜೀವಚರಗಳನ್ನು ಕಡೆಯಾಗಿ ಕಂಡು ಮನುಷ್ಯ ತನಗೆ ಅರಿವಿಲ್ಲದಂತೆಯೇ ಅಪಾಯಗಳನ್ನು ತಂದುಕೊಳ್ಳುತ್ತಿದ್ದಾನೆ.

ಪ್ರಕೃತಿಮಾತೆ ಉದಾರವಂತೆ. ಅವಳದು ಸದಾ ಕೊಡುಗೈ. ಮನುಷ್ಯ ಪ್ರಕೃತಿಯ ಮೇಲೆ ಎಷ್ಟೇ ಅತ್ಯಾಚಾರಗೈದರೂ ಅದಕ್ಕೆ ಪ್ರತಿಯಾಗಿ ಆಕೆ ಕೊಡುಗೈನವಳೇ ಆಗಿದ್ದಾಳೆ. ಇಡೀ ಪ್ರಪಂಚದ ಮಾನವನ ಶ್ರಮದ ಆದಾಯದಲ್ಲಿ ಅರವತ್ತು ಭಾಗವನ್ನು ಅಣ್ವಸ್ತ್ರ ಹಾಗೂ ಯುದ್ಧ ಸಾಮಗ್ರಿಗಳನ್ನು ಉತ್ಪಾದಿಸಲು ಮನುಷ್ಯ ವ್ಯಯಿಸುತ್ತಿದ್ದಾನೆ. ಹಿಂದೆ ಕಾಡು ಸ್ಥಿತಿಯಲ್ಲಿದ್ದಾಗ ಮನುಷ್ಯ ಆಯುಧಗಳನ್ನು ಜೀವರಕ್ಷಣೆಗಾಗಿ ಬಳಸುತ್ತಿದ್ದ. ಆದರೆ ಈಗ ಮನುಷ್ಯ ಸುರಕ್ಷಿತವಾಗಿದ್ದರೂ ಯಾರ ವಿರುದ್ಧ ಅಸ್ತ್ರಗಳನ್ನು ಅಷ್ಟೊಂದು ಹಣ ಹಾಕಿ ತಯಾರಿಸುತ್ತಿದ್ದಾನೆ ? ಮನುಷ್ಯ ಮನುಷ್ಯನಿಗೇ ಶತ್ರುವಾಗಿ ಪ್ರಾಣಿಗಳಿಗಿಂತ ಕ್ರೂರವಾಗಿ ನಡೆದುಕೊಳ್ಳುತ್ತಿದ್ದಾನೆ. ಇಂಥ ಕ್ರೌರ್ಯದ ನಡುವೆಯೂ ಪ್ರಕೃತಿ ಕೊಡುಗೈನವಳೇ ಆಗಿದ್ದಾಳೆ. ಅವಳ ಔದಾರ್ಯಕ್ಕೆ ಎಣೆ ಇದೆಯೇ ?

ಪ್ರಕೃತಿ ಎಂಥ ಉದಾರವಂತೆ ಎನ್ನುವುದಕ್ಕೆ ನನ್ನ ಮನೆಯ ೧೫ X ೧೫ ಅಡಿಯ ಪುಟ್ಟ ಉದ್ಯಾನ ಸಾಕ್ಷಿಯಾಗಿದೆ. ಅಷ್ಟು ಪುಟ್ಟ ಉದ್ಯಾನದಲ್ಲಿ ಅದೆಷ್ಟು ಕರುಣಿಸಿದ್ದಾಳೆ ! ಇರುವ ಪುಟ್ಟ ಮರಗಿಡಗಳ ಸುತ್ತ ಎಷ್ಟೊಂದು ಜೀವಿಗಳು ನೆರೆಯುತ್ತವೆ ! ಹೂವಿನಿಂದ ಹೂವಿಗೆ ಹಾರುವ, ಪರಾಗಸ್ಪರ್ಶಕ್ಕೆ ಕಾರಣವಾಗುವ ಬಣ್ಣ ಬಣ್ಣದ ಚಿಟ್ಟೆಗಳು; ಅವುಗಳ ಒನಪು ವೈಯಾರಗಳು; ವಿವಿಧ ಬಣ್ಣ ಬೆಡಗುಗಳಿಂದ, ಪರಿಮಳಗಳಿಂದ ಕಂಗೊಳಿಸುವ ಬಗೆಬಗೆಯ ಹೂಗಳು; ಹಸಿರಿನ ಹಿನ್ನೆಲೆಯಲ್ಲಿ ವಿವಿಧ ಚಿತ್ತಾರಗಳನ್ನು ಹೊತ್ತ ವೈವಿಧ್ಯಮಯ ಸಸ್ಯಗಳು; ಮರದ ಮರೆಯಲ್ಲಿ ಅವಿತು ತಮ್ಮ ಸುಮಧುರ ಕಂಠದಿಂದ ಹಾಡುವ ಅಪರೂಪದ ಹಕ್ಕಿಗಳ ಗಾನ ಮೇಳ. ಅವುಗಳ ಆಕಾರ, ಬಣ್ಣ ಬೆಡಗುಗಳು ಒಂದೇ ಎರಡೇ ! ಭೂಮಿಯ ಒಳಗೇ ಇದ್ದು ಮರಗಿಡಗಳಿಗೆ ಪೂರಕವಾಗಿರುವ ಎರೆಹುಳುಗಳ ವಿಸ್ಮಯಲೋಕ ! ಗಮನಿಸುತ್ತಿದ್ದರೆ ಪ್ರಕೃತಿಯ ವೈವಿಧ್ಯತೆಯ ನಡುವೆಯೂ ಇರುವ ಈ ಸಾಮರಸ್ಯದ ಮಧುರಬಾಂಧವ್ಯ ಬೆರಗು ಹುಟ್ಟಿಸುತ್ತದೆ. ಅರಳಿದ ಹೂಗಳ ಮೇಲೆ ನವಿರಾಗಿ ಕುಳಿತ ಹಿಮ ಮಣಿಗಳ ಮಾಲೆ; ಸೂರ್ಯರಶ್ಮಿಗಳಿಂದ ಹೊಳೆದು ಕಂಗೊಳಿಸುವ ವಿಸ್ಮಯಲೋಕ ! ತನ್ಮಯತೆಯಿಂದ ಆಸ್ವಾದಿಸುವ ಮನದಿಂದ ಒಮ್ಮೆಲೇ ಹೊಮ್ಮುತ್ತದೆ,

**ಯಾವ ಗುಡಿ ಚರ್ಚು ಮಸೀದಿ**
**ನನಗೇಕೆ ಬೇಕು**
**ಮನೆಯ ಅಂಗಳದಿ ಅರಳಿರುವ**
**ಹೂ ಒಂದೆ ಸಾಕು –**

ಎನ್ನುವ ಉದ್ಗಾರ. ಈ ಉದ್ಗಾರವನ್ನು ಹೊಮ್ಮಿಸುವ ಹೂಗಳ ಸೌಂದರ್ಯವನ್ನು ಕಂಡಷ್ಟು ಕಾಣಬೇಕೆನ್ನುವ ಆಕರ್ಷಣೆ ! ಈ ಹಿನ್ನೆಲೆಯಲ್ಲಿ ಹೂ ಕುಯ್ಯುವ ಪೂಜಾರಿಯನ್ನು ಕಂಡ ಕುವೆಂಪು,

**"ಬಿಡೊ ಅಲ್ಲಿರಲಿ ಆ ಹೂವು !**
**ನೀ ಸೃಷ್ಟಿಸಲಾರದ ಚಲುವಿಗೆ**
**ನಿನ್ನಿಂದೇತಕೆ ಸಾವು ?"**

ಎಂದು ಹೇಳುವ ಮೂಲಕ ಜೀವಂತ ದೇವರನ್ನು ಹೂವಿನಲ್ಲಿ ಕಂಡು ಪ್ರಕೃತಿಯ ಸೌಂದರ್ಯದ ರಸಾನುಭೂತಿಯನ್ನು ಸವಿಯುವ ರಸದೌತಣಕ್ಕೆ ಕರೆಯುತ್ತಾರೆ.

"... ಅವಲೋಕಿಸಿದರೆ ನಿಸರ್ಗದ ಅಚ್ಚರಿಯ ಜೀವ ಜಾಲ ಗೋಚರವಾಗುತ್ತದೆ. ಅಸಂಖ್ಯಾತ ಜಾತಿಯ ಸಸ್ಯಗಳ ಹಸಿರು ಹೊದಿಕೆ; ಪೊದೆಗಳಲ್ಲಿನ ಹಕ್ಕಿಗಳ ಸುಮಧುರ ಗಾನ; ರೆಕ್ಕೆ ಬಡಿದು ಚಲಿಸುವ ಕೀಟ ಸಮೂಹ; ತೇವಮಣ್ಣಿನ ಮೇಲೆ ಚಿತ್ತಾರ ಬರೆವ ಹುಳುಗಳು; ಅನೇಕ ಬಗೆಯ ಜೀವಿಗಳು; ಒಂದಕ್ಕೊಂದು ಭಿನ್ನ. ಆದರೂ ಒಂದನ್ನು ಮತ್ತೊಂದು ಅವಲಂಬಿಸಿರುವ ಸಂಕೀರ್ಣ ಜೀವಜಾಲ. ಪ್ರತಿಯೊಂದೂ ಸ್ವತಂತ್ರ ಜೀವಿ... ಈ ಬಗೆಯ ಜೀವನದಲ್ಲಿ ಸೊಂಪಿದೆ, ವೈಭವವಿದೆ, ಒಂದು ಜೀವಿ ಮತ್ತೊಂದು ಜೀವಿಗೆ ಉಸಿರು ನೀಡುವ ಸೃಷ್ಟಿಯ ನಿಗೂಢವಿದೆ... ಒಂದು ಸರಳ ಜೀವ ಬಿಂದುವಿನಿಂದ ಅಸಂಖ್ಯಾತ ಸುಂದರ ಸಂಕೀರ್ಣ ಸೋಜಿಗದ ಜೀವಿಗಳು ವಿಕಾಸವಾಗಿವೆ, ವಿಕಾಸವಾಗಲಿವೆ," ಎನ್ನುವ ಚಾರ್ಲ್ಸ್ ಡಾರ್ವಿನ್ನನ ಈ ಸೃಷ್ಟಿಯ ಸೂಕ್ಷ್ಮ ಅಭಿವ್ಯಕ್ತಿ ಅದ್ಭುತವಾದುದು.

ಜ. ಹೊ. ನಾರಾಯಣಸ್ವಾಮಿ
ವಕೀಲರು, "ಮಾನವ" ೨೦೬೪/ಎ
ಉತ್ತರ ಬಡಾವಣೆ
ಹಾಸನ - ೫೭೩ ೨೦೧.

## ಬರ

ಮರುಭೂಮಿಯಲ್ಲಿ
ಎಲೆಯುದುರಿ ಒಣಗಿದ
ಒಂಟಿ ಮರ
ಮೇಲೆ ಹಸಿದ ಏಕಾಂಗಿ ಹಕ್ಕಿ
ಕಣ್ಣೊಳಗೆ ಒಂದೆ ಬಿಂಬ
ಮರಿ ಹಕ್ಕಿಯ ಖಾಲಿ ಹೊಟ್ಟೆ
ಬರಿದಾದ ತಟ್ಟೆ.

* * *



ದೂರದ ಬೆಂಗಾಡಿನ
ಮರದ ಗೂಡೊಳಗೆ
ಹಸಿ ಮಾಂಸದ ಮುದ್ದೆ
ಬ್ರಹ್ಮಾಂಡವನ್ನೆ ನುಂಗುವಂತೆ
ತೆರೆದ ಚೆಂಬಾಯಿ
ಉಗುಳುತ್ತಿದೆ ಒಳಬೆಂಕಿ
ಹುಟ್ಟಿಸಿದ ದೇವ
ಹುಲ್ಲೂ ಮೇಯಿಸಲಾರ
ಯಾಕೆಂದರೆ ಈಗ
ಭೂಮಿಗೇ ಬರ.

ರವಿಶಂಕರ ಶೆಟ್ಟಿ ಒಡ್ಡಂಬೆಟ್ಟು
ಉಪನ್ಯಾಸಕ, ಸರಕಾರಿ ಪದವಿ ಪೂರ್ವ ಕಾಲೇಜು
ಕನ್ಯಾನ - ೫೭೪ ೨೭೯, ಬಂಟ್ವಾಳ (ತಾ) ದ. ಕ. ಜಿಲ್ಲೆ

HOSATHU Kannada Monthly / February 2002 Rs. 10
RNI Regn. No. KARKAN/1999/614 REGD. CPMG / KA / BGE – 7 / 2002 Licenced to post without prepayment. Licence No. WPP-14



Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore-560 058 and Published by him for Navakarnataka Publications (P) Ltd., Embassy Centre, Crescent Road, P. B. 5159, Bangalore-560 001. Chief Editor : Dr. G. Ramakrishna